# ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಸಮುದಾಯಗಳು: ಒಂದು ಸಾಮಾಜಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಕೆ. ಬಾಬು ಕಾಮಟಿ

ಮಾರ್ಗದರ್ಶಕರು
ಡಾ. ತಾರಿಹಳ್ಳಿ ಹನುಮಂತಪ್ಪ
ಸಹಾಯಕ ಪ್ರಾಧ್ಯಾಪಕರು






ಮಾನವಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೧೭

# ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಸಮುದಾಯಗಳು: ಒಂದು ಸಾಮಾಜಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ಕೆ. ಬಾಬು ಕಾಮಟಿ**

ಮಾರ್ಗದರ್ಶಕರು

**ಡಾ. ತಾರಿಹಳ್ಳಿ ಹನುಮಂತಪ್ಪ**
ಸಹಾಯಕ ಪ್ರಾಧ್ಯಾಪಕರು



**ಮಾನವಶಾಸ್ತ್ರ ವಿಭಾಗ**
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ – ೫೮೩ ೨೭೬

೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**ಕೆ. ಬಾಬು ಕಾಮಟಿ** ಇವರು **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಸಮುದಾಯಗಳು: ಒಂದು ಸಾಮಾಜಿಕ ಅಧ್ಯಯನ** ಎನ್ನುವ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಮಾನವಶಾಸ್ತ್ರ ವಿಭಾಗದ ಮೂಲಕ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲ ಸ್ವರೂಪವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

T. Hanumanthappa

ಸ್ಥಳ : ವಿದ್ಯಾರಣ್ಯ
ದಿನಾಂಕ: 6/6/19

**ಡಾ. ತಾರಿಹಳ್ಳಿ ಹನುಮಂತಪ್ಪ**
ಸಹಾಯಕ ಪ್ರಾಧ್ಯಾಪಕರು
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

# ಪ್ರಮಾಣ ಪತ್ರ

**ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಸಮುದಾಯಗಳು: ಒಂದು ಸಾಮಾಜಿಕ ಅಧ್ಯಯನ** ಎನ್ನುವ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. **ಡಾ. ತಾರಿಹಳ್ಳಿ ಹನುಮಂತಪ್ಪ** ಸಹಾಯಕ ಪ್ರಾಧ್ಯಾಪಕರು, ಮಾನವಶಾಸ್ತ್ರ ವಿಭಾಗ ಇವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಮಹಾಪ್ರಬಂಧವನ್ನು ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Babu Kamati

ಸ್ಥಳ : ವಿದ್ಯಾರಣ್ಯ
ದಿನಾಂಕ : 06/06/2019

**ಕೆ. ಬಾಬು ಕಾಮಟಿ**
ಸಂಶೋಧಕರು
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

# ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧. ಪ್ರಸ್ತಾವನೆ
೧.೨. ಅಧ್ಯಯನದ ಉದ್ದೇಶ
೧.೩. ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ
೧.೪. ಅಧ್ಯಯನದ ವಿಧಾನ
೧.೫. ಭಾರತದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನ
೧.೬. ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನ
೧.೭. ಬುಡಕಟ್ಟು ಸಮುದಾಯಗಳ ಅರ್ಥವಿವರಣೆ
೧.೮. ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಪರಿಚಯ ಮತ್ತು ಚಾರಿತ್ರಿಕ ಹಿನ್ನೆಲೆ

ಅಧ್ಯಾಯ: ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ೧.೧. ಪ್ರಸ್ತಾವನೆ

ಪ್ರಪಂಚದಲ್ಲಿ ಅನೇಕ ಬುಡಕಟ್ಟು ಸಮುದಾಯಗಳಿವೆ. ಪ್ರತಿಯೊಂದು ದೇಶದಲ್ಲಿನ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಹಿನ್ನೆಲೆಯನ್ನು ಹೊಂದಿವೆ. ಇತಿಹಾಸ ಪೂರ್ವಕಾಲ(Pre-Historic Period)ದಿಂದಲೂ, ಜಗತ್ತಿನ ವಿವಿಧ ಜನಾಂಗ, ಸಮುದಾಯಗಳು ವಿಕಾಸಗೊಳ್ಳುತ್ತಾ ಬಂದಿವೆ. ಹಂತ-ಹಂತವಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಅಳವಡಿಸಿಕೊಳ್ಳುತ್ತಾ ಇಂದಿನ ಆಧುನಿಕ ಕಾಲದಲ್ಲಿಯೂ ವಿಕಾಸಗೊಳ್ಳುತ್ತಿವೆ. ಇತಿಹಾಸದ ದಾಖಲಾತಿಗಳಿಗೂ ಮೀರಿ ಪ್ರಪಂಚದಲ್ಲಿನ ಬುಡಕಟ್ಟು ಸಮುದಾಯಗಳು ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡಿವೆ. ಸಿಂಧೂ ಬಯಲಿನ ನಾಗರೀಕತೆ, ಈಜಿಪ್ಟ್ ನಾಗರೀಕತೆ, ಬ್ಯಾಬಿಲೋನಿಯನ್ ನಾಗರೀಕತೆ, ಚೀನಾ ನಾಗರೀಕತೆ ಇತ್ಯಾದಿಯಾಗಿ ಹಿಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ದಾಖಲಿಸಬಹುದಾದರೂ, ಬುಡಕಟ್ಟು ಸಮುದಾಯಗಳ ಪಾರಂಪರಿಕ ಜ್ಞಾನವನ್ನು ಇನ್ನೂ ಸಂಪೂರ್ಣವಾಗಿ ದಾಖಲಿಸಲು ಸಾಧ್ಯವಾಗಿಲ್ಲ. ಅಷ್ಟರಮಟ್ಟಿಗೆ ಜಗತ್ತಿನ ಬುಡಕಟ್ಟು ಸಮುದಾಯಗಳು ತಮ್ಮ ಅನನ್ಯತೆಯನ್ನು ಕಾಯ್ದುಕೊಂಡಿವೆ.

ಭಾರತ ದೇಶದಲ್ಲಿ ಬುಡಕಟ್ಟು ಸಮುದಾಯಗಳ ಬಗ್ಗೆ ಅಧ್ಯಯನ ಪ್ರಾರಂಭವಾಗಿದ್ದು ಮೂಲತಃವಾಗಿ ಬ್ರಿಟಿಷರು ಭಾರತದಲ್ಲಿ ಆಳ್ವಿಕೆ, ಆಡಳಿತವನ್ನು ಮಾಡುವಂತಹ ಸಂದರ್ಭದಲ್ಲಿ ಈ ದೇಶದ ಸಂಸ್ಕೃತಿಯ ಪರಿಚಯ ಮಾಡಿಕೊಳ್ಳುವುದು ಅಗತ್ಯವಾಯಿತು. ಆದರೆ ಬುಡಕಟ್ಟುಗಳ ಸಂಸ್ಕೃತಿಯನ್ನು ತಿಳಿಯಲು ಮುದ್ರಿತವಾದ ಬರಹಗಳಿರಲಿಲ್ಲ. ಇದರಿಂದಾಗಿ ವಿವಿಧ ಪಂಗಡಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಬ್ರಿಟೀಷ್ ಸರ್ಕಾರ ಪ್ರೋತ್ಸಾಹ ನೀಡಿ, ಮಾನವ ವಿಜ್ಞಾನಿಗಳನ್ನು, ಮಾನವಶಾಸ್ತ್ರಜ್ಞ(Anthropologists)ರನ್ನು ಈ ಕಾರ್ಯಕ್ಕೆ ನಿಯೋಜಿಸಲಾಯಿತು. ಪ್ರತಿಯೊಂದು ರಾಜ್ಯಗಳಲ್ಲಿಯೂ ಇರುವ ಎಲ್ಲಾ ಬುಡಕಟ್ಟುಗಳ ಬಗ್ಗೆಯೂ ಸ್ಥೂಲವಾದ ಅಧ್ಯಯನವನ್ನು ಕೈಗೊಳ್ಳಲಾಯಿತು. ಬುಡಕಟ್ಟುಗಳ ಅಧ್ಯಯನದೊಂದಿಗೆ ವಿವಿಧ ಜಾತಿಗಳ ಅಧ್ಯಯನವೂ ನಡೆಯಿತು.

ಇದರಿಂದಾಗಿ ಭಾರತ ದೇಶದ ಅಗೋಚರವಾದ ಬುಡಕಟ್ಟು ಸಮುದಾಯಗಳ ಪರಿಚಯವಾಯಿತು. ಮುದ್ರಣ ರೂಪದಲ್ಲಿ ಮಾಹಿತಿಯು ಲಭ್ಯವಾಗಿ ಬುಡಕಟ್ಟು ಸಮುದಾಯಗಳ ವಿಸ್ತೃತ ಅಧ್ಯಯನ ಕೈಗೊಳ್ಳಲು ಸಾಧ್ಯವಾಯಿತು.

ಡಾಲ್ಟನ್ ಅವರು ಬಂಗಾಳದ ಬುಡಕಟ್ಟುಗಳ ಬಗ್ಗೆ ಅಧ್ಯಯನ ಮಾಡಿದರು. ಜೆ.ಎಫ್.ಮೇಟ್ಸ್ ಅವರು ೧೮೬೪ರಲ್ಲಿ ನೀಲಗಿರಿಯ ಬುಡಕಟ್ಟುಗಳ ಬಗ್ಗೆ ಅಧ್ಯಯನ ಮಾಡಿದರು. ಡಾಲ್ಟನ್ ನಂತರ ಬಂಗಾಳದಲ್ಲಿ ರಿಸ್ಲೆ ಅವರು ೧೮೯೧ರಲ್ಲಿ ವಿಸ್ತೃತವಾದ ಅಧ್ಯಯನ ನಡೆಸಿದರು. ನಂತರ ಅನೇಕ ಮಾನವಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ಬುಡಕಟ್ಟುಗಳ ಸಂಶೋಧನಾ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಭಾರತದ ಸಾಂಸ್ಕೃತಿಕ ಪರಂಪರೆ ಬಹಳ ಪ್ರಾಚೀನವಾದುದು. ದೀರ್ಘವಾದುದು. ವ್ಯಾಪಕವಾದುದು, ಪ್ರಭಾವಿಯಾದುದು ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಸಂಕೀರ್ಣವಾದುದೂ ಆಗಿದೆ. ಭಾರತೀಯ ಸಂಸ್ಕೃತಿಯ ಆಳ-ಎತ್ತರಗಳನ್ನು ಮತ್ತು ಉದ್ದ-ಅಗಲಗಳನ್ನು ಪರಿವೀಕ್ಷಿಸುವುದು ಸುಲಭವೇನೂ ಅಲ್ಲ. ಭಾರತದ ಸಂಸ್ಕೃತಿಯಲ್ಲಿ ಅದರ ಪ್ರಾಚೀನತೆಯೊಂದಿಗೆ ಹಲವಾರು ಸಮೂಹಗಳ, ಪಂಥಗಳ, ಪಂಗಡಗಳ, ಮತ ಸಮೂಹಗಳ ಜೀವನಕ್ರಮಗಳು ಸಮಾವೇಶಗೊಂಡಿರುವುದನ್ನು ಕಾಣಬಹುದು. ಜೊತೆಗೆ ನೂರಾರು ವರ್ಷಗಳ ದಾಸ್ಯತೆಯ ಮತ್ತು ಇತ್ತೀಚಿನ ಆಧುನೀಕತೆಯ ಪ್ರಭಾವಗಳು ಅದರ ಮೂಲ ಸ್ವರೂಪವನ್ನು ಬದಲಿಸಲಿವೆಯೇ ಎನ್ನುವಂತಹ ಪ್ರಶ್ನೆಯೂ ನಮ್ಮನ್ನು ಈಗ ಕಾಡದಿರದು. ಈಗ ಕಾಣುವ ಸಂಸ್ಕೃತಿಯನ್ನು ನಮ್ಮ ಈ ಹಿಂದಿನ ಸಾಂಸ್ಕೃತಿಕ ಸಂಪರ್ಕ, ಸಾಂಸ್ಕೃತಿಕ ಪ್ರಸರಣ, ಸಾಂಸ್ಕೃತಿಕ ಸಂಘರ್ಷ ಹಾಗೂ ಸಾಂಸ್ಕೃತಿಕ ಸಮರತೆಗಳ ಫಲಶ್ರುತಿ ಎಂದೆನ್ನಬಹುದು.

ದೇಶವೊಂದರ ಇತಿಹಾಸವು ವ್ಯಕ್ತಿಯೋರ್ವನ ಜ್ಞಾಪಕಶಕ್ತಿಯಿದ್ದಂತೆ; ಜ್ಞಾಪಕ ಶಕ್ತಿ ನಷ್ಟವಾಗುವುದಾದರೆ ಅದರೊಂದಿಗೆ ಚಿತ್ತ ಸ್ವಾಸ್ಥ್ಯವೂ ಲುಪ್ತವಾಗುವುದು (A Nations Past is like an Individual's Memory; if Memory goes, Sanity goes with it- will Durant)ಎಂದು ಹೇಳಿರುವ ವಿಶ್ವವಿಖ್ಯಾತ ಅಮೇರಿಕನ್ ಇತಿಹಾಸಕಾರ ವಿಲ್‌ಡುರಾಂಟ್‌ನ ಮಾತು ಅಕ್ಷರಶಃ ನಿಜ. ಒಂದು ಜನಾಂಗ ತನ್ನ ಇತಿಹಾಸವನ್ನು ಮರೆಯುವುದೆಂದರೆ, ಅದು ತನ್ನ ಸಾಮಾಜಿಕ ಅಸ್ತಿತ್ವದ ವಿಶಿಷ್ಟತೆಯನ್ನು ಮರೆತಂತೆಯೇ. ಇತಿಹಾಸವನ್ನು ನೆನಪಿಸಿಕೊಳ್ಳುವುದೆಂದರೆ, ಒಂದು ಜನ ಸಮುದಾಯ ತಾನು ನಡೆದು ಬಂದ ರೀತಿಯನ್ನು, ತನ್ನ ಹಿಂದಿನ ಜೀವನ ವಿಧಾನವನ್ನು ಅರ್ಥಾತ್ ತನ್ನ ಈ ಹಿಂದಿನ ಸಾಂಸ್ಕೃತಿಕ ಪರಂಪರೆಯನ್ನು ಅರಿತುಕೊಳ್ಳುವ ಯತ್ನದಿಂದಾಗಿಯೇ ಒಂದು ಸಮುದಾಯಕ್ಕೆ ತನ್ನ 'ತನ'ದ ಅರಿವು, ತನ್ನ ವಿಶಿಷ್ಟತೆಯ ತಿಳುವಳಿಕೆ ಮೂಡುವುದು. ಸ್ವಾಮಿ ವಿವೇಕಾನಂದರು ಹೇಳಿರುವಂತೆ, ಪ್ರತಿಯೊಬ್ಬ ವ್ಯಕ್ತಿಗೆ ಮಾತ್ರವಲ್ಲ, ಪ್ರತಿಯೊಂದು ದೇಶಕ್ಕೂ ಕೂಡ ಅಂತಹ 'ತನ' ಅಥವಾ 'ಅಸ್ಮಿತೆ' ಅಥವಾ 'ರಾಷ್ಟ್ರೀಯ ಸ್ವಭಾವ'(National Ethos) ಎಂಬುದಿದೆ. ಭಾರತದ 'ರಾಷ್ಟ್ರೀಯ ಸ್ವಭಾವ'ವನ್ನು ಅರಿಯುವುದೆಂದರೆ ಭಾರತದ ಸಾಂಸ್ಕೃತಿಕ ಪರಂಪರೆಯ ತಿಳುವಳಿಕೆ ಮೂಡಿಸಿಕೊಳ್ಳುವುದು.[೧]

ಚಿತ್ರದುರ್ಗ ಜಿಲ್ಲೆಯಲ್ಲಿ ಇರುವ ಪ್ರಮುಖವಾದ ಮೂರು ಬುಡಕಟ್ಟು ಸಮುದಾಯಗಳನ್ನು ಸಂಶೋಧನಾ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ೧. ಬೇಡ, ೨. ಮೇದ(ಮೇದಾರ), ೩. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳಾಗಿವೆ. ಪ್ರಸ್ತುತ ಅಧ್ಯಯನವು ಈ ಬುಡಕಟ್ಟು ಸಮುದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಿ, ಸಾಮಾಜಿಕ ಅಧ್ಯಯನ ದೃಷ್ಟಿಕೋನದಿಂದ ಅಧ್ಯಯನವನ್ನು ಕೈಗೊಳ್ಳುವುದಾಗಿದೆ.

**೧.೨. ಅಧ್ಯಯನದ ಉದ್ದೇಶಗಳು**

೧. ಬೇಡ ಬುಡಕಟ್ಟು ಸಮುದಾಯದ ಸಾಮಾಜಿಕ ಅಧ್ಯಯನ ಮಾಡುವುದು

೨. ಮೇದ(ಮೇದಾರ) ಬುಡಕಟ್ಟು ಸಮುದಾಯದ ಸಾಮಾಜಿಕ ಅಧ್ಯಯನ ಮಾಡುವುದು

೩. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಸಾಮಾಜಿಕ ಅಧ್ಯಯನ ಮಾಡುವುದು

೪. ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸಾಮಾಜಿಕ ಜೀವನದಲ್ಲಿನ ಬದಲಾವಣೆಗಳನ್ನು ಅಧ್ಯಯನಕ್ಕೆ ಒಳಪಡಿಸುವುದು.

೫. ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಹಿನ್ನೆಲೆ ಮತ್ತು ಪ್ರಸ್ತುತ ಸಮಾಜಕ್ಕೆ ಈ ಬುಡಕಟ್ಟು ಸಮುದಾಯಗಳ ಕೊಡುಗೆಯನ್ನು ತಿಳಿಯುವುದು.

೬. ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸಮಸ್ಯೆಗಳು ಮತ್ತು ಸವಾಲುಗಳ ಬಗ್ಗೆ ಅಧ್ಯಯನ ಮಾಡುವುದು.

೭. ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಅಂಶಗಳಲ್ಲಿ ಸುಧಾರಣೆಯಾಗಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು, ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರವನ್ನು ಅಧ್ಯಯನ ಮಾಡುವುದು.

೮. ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸಾಮಾಜಿಕ ಪರಿವರ್ತನೆಗಳನ್ನು ಅಧ್ಯಯನ ಮಾಡುವುದು.

**೧.೩. ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ**

ಪ್ರಸ್ತುತ ಸಂಶೋಧನಾ ಅಧ್ಯಯನವು ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಯನ್ನು ಹೊಂದಿದೆ. ಚಿತ್ರದುರ್ಗ ಜಿಲ್ಲೆಯು ಆರು ತಾಲ್ಲೂಕುಗಳನ್ನು ಒಳಗೊಂಡಿದೆ. ೧. ಚಿತ್ರದುರ್ಗ ೨. ಹಿರಿಯೂರು ೩. ಹೊಸದುರ್ಗ ೪. ಹೊಳಲ್ಕೆರೆ ೫. ಚಳ್ಳಕೆರೆ ೬. ಮೊಳಕಾಲ್ಮೂರು ಈ ಜಿಲ್ಲೆಯಲ್ಲಿ ಪ್ರಮುಖವಾಗಿ ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಂಡಿರುವ ಬೇಡ ಬುಡಕಟ್ಟು ಸಮುದಾಯದವರು ಹೆಚ್ಚಾಗಿ ಕಂಡುಬರುತ್ತಾರೆ. ಚಿತ್ರದುರ್ಗ, ಹಿರಿಯೂರು, ಹೊಸದುರ್ಗ, ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಈ ಬುಡಕಟ್ಟು ಸಮುದಾಯಗಳು ವಿರಳವಾಗಿ ಕಂಡುಬರುತ್ತವೆ. ಮೇದ(ಮೇದಾರ) ಬುಡಕಟ್ಟು ಸಮುದಾಯವು ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಕಂಡುಬರುತ್ತಾರೆ. ಬಹುತೇಕ ಈ ಬುಡಕಟ್ಟು ಸಮುದಾಯದ ಜೀವನ ತಾಲ್ಲೂಕು

ಕೇಂದ್ರ ಮತ್ತು ಜಿಲ್ಲಾ ಕೇಂದ್ರಗಳಿಗೆ ಸೀಮಿತವಾಗಿದೆ. ಹಳ್ಳಿ, ಗ್ರಾಮೀಣ ಪ್ರದೇಶಗಳಲ್ಲಿ ವಿರಳವಾಗಿ ಕಂಡುಬರುತ್ತಾರೆ. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಚಿತ್ರದುರ್ಗ ಜಿಲ್ಲೆಯಲ್ಲಿ ಬಹುತೇಕ ವಿರಳವಾಗಿ ಕಂಡುಬರುತ್ತಾರೆ. ಚಳ್ಳಕೆರೆ ತಾಲ್ಲೂಕಿನ ಪರಶುರಾಮಪುರ ಹೋಬಳಿಯ ನಿರ್ದಿಷ್ಟ ಪ್ರದೇಶಗಳಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಚಿತ್ರದುರ್ಗ ಜಿಲ್ಲೆಯನ್ನು ಒಳಗೊಂಡಂತೆ, ಸುತ್ತಮುತ್ತ ಜಿಲ್ಲೆಗಳ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ.

ಚಿತ್ರದುರ್ಗ ಜಿಲ್ಲೆ ಪ್ರದೇಶದಲ್ಲಿ ಪುರಾತನ ಕಾಲದಿಂದಲೂ ಬುಡಕಟ್ಟು ಸಂಸ್ಕೃತಿಯನ್ನು ಹೊಂದಿರುವ ಬುಡಕಟ್ಟು ಸಮುದಾಯಗಳು ಇವೆ. ಯತೇಚ್ಛ ಬೆಟ್ಟಗುಡ್ಡಗಳು, ಬಯಲು ಪ್ರದೇಶಗಳು ಬುಡಕಟ್ಟು ಸಮುದಾಯಗಳ ಜೀವನಕ್ಕೆ ಸೂಕ್ತವಾದ ಪರಿಸರವನ್ನು ಒದಗಿಸಿವೆ. ಪ್ರಾಗ್ಯೈತಿಹಾಸಿಕ ಕಾಲ (Pre-Historic Period), ಹಳೆಶಿಲಾಯುಗ, ಹೊಸ ಶಿಲಾಯುಗ, ನವಶಿಲಾಯುಗದಿಂದಲೂ ಬೇಟೆ ಸಂಸ್ಕೃತಿ, ಕಾಡು ಸಂಸ್ಕೃತಿ ಯತೇಚ್ಛವಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಇರುವುದನ್ನು ಪ್ರಾಚೀನ ಇತಿಹಾಸಕಾರರು, ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಪತ್ತೆ ಹಚ್ಚಿದ್ದಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಮುಖ್ಯವಾಗಿ ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳಿವೆ. ಈ ಪ್ರತಿಯೊಂದು ಬುಡಕಟ್ಟು ಸಮುದಾಯಗಳೂ ಕೂಡ ತಮ್ಮದೇ ಆದ ಸಾಮಾಜಿಕ ಜೀವನವನ್ನು ಹೊಂದಿವೆ. ಈ ಬುಡಕಟ್ಟು ಸಮುದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಸಮುದಾಯಗಳ ಮೇಲೆ ಆಗುತ್ತಿರುವ ಪ್ರಭಾವಗಳು, ಇದರಿಂದ ಈ ಬುಡಕಟ್ಟು ಸಮುದಾಯಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ನಮೂದಿಸಲಾಗಿದೆ.

ಈ ಮಹಾಪ್ರಬಂಧವು ಒಟ್ಟು **ಐದು ಅಧ್ಯಾಯ**ಗಳನ್ನು ಹೊಂದಿದೆ. **ಒಂದನೇ ಅಧ್ಯಾಯ**ದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮತ್ತು ಸ್ವರೂಪವನ್ನು ಒಳಗೊಂಡಿದೆ.

**ಎರಡನೇ ಅಧ್ಯಾಯ**ದಲ್ಲಿ ಬೇಡ ಬುಡಕಟ್ಟು ಸಮುದಾಯಕ ಸಾಮಾಜಿಕ ಜೀವನ ಕ್ರಮವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಬೇಡ ಬುಡಕಟ್ಟು ಸಮುದಾಯದ ಹಿನ್ನೆಲೆ, ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ, ಆಚರಣೆ ಮತ್ತು ಕಲೆ, ಭಾಷೆ–ಸಾಹಿತ್ಯ, ಕಲೆ–ಕ್ರೀಡೆಗಳು, ಸಾಮಾಜಿಕ ಪರಿವರ್ತನೆಯನ್ನು ವಿಸ್ತೃತ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಮೂರನೇ ಅಧ್ಯಾಯ**ದಲ್ಲಿ ಮೇದ(ಮೇದಾರ) ಬುಡಕಟ್ಟು ಸಮುದಾಯದ ಸಾಮಾಜಿಕ ಜೀವನವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮೇದ(ಮೇದಾರ) ಬುಡಕಟ್ಟು ಸಮುದಾಯದ ಹಿನ್ನೆಲೆ, ಸಾಮಾಜಿಕ ಜೀವನ, ಆಚರಣೆ ಮತ್ತು ಕಲೆ, ಭಾಷೆ–ಸಾಹಿತ್ಯ, ವೃತ್ತಿ, ಕಲೆ–ಕ್ರೀಡೆಗಳು, ಸಾಮಾಜಿಕ ಬದಲಾವಣೆಯನ್ನು ಅಧ್ಯಯನ ಮಾಡಲಾಗಿದೆ.

**ನಾಲ್ಕನೇ ಅಧ್ಯಾಯ**ದಲ್ಲಿ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಸಾಮಾಜಿಕ ಜೀವನ ವಿಧಾನವನ್ನು ಅಧ್ಯಯನ ಮಾಡಲಾಗಿದೆ. ಈ ಬುಡಕಟ್ಟು ಸಮುದಾಯದ ಹಿನ್ನೆಲೆ, ಜೀವನಕ್ರಮ, ಜೀವನ ವಿಧಾನ, ಕಲೆ ಮತ್ತು ಸಂಸ್ಕೃತಿ, ಭಾಷೆ–ಸಾಹಿತ್ಯ, ವೃತ್ತಿ, ಸಾಮಾಜಿಕ ಬದಲಾವಣೆಗಳನ್ನು ಅಧ್ಯಯನ ಮಾಡಲಾಗಿದೆ.

**ಐದನೇ ಅಧ್ಯಾಯ**ದಲ್ಲಿ ಬೇಡ, ಮೇದ(ಮೇದಾರ) ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ತೌಲನಿಕ ಅಧ್ಯಯನ ಮಾಡಲಾಗಿದೆ.

**ಆರನೇ ಅಧ್ಯಾಯ**ವು ಸಮಾರೋಪವನ್ನು ಹೊಂದಿದೆ. ಪ್ರಸ್ತುತ ಅಧ್ಯಯನವನ್ನು ಸ್ಥೂಲವಾಗಿ ವಿವರಿಸುತ್ತದೆ. ಅಧ್ಯಯನದ ಫಲಿತಗಳನ್ನು ನಮೂದಿಸಲಾಗಿದೆ.

**೧.೪. ಅಧ್ಯಯನದ ವಿಧಾನ**

ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಸಮುದಾಯಗಳು: ಒಂದು ಸಾಮಾಜಿಕ ಅಧ್ಯಯನ ಎನ್ನುವ ಸಂಶೋಧನ ಅಧ್ಯಯನದಲ್ಲಿ ವಿವಿಧ ಅಧ್ಯಯನ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ.

**೧. ಪ್ರಶ್ನಾವಳಿ ವಿಧಾನ**

ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಸಮುದಾಯಗಳು: ಒಂದು ಸಾಮಾಜಿಕ ಅಧ್ಯಯನ ಎನ್ನುವ ಸಂಶೋಧನಾ ಅಧ್ಯಯನಕ್ಕೆ ಸಂಬಂಧಿಸಿದಂತೆ, ಚಿತ್ರದುರ್ಗ ಜಿಲ್ಲೆಯಲ್ಲಿ ಇರುವ ಪ್ರಮುಖ ಬುಡಕಟ್ಟು ಸಮುದಾಯಗಳಾದ ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸ್ಥಿತಿಗತಿಯನ್ನು ಅರಿತುಕೊಳ್ಳಲು ಸೂಕ್ತವಾದ ಪ್ರಶ್ನೆಗಳನ್ನು ರಚಿಸಿಕೊಂಡು ಅಧ್ಯಯನ ಮಾಡಲಾಗಿದೆ. ಸೂಕ್ತ ಪ್ರಶ್ನಾವಳಿಯನ್ನು ರಚಿಸಿಕೊಳ್ಳಲಾಗಿದೆ ಮತ್ತು ಸಮೀಕ್ಷೆ ನಡೆಸಲಾಗಿದೆ. ಅದರ ಫಲಿತಗಳನ್ನು ಮಹಾಪ್ರಬಂಧದಲ್ಲಿ ನಮೂದಿಸಲಾಗಿದೆ.

**೨. ಸಂದರ್ಶನ ವಿಧಾನ**

ಪ್ರಸ್ತುತ ಸಂಶೋಧನಾ ಅಧ್ಯಯನದ ವ್ಯಾಪ್ತಿಯು ಚಿತ್ರದುರ್ಗ ಜಿಲ್ಲೆಯಾಗಿರುವುದರಿಂದ, ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿಯೂ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಚಿತ್ರದುರ್ಗ, ಹಿರಿಯೂರು, ಹೊಸದುರ್ಗ, ಹೊಳಲ್ಕೆರೆ, ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಈ ಮೂರು ಪ್ರಮುಖ ಬುಡಕಟ್ಟು ಸಮುದಾಯಗಳಿಗೆ ಸಂಬಂಧಿಸಿದಂತೆ ಸಾಂದರ್ಭಿಕವಾಗಿ ಸಂದರ್ಶನ ಮಾಡಲಾಗಿದೆ. ವಯೋಮಿತಿಗೆ ಅನುಸಾರವಾಗಿ ಸಂದರ್ಶನವನ್ನು ಮಾಡಲಾಗಿದೆ. ಬುಡಕಟ್ಟು ಸಮುದಾಯಗಳ ಹಿರಿಯ ಮುಖಂಡರಿಂದ, ಹಿರಿಯರಿಂದ, ಅನುಭವ ಹೊಂದಿದ ವ್ಯಕ್ತಿಗಳೊಂದಿಗೆ ಸಂದರ್ಶನ ನಡೆಸಿ ಮಾಹಿತಿಯನ್ನು ಪಡೆಯಲಾಗಿದೆ. ಆ ಮಾಹಿತಿಯನ್ನು ಪ್ರಬಂಧ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ.

**೩. ಅವಲೋಕನ ವಿಧಾನ**

ಪ್ರಸ್ತುತ ಅಧ್ಯಯನದಲ್ಲಿ ಅವಲೋಕನ ವಿಧಾನವನ್ನೂ ಅಳವಡಿಸಿಕೊಳ್ಳಲಾಗಿದೆ. ಅವಲೋಕನ ವಿಧಾನದಿಂದ ಸೂಕ್ಷ್ಮವಾಗಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹತ್ತಿರದಿಂದ ಬುಡಕಟ್ಟು ಸಮುದಾಯಗಳ ಜೀವನಕ್ರಮವನ್ನು ಅರಿಯಲಾಗಿದೆ. ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳಲ್ಲಿ ಸಾಮಾಜಿಕ ಜೀವನ ಪದ್ಧತಿ, ಲಿಂಗತಾರತಮ್ಯ, ವೃತ್ತಿ ಮತ್ತು ಇತರೆ ಜೀವನಕ್ರಮಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಲಾಗಿದೆ.

## ೪. ಸಹಭಾಗಿತ್ವ ಅವಲೋಕನ ವಿಧಾನ ಮತ್ತು ಕ್ಷೇತ್ರಕಾರ್ಯದ ಅನುಭವ

ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಸಹಭಾಗಿತ್ವ ಅವಲೋಕನ ವಿಧಾನ ಮತ್ತು ಕ್ಷೇತ್ರಕಾರ್ಯ ಅನುಭವವನ್ನು ವ್ಯಾಪಕವಾಗಿ ಬಳಸಿಕೊಳ್ಳಲಾಗಿದೆ. ಚಿತ್ರದುರ್ಗ ಜಿಲ್ಲೆಯು, ಸಂಶೋಧಕನ ವಾಸಸ್ಥಳದ ಜಿಲ್ಲೆಯಾಗಿರುವುದರಿಂದ ಹಾಗೂ ಈ ಬುಡಕಟ್ಟು ಸಮುದಾಯಗಳೊಂದಿಗೆ ಮೂವತ್ತು ವರ್ಷಗಳು ಜೀವನವನ್ನು ಮಾಡಿರುವುದರಿಂದ ನಿರಂತರವಾಗಿ ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳೊಂದಿಗೆ ನಿರಂತರವಾದ ಒಡನಾಟವಿದೆ. ಅಲ್ಲದೇ, ಪ್ರಸ್ತುತ ಸಂಶೋಧನೆಯನ್ನು ಕೈಗೊಂಡ ನಂತರ ವ್ಯಾಪಕವಾಗಿ ಕ್ಷೇತ್ರಕಾರ್ಯ ಮಾಡಲಾಗಿದೆ. ಈ ಕ್ಷೇತ್ರಕಾರ್ಯದ ಅನುಭವವೇ ಸಂಶೋಧನಾ ಅಧ್ಯಯನಕ್ಕೆ ಬಹಳ ಪ್ರಮುಖವಾಗಿದೆ. ಕ್ಷೇತ್ರಕಾರ್ಯದಲ್ಲಿ ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಜನರೊಂದಿಗೆ ಒಡನಾಟವನ್ನು ಹೊಂದಿ, ಅಧ್ಯಯನ ಮಾಡಲಾಗಿದೆ. ಈ ಬುಡಕಟ್ಟು ಸಮುದಾಯಗಳನ್ನು ಹೊರತುಪಡಿಸಿ, ಇತರೆ ಜಾತಿ ಜನಾಂಗಗಳಿಂದಲೂ ಮಾಹಿತಿಯನ್ನು ಸಂಗ್ರಹಿಸಲಾಗಿದೆ ಮತ್ತು ನಮೂದಿಸಲಾಗಿದೆ. ಬುಡಕಟ್ಟು ಸಮುದಾಯಗಳ ಹಿರಿಯರನ್ನು, ವ್ಯಕ್ತಿಗಳನ್ನು, ಮಹಿಳೆಯರನ್ನು, ಮಕ್ಕಳನ್ನು, ಸ್ನೇಹಿತರನ್ನು ಒಳಗೊಂಡಂತೆ ಇತರೆ ವೃತ್ತಿಗೆ ಸಂಬಂಧಿಸಿದ ವ್ಯಕ್ತಿಗಳೊಂದಿಗೆ ಕ್ಷೇತ್ರಕಾರ್ಯದ ಮಾಹಿತಿಯನ್ನು ಈ ಅಧ್ಯಯನದಲ್ಲಿ ವ್ಯಾಪಕವಾಗಿ ಬಳಸಿಕೊಳ್ಳಲಾಗಿದೆ.

## ೧.೫. ಭಾರತದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನ

ಬ್ರಿಟೀಷರ ಆಡಳಿತ ಕಾಲದಲ್ಲಿ ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ ಆರಂಭವಾಯಿತು. ಡಾಲ್ಟನ್ ಅವರು ಬಂಗಾಳದ ಬುಡಕಟ್ಟುಗಳ ಬಗ್ಗೆ ಅಧ್ಯಯನ ನಡೆಸಿದರು. ನಂತರ ರಿಸ್ಲೆ ಅವರು ೧೮೯೧ರಲ್ಲಿ ಬಂಗಾಳದ ಬುಡಕಟ್ಟುಗಳ ಬಗ್ಗೆ ವಿವರವಾದ ಅಧ್ಯಯನ ಕೈಗೊಂಡರು. ಜೆ.ಎಫ್.ಮೋಟ್ಸ್ ಅವರು ೧೮೭೪ರಲ್ಲಿ ನೀಲಗಿರಿಯ ಬುಡಕಟ್ಟುಗಳ ಅಧ್ಯಯನ ಮಾಡಿದರು. ರಿಸ್ಲೆಯವರ ಅಧ್ಯಯನವು ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿದೆ. ಸಂಯುಕ್ತ ಪ್ರದೇಶಗಳಲ್ಲಿ (United Provinces) ಜಾತಿಗಳು ಮತ್ತು ಬುಡಕಟ್ಟುಗಳ ಅಧ್ಯಯನವನ್ನು ವಿಲಿಯಂ ಕ್ರೂಕ್ ಮಾಡಿದ್ದಾರೆ. ಥರ್‌ಸ್ಟನ್ ಮತ್ತು ರಂಗಾಚಾರಿ ಅವರು ದಕ್ಷಿಣ ಭಾರತದ ಜಾತಿಗಳು ಮತ್ತು ಬುಡಕಟ್ಟುಗಳ ಬಗ್ಗೆ ಅಧ್ಯಯನ ಮಾಡಿ ಏಳು ಸಂಪುಟಗಳಲ್ಲಿ ತಮ್ಮ ಕೃತಿಗಳನ್ನು ಪ್ರಕಟಿಸಿದ್ದಾರೆ. ಎಚ್.ವಿ.ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರು ಮೈಸೂರಿನ ಬುಡಕಟ್ಟುಗಳು ಮತ್ತು ಜಾತಿಗಳ ಬಗ್ಗೆ ನಾಲ್ಕು ಸಂಪುಟಗಳಲ್ಲಿ ಕೃತಿಗಳನ್ನು ಪ್ರಕಟಿಸಿದ್ದಾರೆ. ಎಚ್.ಎ.ರೋಸ್ ಅವರು ಪಂಜಾಬ್ ಮತ್ತು ವಾಯುವ್ಯ ಗಡಿ ಪ್ರಾಂತ್ಯಗಳಲ್ಲಿ ಬುಡಕಟ್ಟುಗಳು ಮತ್ತು ಜಾತಿಗಳ ಅಧ್ಯಯನ ಮಾಡಿದ್ದಾರೆ. ಆರ್.ವಿ.ರೈಸ್ ಮತ್ತು ಹೀರಾಲಾಲ್ ಅವರು ಮಧ್ಯಪ್ರದೇಶದ ಬುಡಕಟ್ಟುಗಳು ಮತ್ತು ಜಾತಿಗಳ ಅಧ್ಯಯನ ಮಾಡಿದ್ದಾರೆ. ಆರ್.ಇ. ಎಂಥೋವನ್ ಅವರು ಮುಂಬೈನ ಜಾತಿಗಳು ಮತ್ತು ಬುಡಕಟ್ಟುಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ದಕ್ಷಿಣ ಭಾರತದ ಬುಡಕಟ್ಟುಗಳ ಅಧ್ಯಯನದಲ್ಲಿ ಎಲ್.ಕೆ.ಕೃಷ್ಣ ಅಯ್ಯರ್ ಅವರ ಪಾತ್ರ ತುಂಬಾ ಮಹತ್ವಪೂರ್ಣವಾದುದು. ಇವರು ತಿರುವಾಂಕೂರಿನ ಜಾತಿಗಳು ಮತ್ತು

ಬುಡಕಟ್ಟುಗಳ ಬಗ್ಗೆ ಮೂರು ಸಂಪುಟಗಳನ್ನು, ಕೊಡಗಿನ ಬುಡಕಟ್ಟುಗಳು ಮತ್ತು ಜಾತಿಗಳ ಬಗ್ಗೆ ಒಂದು ಸಂಪುಟವನ್ನು ಪ್ರಕಟಿಸಿದ್ದಾರೆ. ಇವರು ತಿರುವಾಂಕೂರಿನ ಆದಿವಾಸಿ ಬುಡಕಟ್ಟುಗಳ ಬಗ್ಗೆ ಮಾಡಿರುವ ಅಧ್ಯಯನ ಜನಗಣತಿಯ ವರದಿಯಲ್ಲಿ ಪ್ರಕಟವಾಗಿದೆ. ಮದರಾಸ್ ಪ್ರೆಸಿಡೆನ್ಸಿಯಲ್ಲಿದ್ದ ಅಪರಾಧಿ ಬುಡಕಟ್ಟುಗಳ ಇತಿಹಾಸವನ್ನು ಕುರಿತು ಇ.ರಾಮಚಂದ್ರಶಾಸ್ತ್ರಿ ಅವರು ಒಂದು ಕೃತಿಯನ್ನು ಪ್ರಕಟಿಸಿದ್ದಾರೆ. ೧೯ನೆಯ ಮತ್ತು ೨೦ನೆಯ ಶತಮಾನಗಳಲ್ಲಿ ನಡೆದ ಬುಡಕಟ್ಟುಗಳ ಮತ್ತು ಜಾತಿಗಳ ಸ್ಥೂಲವಾದ ಅಧ್ಯಯನ ಬ್ರಿಟೀಷರಿಗೆ ಆಡಳಿತ ನಡೆಸಲು ಸಹಾಯ ಮಾಡಿತು.[೨]

### ೧.೬. ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನ

ಕರ್ನಾಟಕದಲ್ಲಿ ಬ್ರಿಟಿಷರ ಆಡಳಿತ ಕಾಲದಿಂದಲೂ, ಕರ್ನಾಟಕದ ಬುಡಕಟ್ಟುಗಳ ಬಗ್ಗೆ ಅಧ್ಯಯನಗಳು ನಡೆದಿವೆ. ೧೯೦೯ರಲ್ಲಿ ಎಡ್ಗರ್ ಥರ್‌ಸ್ಟನ್ ಮತ್ತು ಕೆ.ರಂಗಾಚಾರಿ ಅವರ Caste and Tribes of Southern India ಎನ್ನುವ ಕೃತಿಯು ದಕ್ಷಿಣ ಭಾರತದ ಅನೇಕ ಜಾತಿ ಮತ್ತು ಬುಡಕಟ್ಟುಗಳ ವಿವರಣೆಯನ್ನು ಒಳಗೊಂಡಿದೆ. ೧೯೨೬-೧೯೩೫ರಲ್ಲಿ ಎಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ.ಅನಂತಕೃಷ್ಣ ಅಯ್ಯರ್ ಅವರು ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿರುವ The Mysore tribes and Castes ಎನ್ನುವ ಕೃತಿಗಳು ಬುಡಕಟ್ಟು ಅಧ್ಯಯನದ ಮಹತ್ವಪೂರ್ಣವಾದ ಕೊಡುಗೆಗಳಾಗಿವೆ. ೧೯೨೬ರಲ್ಲಿ ಸೈಯದ್ ಸಿರಾಜ್-ಉಲ್-ಹುಸೇನ್ ಅವರ The Caste and Tribes of Nizam's Dominion' ಎನ್ನುವ ಗ್ರಂಥದಲ್ಲಿ ಹೈದರಾಬಾದ್ ಕರ್ನಾಟಕದ ಜಾತಿ ಮತ್ತು ಬುಡಕಟ್ಟುಗಳ ಪರಿಚಯವಿದೆ. ಐ.ಎ.ಡಿ.ಲೂಯಿಸ್ ಅವರು ೧೯೬೫ರಲ್ಲಿ Tribes of Mysore ಎನ್ನುವ ಕೃತಿಯಲ್ಲಿ ಮೈಸೂರು ರಾಜ್ಯದಲ್ಲಿರುವ ೨೭ ಬುಡಕಟ್ಟುಗಳ ಬಗ್ಗೆ ವಿವರಣೆಗಳಿವೆ. ೧೯೭೫ರಲ್ಲಿ ಎಲ್.ಜಿ.ಹಾವನೂರು ಅವರ Karnataka Backward Class Commission Report ನಲ್ಲಿ ಕರ್ನಾಟಕದ ವಿವಿಧ ಬುಡಕಟ್ಟುಗಳ ಮಾಹಿತಿಯಿದೆ. ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಐ.ಬಿ.ಹೆಚ್. ಪ್ರಕಾಶನ ಮತ್ತು ಮೈಸೂರಿನ ಭಾರತೀಯ ಮಾನವ ಸರ್ವೇಕ್ಷಣಾ ಸಂಸ್ಥೆಯಿಂದ ಕರ್ನಾಟಕದ ವಿವಿಧ ಬುಡಕಟ್ಟುಗಳ ಬಗ್ಗೆ ಪುಸ್ತಕಗಳನ್ನು ಮತ್ತು ವರದಿಗಳನ್ನು ಪ್ರಕಟಿಸಲಾಗಿದೆ. ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಬುಡಕಟ್ಟುಗಳ ಬಗ್ಗೆ ಅಧ್ಯಯನಗಳು ನಡೆಯುತ್ತಿವೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗ ಮತ್ತು ಮಾನವಶಾಸ್ತ್ರ ಅಧ್ಯಯನ ವಿಭಾಗಗಳು ಬುಡಕಟ್ಟುಗಳ ಅಧ್ಯಯನಕ್ಕೆ ಹೆಚ್ಚಿನ ಒತ್ತನ್ನು ನೀಡುತ್ತಿವೆ.

### ಅಧ್ಯಯನಗಳ ಸಮೀಕ್ಷೆ

ಕರ್ನಾಟಕ ರಾಜ್ಯದಲ್ಲಿ ಅನೇಕ ಬುಡಕಟ್ಟು ಸಮುದಾಯಗಳಿವೆ. ಪ್ರಾಕೃತಿಕವಾಗಿಯೂ ಕರ್ನಾಟಕವು ಪಶ್ಚಿಮ ಘಟ್ಟಗಳಲ್ಲಿ ಯತೇಚ್ಛ ಅರಣ್ಯ ಸಂಪತ್ತು, ಕುರುಚಲು ಸಸ್ಯವರ್ಗ, ಬೆಟ್ಟಗುಡ್ಡಗಳು, ಗಿರಿಶಿಖರಗಳು, ಸಾಕಷ್ಟು ಮೈದಾನ ಪ್ರದೇಶಗಳು, ನದಿಗಳು, ಕೆರೆಗಳು, ಹಳ್ಳ ಕೊಳ್ಳಗಳನ್ನು ಹೊಂದಿದೆ. ಕರ್ನಾಟಕ ರಾಜ್ಯದಲ್ಲಿ ಅನೇಕ ಬುಡಕಟ್ಟು ಸಮುದಾಯಗಳಿವೆ. ಅನೇಕ ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು,

ಸಂಶೋಧಕರು, ಜಾನಪದ ವಿದ್ವಾಂಸರು ಈ ಬುಡಕಟ್ಟು ಸಮುದಾಯಗಳ ಬಗ್ಗೆ ಅಧ್ಯಯನವನ್ನು ಮಾಡಿದ್ದಾರೆ. ಕರ್ನಾಟಕ ರಾಜ್ಯದಲ್ಲಿರುವ ೫೦ ಬುಡಕಟ್ಟು ಸಮುದಾಯಗಳು ಈ ರೀತಿ ಇವೆ.

೧. ಅಡಿಯನ್
೨. ಬಾರ್ಡಾ
೩. ಬಾವಚ, ಬಾಮ್ಚ
೪. ಭಿಲ್
೫. ಚೆಂಚು, ಚೆಂಚವಾರ್
೬. ಚೋಧರಾ
೭. ಡುಬ್ಲ, ತಲವಿಯ, ಹಲ್ಪತಿ
೮. ಗಮಿಟ್, ಮಾವ್ಚಿ, ವಾಳ್ವಿ
೯. ಗೊಂಡ್, ರಾಜ್‌ಗೊಂಡ್
೧೦. ಗೌಡಲು
೧೧. ಹಕ್ಕಿಪಿಕ್ಕಿ
೧೨. ಹಸಲರು
೧೩. ಇರುಳರ್
೧೪. ಇರುಳಿಗ
೧೫. ಜೇನುಕುರುಬ
೧೬. ಕಾಡುಕುರುಬ
೧೭. ಕಮ್ಮಾರ
೧೮. ಕಣಿಯನ್, ಕಣ್ಯಾನ್
೧೯. ಕಥೋಡಿ, ಕಟ್‌ಕಾರಿ
೨೦. ಕಾಟ್ಟು ನಾಯಕನ್
೨೧. ಕೊಕ್ನ, ಕೊಕ್ನಿ, ಕುಕ್ನ
೨೨. ಕೊಲಿ ಢೋರ್, ಟೋಕರೆ ಕೋಳಿ
೨೩. ಕೊಂಡ ಕಾಪುಸ್
೨೪. ಕೊರಗ
೨೫. ಕೋಟ
೨೬. ಕೋಯ, ಭೀನೆ ಕೋಯ
೨೭. ಕುಡಿಯ, ಮೆಲಕುಡಿ
೨೮. ಕುರುಬ
೨೯. ಕುರುಮನ್ಸ್
೩೦. ಮಹಾ ಮಲಸರ್
೩೧. ಮಲ್ಯೆಕುಡಿ
೩೨. ಮಲಸರ್
೩೩. ಮಲಯೆಕಂಡಿ
೩೪. ಮಲೇರು
೩೫. ಮರಾಠ
೩೬. ಮರಾಟಿ
೩೭. ಮೇದ, ಮೇದಾರ
೩೮. ನಾಯಕ್, ಬೇಡ, ವಾಲ್ಮೀಕಿ
೩೯. ಪಳ್ಳಿಯನ್
೪೦. ಪಣಿಯನ್
೪೧. ಪಾರ್ಧಿ, ಅಡ್ವಿಚೆಂಚೇರ್
೪೨. ಪಟೇಲಿಯ
೪೩. ರಾಠವಾ
೪೪. ಶೋಲಗ
೪೫. ಸೋಲಿಗರು
೪೬. ತೋಡ
೪೭. ವರ್ಲಿ
೪೮. ವಿಟೋಲಿಯ
೪೯. ಯರವ
೫೦. ಸಿದ್ಧಿ

ಈ ಬುಡಕಟ್ಟು ಸಮುದಾಯಗಳಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿರುವ ಪ್ರಮುಖ ಬುಡಕಟ್ಟು ಸಮುದಾಯಗಳಾದ ಬೇಡ, ಮೇದ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳನ್ನು ಸಂಶೋಧನಾ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

ಬೇಡ ಬುಡಕಟ್ಟು ಸಮುದಾಯದ ಕುರಿತು, ಅನೇಕ ಸಂಶೋಧನೆಗಳು ಮತ್ತು ಅಧ್ಯಯನಗಳು ನಡೆದಿವೆ. ಕೃಷ್ಣಮೂರ್ತಿ ಹನೂರು ಅವರ ಮ್ಯಾಸಬೇಡರು, ವಿರೂಪಾಕ್ಷಿ ಪೂಜಾರಹಳ್ಳಿ ಅವರ ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಎಂ.ಜಿ. ಈಶ್ವರಪ್ಪ ಅವರ ಮ್ಯಾಸಬೇಡರು, ಕರಿಶೆಟ್ಟಿ ರುದ್ರಪ್ಪ ಅವರ ಮ್ಯಾಸನಾಯಕರು: ಒಂದು ಜನಾಂಗೀಯ ಅಧ್ಯಯನ, ಎಂ.ಎಸ್.ಪುಟ್ಟಣ್ಣ ಅವರ ಚಿತ್ರದುರ್ಗದ ಪಾಳೆಯಗಾರರು, ಹಿ.ಚಿ.ಬೋರಲಿಂಗಯ್ಯ ಅವರ ಗಿರಿಜನ ನಾಡಿಗೆ ಪಯಣ, ಮೈಲಹಳ್ಳಿ ರೇವಣ್ಣ ಅವರ ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು, ಆರ್.ರಾಜಣ್ಣ ಅವರ ನಾಯಕ ಜನಾಂಗದ ಇತಿಹಾಸ, ಮಂಜುನಾಥ ಬೇವಿನಕಟ್ಟಿ ಅವರ ವಾಲ್ಮೀಕಿ ಸಮುದಾಯ, ವ್ಯಾಧ ಚರಿತೆ, ಆದಿವಾಸಿ, ತಾರಿಹಳ್ಳಿ ಹನುಮಂತಪ್ಪ ಅವರ ಹೊಸಪೇಟೆ ನಾಯಕರ ಏಳುಕೇರಿಗಳ ಸಾಂಸ್ಕೃತಿಕ ಅಧ್ಯಯನ, ಕೆ.ಎಂ.ಮೇತ್ರಿ ಅವರ ಬುಡಕಟ್ಟು ಕುಲಕಸುಬುಗಳು, ಎ.ಎಸ್.ಪ್ರಭಾಕರ ಅವರ ಆದಿವಾಸಿ ಆಖ್ಯಾನ ಮುಂತಾದ ಕೃತಿಗಳು ಬೇಡ ಸಮುದಾಯದ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಲು ಪ್ರೇರಣೆ ನೀಡುತ್ತವೆ.

ಮೇದ ಬುಡಕಟ್ಟು ಸಮುದಾಯದ ಕುರಿತು, ಡಿ.ಆರ್.ಪಾಂಡುರಂಗ ಅವರ ಮೇದರು, ಚಂದ್ರಶೇಖರ ಸ್ವಾಮೀಜಿ ಅವರ ಶ್ರೀಕೇತೇಶ್ವರ ಚರಿತೆ, ಆನಂದ ಪರಾಂಡೆ ಅವರ ಕೇತೇಶ್ವರ ವಾಣಿ' ಪತ್ರಿಕೆ, ವೈ.ಕೆ.ಹಳೇಪೇಟೆ ಅವರ ಮೇದ ಗರ್ಜನೆ ಪತ್ರಿಕೆ, ಕೆ. ಪನ್ನಂಗಧರ ಅವರ ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ ಪಿಎಚ್.ಡಿ. ಪ್ರಬಂಧ, ಮುಂತಾದ ಲೇಖನಗಳು ಮತ್ತು ಕೃತಿಗಳು ಮೇದ ಸಮುದಾಯದ ಬಗ್ಗೆ ತಿಳುವಳಿಕೆ ಮೂಡಿಸುತ್ತವೆ.

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವನ್ನು ಕುರಿತು ಮೈಸೂರಿನಲ್ಲಿರುವ ಮಾನವಶಾಸ್ತ್ರ ಸರ್ವೇಕ್ಷಣ ಸಂಸ್ಥೆ(ASI) ವತಿಯಿಂದ ಪ್ರೊ.ಮಾನ್ ಅವರು Hakki Pikki Trapper and Seller ಎನ್ನುವ ಪುಸ್ತಕವನ್ನು ಇಂಗ್ಲಿಷ್ ಭಾಷೆಯಲ್ಲಿ ರಚಿಸಿದ್ದಾರೆ. ರಾಜಪ್ಪ ದಳವಾಯಿ ಅವರು 'ಹಕ್ಕಿಪಿಕ್ಕಿಯರ ಸಂಸ್ಕೃತಿ', ಲಾರೆನ್ಸ್ ಡಿಸೋಜಾ ಅವರು ಇಂಗ್ಲಿಷ್ ಭಾಷೆಯಲ್ಲಿ Hakki Pikkis ಎಂಬ ಪುಸ್ತಕವನ್ನು ರಚಿಸಿದ್ದಾರೆ. ಸುದರ್ಶನ್ ಕುಮಾರ್ ಅವರು ಬೆಂಗಳೂರು ಹತ್ತಿರ ಇರುವ ಭೂತಾನಹಳ್ಳಿ (ಬನ್ನೇರುಘಟ್ಟದ ಹತ್ತಿರ) ಕಾಲೋನಿಯಲ್ಲಿನ ಹಕ್ಕಿಪಿಕ್ಕಿ ಜನಾಂಗದ ಕುರಿತು ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನವನ್ನು ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗದಲ್ಲಿ ವಿನೋದನಾಯ್ಕ ಎಂಬುವರು ಶಿವಮೊಗ್ಗ ಜಿಲ್ಲೆಯ ಹಕ್ಕಿಪಿಕ್ಕಿಯರ ಆರ್ಥಿಕ ಅಧ್ಯಯನ ಎನ್ನುವ ವಿಷಯದ ಕುರಿತು ಪಿಎಚ್.ಡಿ. ಅಧ್ಯಯನ ಮಾಡಿದ್ದಾರೆ. ಕುಮುದಾ ಬಿ. ಸುಶೀಲಪ್ಪ ಅವರು ಹಕ್ಕಿಪಿಕ್ಕಿ ಜನಾಂಗದ ಬಗ್ಗೆ ಅಧ್ಯಯನ ಮಾಡಿದ್ದಾರೆ. ಲಕ್ಕಿ ಪೃಥ್ವಿರಾಜ್ ಪಾರ್ಧಿ ಜನಾಂಗದ ಬಗ್ಗೆ ಅಧ್ಯಯನವನ್ನು ಮಾಡಿದ್ದಾರೆ.

ಬುಡಕಟ್ಟು ಜನಾಂಗಗಳ ಬಗ್ಗೆ ಸಂಶೋಧನಾ ಅಧ್ಯಯನ ಮಾಡುವುದು ಸವಾಲಿನ ಕಾರ್ಯವಾಗಿದೆ. ಯಾವುದೇ ಬಗೆಯ ಸಂಶೋಧನೆಯು ಅಂತಿಮವಲ್ಲ. ಪ್ರತಿಯೊಬ್ಬ ಸಂಶೋಧಕನೂ ಕೂಡ ತನ್ನದೇ ಆದ ಮಿತಿಯಲ್ಲಿ ಅಧ್ಯಯನ ಮಾಡುತ್ತಾನೆ. ಪ್ರತಿಯೊಂದು ಸಂಶೋಧನಾ ಅಧ್ಯಯನವು ಹೆಚ್ಚಿನ ಸಂಶೋಧನಾ ಅಧ್ಯಯನಕ್ಕೆ ಪ್ರೇರಣೆ ನೀಡುತ್ತದೆ. ಒಂದು ನಿರ್ದಿಷ್ಟ ಕಾಲದ ಸಂದರ್ಭದಲ್ಲಿ ಮಾಡಿದ ಸಂಶೋಧನಾ ಅಧ್ಯಯನವನ್ನು ಮತ್ತೊಬ್ಬ ಸಂಶೋಧಕನು ಬೇರೆ ಕಾಲದ ಸಂದರ್ಭದಲ್ಲಿ ಸಂಶೋಧನಾ ಅಧ್ಯಯನ ಮಾಡಿದಾಗ ವಿಭಿನ್ನ ರೀತಿಯ ಒಳನೋಟಗಳನ್ನು ಕಾಣಬಹುದಾಗಿದೆ. ಸಂಶೋಧನಾ ಅಧ್ಯಯನವು ಸದಾ ನಿರಂತರವಾಗಿರುತ್ತದೆ.

## ೧.೭. ಬುಡಕಟ್ಟು ಸಮುದಾಯ ಅಥವಾ ಆದಿವಾಸಿ ಸಮುದಾಯದ ಅರ್ಥ ವಿವರಣೆ

ಸಮಾಜ ವಿಜ್ಞಾನಗಳ ಅಧ್ಯಯನದಲ್ಲಿ ಅದರಲ್ಲಿಯೂ ಮುಖ್ಯವಾಗಿ ಮಾನವಶಾಸ್ತ್ರದಲ್ಲಿ ಆದಿವಾಸಿ ಸಮುದಾಯ(Tribes) ಎಂಬ ಕಲ್ಪನೆಯನ್ನು ಸಾಮಾನ್ಯವಾಗಿ ಅಕ್ಷರಪೂರ್ವ ಸಂಸ್ಕೃತಿಗಳನ್ನು ಸೂಚಿಸಲು ಬಳಸಲಾಗುತ್ತಿದೆ. ಆದಿವಾಸಿಗಳು ಸಾಮಾನ್ಯವಾಗಿ ಅನಕ್ಷರಸ್ಥರಾಗಿದ್ದು, ಗುಡ್ಡಗಾಡುಗಳಲ್ಲಿ ಹಾಗೂ ಕಾಡು-ಮೇಡುಗಳಲ್ಲಿ ವಾಸ ಮಾಡುವವರಾಗಿದ್ದಾರೆ. ಜಗತ್ತಿನ ಬಹುತೇಕ ರಾಷ್ಟ್ರಗಳಲ್ಲಿ ಮೂಲ ನಿವಾಸಿಗಳೆಂದು ಕರೆಯಲ್ಪಡುವ ಈ ಆದಿವಾಸಿಗಳು ಕಾಣಸಿಗುತ್ತಾರೆ. ನಾಗರೀಕ ಜೀವನದಿಂದ ಬಹು ದೂರವಿರುವ ಇವರು ಗುಹೆ-ಗಹ್ವರಗಳಲ್ಲಿ, ಗಿರಿ-ಶಿಖರಗಳ ಮೇಲೆ, ಕಣಿವೆ-ಕಾನನಗಳಲ್ಲಿ, ಕರಾವಳಿ ಪ್ರದೇಶಗಳಲ್ಲಿ ಚಿಕ್ಕಪುಟ್ಟ ಸಮೂಹಗಳಲ್ಲಿ ವಾಸಿಸುವರು. ಕೆಲವು ದೇಶಗಳಲ್ಲಿ ಇವರ ಸಂಖ್ಯೆ ಬಹಳ ದೊಡ್ಡದಿರುವುದೂ ಇದೆ. ಭಾರತದಲ್ಲಿಯೂ ಇವರ ಸಂಖ್ಯೆ ಗಣನೀಯವಾಗಿದೆ.

### ಆದಿವಾಸಿ ಸಮುದಾಯದ ವ್ಯಾಖ್ಯೆ

ಆದಿವಾಸಿಗಳು (Tribes) ಮತ್ತು ಆದಿವಾಸಿ ಸಮುದಾಯ ಎಂಬುದರ ಬಗ್ಗೆ ಮಾನವಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ವ್ಯಾಖ್ಯೆಗಳನ್ನು ನೀಡಿದ್ದಾರೆ.

೧. ಡಾ.ಡಿ.ಎಸ್. ಮಜುಮ್‌ದಾರ್ ಅವರ ಪ್ರಕಾರ: ಒಂದೇ ನಾಮಧೇಯವನ್ನು ಹೊಂದಿರುವ, ಒಂದೇ ಭೂ ನೆಲೆಯಲ್ಲಿ ವಾಸಿಸುವ, ಒಂದೇ ಭಾಷೆಯನ್ನಾಡುವ ಮತ್ತು ವಿವಾಹ-ಉದ್ಯೋಗಗಳಿಗೆ ಸಂಬಂಧಿಸಿದಂತೆ ಒಂದೇ ಬಗೆಯ ವಿಧಿ-ನಿಷೇಧಗಳಿಗೆ ಬದ್ಧವಾದ ಕುಟುಂಬಗಳ ಸಮೂಹವನ್ನು ಆದಿವಾಸಿ ಸಮೂಹ ಎಂದು ಕರೆಯಬಹುದು.

೨. ಬೊಗಾರ್ಡಸ್ ಅವರ ಪ್ರಕಾರ: ರಕ್ಷಣೆಯ ಅವಶ್ಯಕತೆ, ರಕ್ತಸಂಬಂಧ, ಒಂದೇ ಧರ್ಮದ ನೆಲೆ ಇವುಗಳ ಆಧಾರದ ಮೇಲೆ ನಿಂತಿರುವ ಸಮೂಹವೇ ಆದಿವಾಸಿ ಸಮೂಹ.

೩. ಡಬ್ಲ್ಯೂ.ಜೆ.ಪೆರ್ರಿ(W.J.Perry): ಒಂದು ಸ್ಥಳದಲ್ಲಿ ನೆಲೆಸಿಕೊಂಡು ಒಂದೇ ಭಾಷೆಯನ್ನಾಡುವ ಜನಸಮೂಹವನ್ನು ಆದಿವಾಸಿ ಸಮೂಹ ಎನ್ನಬಹುದು.

೪. ಜೆ.ಎಲ್.ಗಿಲಿನ್ ಮತ್ತು ಜೆ.ಎ.ಗಿಲಿನ್ (J.L.Gillin and J.A. Gillin): ಒಂದು ಸ್ಥಳದಲ್ಲಿ ವಾಸಿಸುತ್ತಾ ಒಂದೇ ಭಾಷೆಯನ್ನು ಮಾತನಾಡುವ ಮತ್ತು ಒಂದು ಸಂಸ್ಕೃತಿಯನ್ನು ಹೊಂದಿರುವ

ಸ್ಥಳೀಯ ಸಮುದಾಯಗಳ ಸಮೂಹಕ್ಕೆ ಆದಿವಾಸಿ ಸಮಾಜ ಎನ್ನಬಹುದು.(A tribe is a group of Local Communities which lives in a common area, speakes a common dialect and follow a common culture)

೫. ಭಾರತದ ಇಂಪೀರಿಯಲ್ ಗೆಜೆಟಿಯರ್(Imperial Gazetteer of India) ಒಂದೇ ಹೆಸರನ್ನು ಹೊಂದಿರುವ, ಒಂದೇ ಭಾಷೆಯನ್ನು ಮಾತನಾಡುವ, ಒಂದೇ ಸ್ಥಳದಲ್ಲಿ ವಾಸ ಮಾಡುವ ಅಥವಾ ವಾಸಿಸಲು ಉದ್ಯುಕ್ತವಾಗಿರುವ, ಪೂರ್ವದಲ್ಲಿ ಒಳಪಂಗಡ ವಿವಾಹ ಪದ್ಧತಿಗೆ ಬದ್ಧವಾಗಿದ್ದಿರಬಹುದಾದರೂ ಈಗ ಹಾಗಿಲ್ಲದ ಕುಟುಂಬದ ಸಮೂಹವನ್ನು ಆದಿವಾಸಿ ಸಮಾಜ ಎನ್ನಬಹುದು.

**ಆದಿವಾಸಿ(ಬುಡಕಟ್ಟು) ಸಮುದಾಯದ ಗುಣಲಕ್ಷಣಗಳು**

೧. **ಸಾಮಾನ್ಯ ಭೂಪ್ರದೇಶ:** ಪ್ರತಿಯೊಂದು ಆದಿವಾಸಿ ಜನಾಂಗವೂ ಒಂದು ನಿರ್ದಿಷ್ಟ ಸ್ಥಳದಲ್ಲಿ ವಾಸಿಸುತ್ತಿರುತ್ತದೆ. ಉದಾಹರಣೆಗೆ: ನಾಗಾ, ರೆಂಗಮನಾಗಾ ಮೊದಲಾದ ಸಮೂಹಗಳು ನಾಗಾಲ್ಯಾಂಡಿನಲ್ಲಿಯೂ, ಗಾರೋ, ಖಾಸಿ, ಖಾಸ ಮೊದಲಾದವು ಅಸ್ಸಾಂನಲ್ಲಿಯೂ, ಗೊಂಡರು, ಭಿಲ್ಲರು ಮಧ್ಯಪ್ರದೇಶದಲ್ಲಿಯೂ, ತೊಡವರು ನೀಲಗಿರಿ ಬೆಟ್ಟಗಳಲ್ಲಿಯೂ, ವೆಡ್ಡ ಜನರು ಸಿಲೋನಿನಲ್ಲಿಯೂ ನೆಲೆಸಿರುವುದನ್ನು ಕಾಣಬಹುದು.

೨. **ವಿಶಿಷ್ಟ ನಾಮಾಂಕಿತ:** ಪ್ರತಿಯೊಂದು ಜಾತಿಗೂ ತನ್ನದೇ ಆದ ನಾಮಾಂಕಿತವಿರುವಂತೆ ಪ್ರತಿಯೊಂದು ಆದಿವಾಸಿ ಸಮೂಹವೂ ತನ್ನದೇ ಆದ ವಿಶಿಷ್ಟವಾದ ಹೆಸರನ್ನು ಹೊಂದಿರುವುದು. ಉದಾಹರಣೆಗೆ: ಲಿಂಬು, ಸಂತ, ಮುಂಡ, ಗೊಂಡ, ಕೋಟ, ಬಡಗ, ಉರಾಳಿ, ತೊಡವ(ಭಾರತದಲ್ಲಿನ ಆದಿವಾಸಿ ಸಮೂಹಗಳು). ರೆಡ್ ಇಂಡಿಯನ್, ಪಿಗ್ಮಿಗಳು, ಎಸ್ಕಿಮೋ, ಹಾಟೆಂಟಾಟ್, ಲಾಂಗೋ, ತೋಂಗರು, ಮುರ್ನ್‌ಜಿನ್(Murngins), ಮೊರ್ಮೋನ್ಸ್(Mormons) ಗಿರ್‌ಗಿಜ್ ಇತ್ಯಾದಿ.

೩. **ಸಾಮಾನ್ಯ ಭಾಷೆ:** ಆದಿವಾಸಿಗಳು ತಮ್ಮದೇ ಆದ ಆಡು ಭಾಷೆಯನ್ನು ಹೊಂದಿರುತ್ತಾರೆ. ಆ ಭಾಷೆಯನ್ನು ಇತರರು ಅರ್ಥ ಮಾಡಿಕೊಳ್ಳುವುದು ಕಷ್ಟವಿದೆ. ಅಂದರೆ ಈ ಭಾಷೆಯು ವಿಶಿಷ್ಟವಾದುದಾಗಿದ್ದು, ನಾಗರಿಕ ಸಮಾಜಗಳ ಭಾಷೆಗಳಿಂದ ಭಿನ್ನವಾಗಿರುವುದು. ಮಾತ್ರವಲ್ಲದೆ, ಉಳಿದ ಆದಿವಾಸಿ ಸಮೂಹಗಳ ಭಾಷೆಗಳಿಂದಲೂ ಪ್ರತ್ಯೇಕವಿರುವುದು. ಇದು ಅವರ ಐಕ್ಯವನ್ನು ಹೆಚ್ಚಿಸಿದೆ. ಆದಿವಾಸಿ ಭಾಷೆಗೆ ಲಿಪಿಯಿಲ್ಲದೇ ಇರುವುದರಿಂದ ಅವರ ಶಿಕ್ಷಣದಲ್ಲಿ ತೊಡಕುಂಟಾಗಿದೆ.

೪. **ಪೂರ್ವಜರಲ್ಲಿ ನಂಬಿಕೆ(Belief in Ancestors):** ಒಂದು ಆದಿವಾಸಿ ಸಮೂಹಕ್ಕೆ ಸೇರಿದವರೆಲ್ಲೂ ತಾವು ಒಬ್ಬ ಸ್ತ್ರೀ ಅಥವಾ ಪುರುಷ ಪೂರ್ವಜರಿಂದ ಜನ್ಮ ತಾಳಿದ್ದೇವೆಂಬ ನಂಬಿಕೆಯನ್ನು ಹೊಂದಿರುವರು. ಈ ಪೂರ್ವಜ ಬಹಳ ಪುರಾತನ ವ್ಯಕ್ತಿಯಾಗಿರಬಹುದು. ಇಲ್ಲವೇ ಇತ್ತೀಚಿನವನಾಗಿರಬಹುದು. ಕುಟುಂಬ, ಕುಲ ಅಥವಾ ವಂಶಪಾರಂಪರ್ಯದ ಆಧಾರದ ಮೇಲೆ ಅವರು ತಮ್ಮ ಪೂರ್ವಿಕರನ್ನು ಪೂಜಿಸುವ ಕ್ರಮವೂ ಅವರಲ್ಲಿ ಆಚರಣೆಯಲ್ಲಿದೆ.

**೫. ರಕ್ತಸಂಬಂಧದ ಬಾಂಧವ್ಯ:** ಆದಿವಾಸಿ ಸಮುದಾಯದಲ್ಲಿ 'ಬಂಧುತ್ವ'ದ ಸಂಬಂಧ (Kinship) ಅಥವಾ ರಕ್ತಸಂಬಂಧ(Blood relation)ಗಳಿಗೆ ಹೆಚ್ಚಿನ ಪ್ರಾಮುಖ್ಯವಿದೆ. ಕುಟುಂಬ, ವಂಶ, ರಕ್ತಸಂಬಂಧ ಮುಂತಾದ ಚಿಕ್ಕ ಸಮೂಹಗಳು ರಕ್ತಸಂಬಂಧದ ಆಧಾರದ ಮೇಲೆ ರಚಿತವಾಗಿವೆ. ಬಂಧು ಪ್ರೇಮದ ತಳಹದಿಯ ಮೇಲೆ ಸಹಕಾರ ಮತ್ತು ಸಂಬಂಧಗಳು ಬೆಳೆಯುತ್ತವೆ. ತಾವೆಲ್ಲರೂ ಒಡನಾಡಿಗಳು ಎಂದು ಅವರು ನಂಬಿರುತ್ತಾರೆ. ಕುಲಗಳು(Clans) ಬೇರೆ ಬೇರೆ ಇದ್ದರೂ ಭ್ರಾತೃಪ್ರೇಮದ ಭಾವನೆಯು ಅವರಲ್ಲಿ ಜಾಗೃತವಿರುತ್ತದೆ.

**೬. ಧಾರ್ಮಿಕ ನಂಬಿಕೆಗಳು:** ಆದಿವಾಸಿ ಜನರು ಧಾರ್ಮಿಕ ನಿಷ್ಠೆಯುಳ್ಳವರೂ ಸಂಪ್ರದಾಯ ಶರಣರೂ ಆಗಿರುವುದು. ಪ್ರಕೃತಿ ಪೂಜೆ, ಪಿತೃಪೂಜೆ ಮತ್ತು ಕುಲದೇವತಾ ಪೂಜೆಗಳನ್ನು (Nature Worship, Ancestral worship and Worship of 'totem') ಅವರು ಆಚರಿಸುವ 'ಸಜೀವವಾದ'ದಲ್ಲಿಯೂ(Animism) ಅವರು ನಂಬಿಕೆ ಇಟ್ಟಿರುವುದು. ಗಿಡ, ಮರ, ಬಳ್ಳಿ ಇವುಗಳಲ್ಲಿಯೂ ಜೀವವಿದೆ ಎಂದು ಅವರು ನಂಬುವರು. ಪ್ರಾಣಿ, ಪಕ್ಷಿಗಳನ್ನು ಅವರು ಪೂಜಿಸುವವರು ಮಾತ್ರವಲ್ಲ, ಕಲ್ಲಿನ ಚೂರು, ಹಕ್ಕಿಯ ಗರಿ, ಪ್ರಾಣಿಯ ಕೊಂಬು ಮುಂತಾದ ಜೀವವಿಲ್ಲದ ವಸ್ತುಗಳನ್ನು ಪೂಜಿಸುವ 'ವಸ್ತು ಪೂಜಾವಾದ'(Fetishism) ಕೂಡಾ ಅವರಲ್ಲಿದೆ. ಆದಿವಾಸಿಗಳ ಸಾಮಾಜಿಕ, ರಾಜಕೀಯ ವ್ಯವಸ್ಥೆಗಳು ಅವರ ಧಾರ್ಮಿಕ ವ್ಯವಸ್ಥೆಯನ್ನು ಆಧರಿಸಿ ನಿಂತಿವೆ. 'ಆದಿವಾಸಿಗಳ ಜೀವನವು ಧರ್ಮದೊಂದಿಗೆ ಲೀನವಾಗಿದೆ. ಅವರ ಇಡೀ ಜೀವನವು ಧರ್ಮದಲ್ಲಿ ಅದ್ದಿ ತೆಗೆದಂತಿದೆ' ಎಂದು ಸರ್. ಜೇಮ್ಸ್ ಫ್ರೇಜರ್ (James Frazer) ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**೭. ರಾಜಕೀಯ ವ್ಯವಸ್ಥೆ:** ಪ್ರತಿಯೊಂದು ಆದಿವಾಸಿ ಜನಾಂಗವು ತನ್ನದೇ ಆದ ಸಾಂಪ್ರದಾಯಿಕ ಆಡಳಿತ ಕ್ರಮವನ್ನು ಹೊಂದಿದೆ. ಆಧುನಿಕ ಅರ್ಥದಲ್ಲಿ ಅಲ್ಲವಾದರೂ ಆದಿವಾಸಿಗಳು ತಮ್ಮದೇ ಆದ ಸರ್ಕಾರವನ್ನು ಹೊಂದಿರುವರು. ಪ್ರತಿಯೊಂದು ಆದಿವಾಸಿ ಸಮೂಹವೂ ತನ್ನದೇ ಆದ ನಾಯಕನನ್ನು ಹೊಂದಿರುವುದು. ನಾಯಕನ ನಿಯುಕ್ತಿಯು ಅನುವಂಶಿಯವಾಗಿ, ಇಲ್ಲವೇ ಚುನಾವಣೆಯ ಮೂಲಕ ನಡೆಯುತ್ತದೆ. ನಾಯಕನು ಗೌರವಾದರಗಳಿಗೆ ಪಾತ್ರನಾಗಿರುವ ವ್ಯಕ್ತಿಯಾಗಿದ್ದು, ಸಮೂಹದ ಕಲ್ಯಾಣದ ಹೊಣೆ ಹೊತ್ತಿರುವವನಾಗಿರುತ್ತಾನೆ.

**೮. ಸರಳ ಸ್ವಯಂಪೂರ್ಣ ಸಮೂಹ:** ಆದಿವಾಸಿ ಸಮುದಾಯವು ಅತ್ಯಂತ ಸರಳವಾದ ಮತ್ತು ಸಂಕೀರ್ಣತೆಯಿಲ್ಲದ ಸಮುದಾಯ. ಆಧುನಿಕ ಜಗತ್ತಿನ ವೈವಿಧ್ಯಪೂರ್ಣ ಜೀವನದಿಂದ ಆದಿವಾಸಿಗಳು ಬಹಳ ದೂರವಿರುವವರು. ಪ್ರಕೃತಿಯೊಂದಿಗೆ, ಪ್ರಾಣಿ ಸಮೂಹಗಳೊಂದಿಗೆ ಸಾಮರಸ್ಯವನ್ನು ಹೊಂದಿರುವ ಜೀವನ ಅವರದು. ಕೃತ್ರಿಮತೆ, ವಂಚನೆ, ಮೋಸ ಇವುಗಳು ಅವರಿಗೆ ತಿಳಿಯವು. ಆದಿವಾಸಿಗಳು ಬಹುಮಟ್ಟಿಗೆ ಸ್ವಯಂಪೂರ್ಣತೆಯನ್ನು ಹೊಂದಿರುವವರು. ಬೇಟೆಯಾಡುವುದು, ಮೀನು ಹಿಡಿಯುವುದು, ಅರಣ್ಯಗಳಿಂದ ಜೇನು, ಹಣ್ಣು-ಹಂಪಲುಗಳು, ಮೇಣ, ಗಡ್ಡೆ-ಗೆಣಸುಗಳು, ಔಷಧೀಯ ಗಿಡಮೂಲಿಕೆಗಳು, ಕಾಡು ಮೆಣಸು ಮುಂತಾದ ಅರಣ್ಯ ಹುಟ್ಟುವಳಿಗಳನ್ನು ಸಂಗ್ರಹಿಸುವುದು ಅವರ ಮುಖ್ಯ ಉದ್ಯೋಗ. ಇತ್ತೀಚೆಗೆ ಅದೇ ಆದಿವಾಸಿಗಳು

ಬೇಸಾಯವನ್ನು ಆರಂಭಿಸಿದ್ದು ನಾಗರೀಕ ಜೀವನದತ್ತ ವಾಲುತ್ತಿದ್ದಾರೆ. ಆರ್ಥಿಕವಾಗಿ ಅವರಲ್ಲಿ ಬಹುತೇಕ ಮಂದಿ ಕಡುಬಡತನದಲ್ಲಿದ್ದಾರೆ. ಅವರ ಆರ್ಥಿಕ ಪರಾವಲಂಬನೆಯೂ ಹೆಚ್ಚುತ್ತಿದೆ.

**೯. ಐಕ್ಯದ ಭಾವನೆ:** ಆದಿವಾಸಿಗಳದ್ದು ಸಂಘಟಿತ ಜೀವನ. ಅವರಲ್ಲಿ ಐಕ್ಯದ ಭಾವನೆ ಎಂದಿಗೂ ಹಚ್ಚ ಹಸಿರಾಗಿಯೇ ಇರುವುದು. ಅಪಾಯ, ಸಂಕಟ, ಸಮಸ್ಯೆಗಳು ಎದುರಾದಾಗ ಐಕ್ಯದ ಭಾವನೆ ಎದ್ದು ತೋರುವುದು. ಸಾಮುದಾಯಿಕ ಭಾವನೆ ಅವರಲ್ಲಿ ತೀವ್ರವಾಗಿದ್ದು, ಸಮೂಹಕ್ಕೋಸ್ಕರ ದೊಡ್ಡ ತ್ಯಾಗಕ್ಕೂ ಅವರು ಸಿದ್ಧರಿರುತ್ತಾರೆ.

**೧೦. ರಕ್ಷಣೆಯ ಅಗತ್ಯ:** ಆದಿವಾಸಿಗಳು ಯಾವಾಗಲೂ ರಕ್ಷಣೆ ಮತ್ತು ಭದ್ರತೆಗೆ ಹೆಚ್ಚಿನ ಮಹತ್ವ ನೀಡುವರು. ಅವರ ಅನುಭವದಲ್ಲಿ ಅದರ ಅಗತ್ಯ ತೀವ್ರವಾಗಿದೆ. ನಾಗರೀಕ ಜನತೆಯ ಸಂಪರ್ಕದ ಸಂದರ್ಭದಲ್ಲಿ ಇದು ಅತೀ ಅಗತ್ಯವಾಗಿರುತ್ತದೆನ್ನುವುದು ಅವರ ಅನಿಸಿಕೆಯಾಗಿದೆ.

**೧೧. ಒಳಪಂಗಡ ವಿವಾಹ ಸಮೂಹ:** ಬಹುತೇಕ ಆದಿವಾಸಿಗಳು ಒಳಪಂಗಡ ವಿವಾಹ ಪದ್ಧತಿಗೆ(Endogamy) ಬದ್ಧರಾಗಿರುವವರು. ತಮ್ಮ ಸಮೂಹದ ಪಾವಿತ್ರ್ಯತೆ, ಐಕ್ಯ, ಸಂಪತ್ತು, ಪ್ರತ್ಯೇಕತೆ ಇವುಗಳನ್ನು ಉಳಿಸಿಕೊಳ್ಳಲು ಪ್ರಾಯಶಃ ಅವರು ಈ ವಿವಾಹದ ನಿಯಮಗಳನ್ನು ಅನುಸರಿಸುವರು. ಆದರೆ ಪ್ರತಿಯೊಂದು ಆದಿವಾಸಿ ಸಮೂಹವೂ ಹಲವು ಕುಲ(Clan)ಗಳ ಸಂಯೋಜನೆಯಿಂದ ಆಗಿದ್ದು, ಪ್ರತಿಯೊಂದು ಕುಲವೂ ಹೊರಪಂಗಡ ವಿವಾಹ(Exogamy) ಪದ್ಧತಿಯನ್ನು ಅನುಸರಿಸುವುದು ಸಾಮಾನ್ಯವಾಗಿದೆ. ಕಾರಣವೇನೆಂದರೆ, ಕುಲದ ಸದಸ್ಯರು ಭ್ರಾತೃ ಸಂಬಂಧವನ್ನು ಹೊಂದುವರೆಂಬ ನಂಬಿಕೆಯಿರುವುದು.

**೧೨. ವಿಶಿಷ್ಟ ಸಂಸ್ಕೃತಿ:** ಪ್ರತಿಯೊಂದು ಆದಿವಾಸಿ ಸಮೂಹವೂ ತನ್ನದೇ ಆದ ಜೀವನ ಕ್ರಮ ಅಥವಾ ಸಂಸ್ಕೃತಿಯನ್ನು ಹೊಂದಿದೆ. ಪ್ರತಿಯೊಂದು ಆದಿವಾಸಿ ಸಮುದಾಯಕ್ಕೂ ತನ್ನದೇ ಆದ ಸಂಸ್ಥೆಗಳು, ರೂಢಿ-ಸಂಪ್ರದಾಯಗಳು, ಲೋಕಾಚಾರಗಳು, ನೈತಿಕ ನಿಯಮಗಳು, ನಂಬಿಕೆ-ಆಚರಣೆಗಳು ಇರುತ್ತವೆ. ಇವು ಇತರೆ ಸಮೂಹಗಳಿಗಿಂತಲೂ ಭಿನ್ನವಾಗಿರುವುದರಿಂದ ಪ್ರತಿ ಸಮೂಹವೂ ವಿಶಿಷ್ಟವಾಗಿರುತ್ತದೆ.

**೧೩. ಸೌಂದರ್ಯದ ಪ್ರಜ್ಞೆ(Aesthetic Sense):** ಆದಿವಾಸಿಗಳು ಸೌಂದರ್ಯೋಪಾಸಕರು. ತಮ್ಮ ಜೀವನದಲ್ಲಿ ಗಾಯನ, ನೃತ್ಯ, ಕೆತ್ತನೆ, ಅಲಂಕಾರ, ವಿಚಿತ್ರ ರೀತಿಯ ಒಡವೆಗಳು ಇವೆಲ್ಲವುಗಳನ್ನು ಅಳವಡಿಸಿಕೊಂಡಿದ್ದು ಕಲೋಪಾಸಕರಾಗಿದ್ದಾರೆ. ಗುಹೆಗಳಲ್ಲಿ, ಬಂಡೆಗಳ ಮೇಲೆ, ತಲೆಬುರುಡೆಗಳ ಮೇಲೆ, ಅವರು ಚಿತ್ರಗಳನ್ನು ಬರೆದಿರುವುದನ್ನು ನೋಡಿದಾಗ ಈ ಅಂಶವು ಸ್ಪಷ್ಟವಾಗುವುದು. ಅವರ ಕೇಶಾಲಂಕಾರ, ಹೂವುಗಳನ್ನು ಮುಡಿಯುವ, ಒಡವೆಗಳನ್ನು ಧರಿಸುವ, ಬಟ್ಟೆಯನ್ನು ತೊಟ್ಟುಕೊಳ್ಳುವ ರೀತಿ, ಶರೀರದ ಮೇಲೆ ಅಲಂಕಾರಿಕವಾಗಿ ಹಚ್ಚೆ ಚುಚ್ಚಿಸಿಕೊಳ್ಳುವ ಕ್ರಮ ಇವೆಲ್ಲವುಗಳಿಂದ ಅವರಲ್ಲಿ ಸೌಂದರ್ಯದ ಪ್ರಜ್ಞೆಯಿದೆ ಎಂದು ಎನ್ನುವುದನ್ನು ತಿಳಿಯಬಹುದು.[೩]

**ಆದಿವಾಸಿ ಎಂಬುದರ ತತ್ಸಮಾನ ಶಬ್ದಗಳು**

ಎಸ್.ಸಿ.ದುಬೆ ಅವರು ಅಭಿಪ್ರಾಯ ಪಟ್ಟಿರುವಂತೆ ಭಾರತದ ಸಾಮಾಜಿಕ ವ್ಯವಸ್ಥೆಯ ಚೌಕಟ್ಟಿನಲ್ಲಿ(ಆದಿವಾಸಿ–Tribe) ಎಂಬ ಶಬ್ದವನ್ನು ಗೊತ್ತುಗುರಿಯಿಲ್ಲದಂತೆ ಬಳಸಲಾಗಿದೆ. (The term tribe is used indiscriminately-S.C.Dube) ಉದಾಹರಣೆಗೆ: ರಿಸ್ಲೆ, ಲೇಸಿ ಮತ್ತು ಎಲ್ವಿನ್(Risely, Lacey and Elwin) ಇವರು ಆದಿವಾಸಿಗಳನ್ನು 'ಎಬೊರಿಜಿನಲ್ಸ್' (Aboriginals–ಮೂಲ ನಿವಾಸಿಗಳು) ಎಂದು ಕರೆದಿದ್ದರು. ಸರ್‌ಬೈನ್ಸ್(Sir Bains) ಎಂಬ ಜನಗಣತಿ ಅಧಿಕಾರಿಯು, ಈ ಸಮೂಹಗಳನ್ನು 'ಹಿಲ್ ಟ್ರೈಬ್ಸ್' (Hill Tribes–ಗುಡ್ಡಗಾಡಿನ ಸಮೂಹಗಳು) ಎಂದು ಕರೆದರು. ಈ ಶಬ್ದಕ್ಕೆ ಸಮಾನವಾಗಿ 'ಜಂಗಲ್ ಪೀಪಲ್' ಅಥವಾ 'ಫಾರೆಸ್ಟ್ ಟ್ರೈಬ್ಸ್' (Jungle People or Forest Tribes) ಎಂಬ ಶಬ್ದಗಳನ್ನು ಅವರು ಬಳಸಿದರು. ಗ್ರಿಸನ್ ಎಂಬುವವರು ಆದಿವಾಸಿಗಳನ್ನು 'ವೈಲ್ಡರ್ ಎಬೋರಿಜಿನಲ್ಸ್(Wilder aboriginals) ಎಂದು ಕರೆದರೆ, ಡಾ.ಹಟ್ಟನ್ (Dr. Hutton) 'ಪ್ರಿಮಿಟಿವ್ ಟ್ರೈಬ್ಸ್(Primitive tribes–ಅಸಂಸ್ಕೃತ ಅಥವಾ ಆದಿಕಾಲದ ಸಮೂಹಗಳು) ಎಂದು ಉಲ್ಲೇಖಿಸಿದ್ದಾರೆ. ಠಕ್ಕರ್ ಭಾಪಾ, ಆದಿವಾಸಿಗಳನ್ನು 'ಆದಿಪ್ರಜಾ' ಎಂದು ಕರೆದಿದ್ದಾರೆ. ಡಾ.ಜಿ.ಎಸ್. ಘುರ್ಯೆ ಪ್ರಕಾರ ಅವರು 'ಹಿಂದುಳಿದ ಹಿಂದುಗಳು'(Backward Hidus), ಡಾ.ದಾಸ್ ಮತ್ತು ದಾಸ್ ಅವರ ಪ್ರಕಾರ ಈ ಸಮುದಾಯವು ಒಂದು ಬಗೆಯ 'ಮುಳುಗಿದ ಜನವರ್ಗ' (Submerged Humanity), ಅಂತರಾಷ್ಟ್ರೀಯ ಕಾರ್ಮಿಕ ಸಂಘಟನೆ'(I.L.O-International Labour Organisation)ಯು ಆದಿವಾಸಿಗಳನ್ನು ದೇಶೀಯ ಜನವರ್ಗ(Indigeneous People) ಎಂದು ಕರೆದಿದೆ.

ಮಹಾತ್ಮ ಗಾಂಧೀಜಿಯವರು ಈ ಸಮೂಹವನ್ನು 'ಗಿರಿಜನರು' ಎಂದು ಕರೆದಿದ್ದು, ಈ ಶಬ್ದವು ಇಂದು ಹೆಚ್ಚು ಪ್ರಚಲಿತದಲ್ಲಿದೆ. ಭಾರತದ ಸಂವಿಧಾನದ ೩೪೨ನೇ ಕಲಂನಲ್ಲಿ ಆದಿವಾಸಿಗಳನ್ನು 'ಪರಿಶಿಷ್ಟ ಪಂಗಡ'ಗಳು(ಪರಿಶಿಷ್ಟ ಬುಡಕಟ್ಟುಗಳು–Scheduled Tribes)ಎಂದು ಉಲ್ಲೇಖಿಸಲಾಗಿದೆ. ಭಾರತದ ಆದಿವಾಸಿಗಳಿಗೆ ಸಂಬಂಧಿಸಿದಂತೆ, ಭಾರತೀಯ ಸಮಾಜಶಾಸ್ತ್ರಜ್ಞ ಎಸ್.ಸಿ.ದುಬೆ ಅವರು ಭಾರತದಲ್ಲಿನ ಸಾಮಾಜಿಕ ಕಾರ್ಯದ ವಿಶ್ವಕೋಶದಲ್ಲಿ(Encyclopedia of Social work in India, Vol.III), ಆದಿವಾಸಿಗಳು ಸಾಂಸ್ಕೃತಿಕ ಸ್ವರೂಪತೆ, ಭಾಷೆ, ಸಂಸ್ಥೆಗಳು, ನಂಬುಗೆಗಳು, ಪದ್ಧತಿಗಳು, ದೃಷ್ಟಿಕೋನ ಮೌಲ್ಯಗಳು ಮುಂತಾದವುಗಳ ದೃಷ್ಟಿಯಿಂದ ಭಾರತೀಯ ಸಮಾಜದ ಉಳಿದ ವರ್ಗಗಳಿಂದ ಬಹಳಷ್ಟು ಭಿನ್ನವಾಗಿದ್ದಾರೆ. ಅವರುಗಳಲ್ಲಿ ಸಮಾನತೆಯಿಲ್ಲದೇ ಇರಬಹುದಾಗಿದ್ದರೂ ಅವರ ಸಮೂಹಗಳಂತೂ ಏಣಿ–ಶ್ರೇಣಿಗಳನ್ನು ಹೊಂದಿರದ ಮತ್ತು ವೈವಿಧ್ಯತೆ ಅಥವಾ ಲಕ್ಷಣಗಳನ್ನು ಒಳಗೊಂಡಿರದ(Non-hierarchic and Undifferentiated) ಸಮೂಹಗಳಾಗಿವೆ.

ಎಸ್.ಸಿ.ದುಬೆಯವರು ಭಾರತದ ಆದಿವಾಸಿಗಳ ಬಗ್ಗೆ ಈ ರೀತಿಯ ವ್ಯಾಖ್ಯೆಯನ್ನು ನೀಡುತ್ತಾರೆ. 'ಆದಿವಾಸಿ ಸಮುದಾಯವು ವಿಶಾಲ ವ್ಯಾಪ್ತಿಯ ಸಾಂಸ್ಕೃತಿಕ ಲಕ್ಷಣಗಳನ್ನು ಸಾಮಾನ್ಯವಾಗಿ ಹಂಚಿಕೊಂಡಿರುವ, ವಾಸ್ತವಿಕವಾದ ಅಥವಾ ವಾಸ್ತವಿಕವೆಂದು ಪ್ರತೀತಿಯಿರುವ ವಂಶಾವಳಿಯನ್ನು

ಹೊಂದಿದ ಮತ್ತು ಸಾಮೂಹಿಕ ಸ್ವರೂಪವನ್ನು ಹೊಂದಿರುವ ಜನಾಂಗೀಯ ಅಥವಾ ಮಾನವ ಬುಡಕಟ್ಟು ಆಗಿದೆ.(Tribe is an ethnic catergory, defined by real or putative descent and characterized by a corporate indentify and a wide range of commonly shared traits of culture- S.C.Dube)

ಭಾರತದ ಸಂವಿಧಾನದ ೩೪೨ನೇ ಕಲಂ ಪ್ರಕಾರ ಆದಿವಾಸಿ ಪಂಗಡಗಳನ್ನು ಪರಿಶಿಷ್ಟ ಬುಡಕಟ್ಟುಗಳು(Sheduled Tribes) ಎಂದು ಕರೆಯಲಾಗಿದೆ. ಸಂವಿಧಾನವು ೪೭೨ ಪರಿಶಿಷ್ಟ ಬುಡಕಟ್ಟುಗಳಿಗೆ ಅಧಿಕೃತ ಮಾನ್ಯತೆಯನ್ನು ಕೊಟ್ಟಿದ್ದರೂ ಈ ಬುಡಕಟ್ಟುಗಳ ಸಂಖ್ಯೆಯು ಇನ್ನೂ ಅಧಿಕವಾಗಿದೆ. ದೇಶದ ಒಟ್ಟು ೩೨೯ ತಾಲ್ಲೂಕುಗಳಲ್ಲಿ ಆದಿವಾಸಿಗಳೇ ಬಹುಸಂಖ್ಯಾತರಾಗಿರುವರು. ಆದಿವಾಸಿಗಳೇ ಪ್ರತಿಶತ ೫೦ಕ್ಕೂ ಸಂಖ್ಯೆಯಲ್ಲಿ ವಾಸಿಸುತ್ತಿರುವ ಸ್ಥಳಗಳನ್ನು ಗುರುತಿಸಲಾಗಿದ್ದು, ಅಂತಹ ಸ್ಥಳಗಳಲ್ಲಿ ಅವರ ಒಟ್ಟು ಜನಸಂಖ್ಯೆಯ ಶೇ.೬೫ರಷ್ಟು ಮಂದಿ ವಾಸಿಸುತ್ತಿದ್ದಾರೆ. ಆದಿವಾಸಿಗಳು ಕೆಲವು ಪ್ರದೇಶಗಳಲ್ಲಿ ಬಹುಸಂಖ್ಯಾತರಾಗಿದ್ದು, ಸಂಖ್ಯೆಯ ಆಧಾರದಿಂದ 'ಪ್ರಬಲ ಸಮೂಹ'ಗಳಾಗಿವೆ. ನಾಗಾಲ್ಯಾಂಡ್, ಮೇಘಾಲಯ, ಅರುಣಾಚಲ ಪ್ರದೇಶ, ಮಿಜೋರಾಂ, ಅಸ್ಸಾಂ, ಮಧ್ಯಪ್ರದೇಶ, ಒರಿಸ್ಸಾ, ಬಿಹಾರ, ಉತ್ತರ ಪ್ರದೇಶ ಮುಂತಾದ ರಾಜ್ಯಗಳಲ್ಲಿ ಆದಿವಾಸಿಗಳು ಗಣನೀಯವಾಗಿ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿದ್ದಾರೆ. ಮಿಜೋರಾಂ, ನಾಗಾಲ್ಯಾಂಡ್, ಮೇಘಾಲಯ, ಅರುಣಾಚಲ ಪ್ರದೇಶ ಮತ್ತು ತ್ರಿಪುರಾ ರಾಜ್ಯಗಳಲ್ಲಿ ಅವುಗಳ ಜನಸಂಖ್ಯೆಯ ಶೇ.೭೦ರಿಂದ ೯೦ರಷ್ಟು ಮಂದಿ ಆದಿವಾಸಿಗಳೇ ಆಗಿದ್ದಾರೆ.

## ೧.೮. ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಪರಿಚಯ ಮತ್ತು ಚಾರಿತ್ರಿಕ ಹಿನ್ನೆಲೆ

ಏಷ್ಯಾ ಖಂಡದಲ್ಲೇ ಜಗತ್ತಿನ ಅತೀ ಪ್ರಾಚೀನ ನಿವೇಶನ ಮತ್ತು ಇತಿಹಾಸವನ್ನು ಹೊಂದಿದ ಜಿಲ್ಲೆ ಚಿತ್ರದುರ್ಗ. ಮಧ್ಯಕರ್ನಾಟಕದಲ್ಲಿರುವ ಚಿತ್ರದುರ್ಗ, ಉತ್ತರಕರ್ನಾಟಕ ಮತ್ತು ದಕ್ಷಿಣ ಕರ್ನಾಟಕಕ್ಕೆ ರಾಯಭಾರಿಯಂತೆ ಇದೆ. ಬ್ರಿಟೀಷರ ಕಾಲದಲ್ಲಿ ಚಿಟಲ್ ಟ್ರೂಗ್ ಎಂದು ಹೆಸರಿತ್ತು. ಅದಕ್ಕೂ ಹಿಂದೆ ಸೀತಳ ಅಥವಾ ಚಿತ್ರಕಲ್ಲು ದುರ್ಗ, ಚಿತ್ತರಕಲ್ಲು, ಸಿದ್ಧರಕಲ್ಲು, ಚಿತ್ತಮಲೆಗುಡ್ಡ ಎಂದು ಕರೆಯುತ್ತಿದ್ದರು. ಮಧ್ಯಕಾಲದಲ್ಲಿ ಸೂಳ್ಗಲ್ಲು, ಸೂಳನಕಲ್ಲು, ಬೊಮ್ಮತ್ತನಕಲ್ಲು, ಬೆಮ್ಮತ್ತನೂರು ಅಥವಾ ಬೆಮ್ಮತ್ತೂರು ಎಂದು ಕರೆಯುತ್ತಿದ್ದುದರ ಬಗ್ಗೆ ಉಲ್ಲೇಖಗಳಿವೆ.

ಈ ಜಿಲ್ಲೆಯ ಗಡಿಭಾಗಗಳೆಂದರೆ ಉತ್ತರಕ್ಕೆ ಬಳ್ಳಾರಿ, ಪೂರ್ವಕ್ಕೆ ಅನಂತಪುರ(ಆಂಧ್ರಪ್ರದೇಶ), ಆಗ್ನೇಯ ದಿಕ್ಕಿಗೆ ತುಮಕೂರು, ಪಶ್ಚಿಮಕ್ಕೆ ದಾವಣಗೆರೆ, ವಾಯುವ್ಯಕ್ಕೆ ಧಾರವಾಡ ಮತ್ತು ನೈಋತ್ಯಕ್ಕೆ ಚಿಕ್ಕಮಗಳೂರು ಜಿಲ್ಲೆಗಳಿಂದ ಸುತ್ತುವರೆಯಲ್ಪಟ್ಟಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಚಿತ್ರದುರ್ಗ, ಹಿರಿಯೂರು, ಹೊಸದುರ್ಗ, ಹೊಳಲ್ಕೆರೆ, ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಿವೆ.

ಚಿತ್ರದುರ್ಗ ಜಿಲ್ಲೆ ೧೩.೩೪ ಡಿಗ್ರಿ ಮತ್ತು ೧೫.೨೦ ಡಿಗ್ರಿ ಅಕ್ಷಾಂಶ ಮತ್ತು ೭೫.೩೭ ಡಿಗ್ರಿ ಮತ್ತು ೭೭.೦೧ ಡಿಗ್ರಿ ರೇಖಾಂಶದಲ್ಲಿದೆ. ಜಿಲ್ಲೆಯ ವಿಸ್ತೀರ್ಣ ೧೦.೮೨೫ ಚ.ಕಿ.ಮೀ. ಇದ್ದು, ಉತ್ತರ ದಕ್ಷಿಣವಾಗಿ ೮೮ ಕಿ.ಮೀ. ಪೂರ್ವ ಪಶ್ಚಿಮವಾಗಿ ಸುಮಾರು ೧೦೦ ಕಿ.ಮೀ. ವಿಸ್ತಾರದಲ್ಲಿದೆ.

ಈ ಜಿಲ್ಲೆ ದಖನ್ ಪ್ರಸ್ಥಭೂಮಿ ಭಾಗವಾಗಿದ್ದು, ರಾಜ್ಯದಲ್ಲಿ ಕಡಿಮೆ ಮಳೆ ಬೀಳುವ ಪ್ರದೇಶದಲ್ಲಿ ಎರಡನೇ ಸ್ಥಾನದಲ್ಲಿದೆ. ವಾರ್ಷಿಕ ಮಳೆ ಪ್ರಮಾಣ ೬೫೫ ಮಿ.ಮೀ. ಇದೆ. ಆಗಾಗ ಈ ಜಿಲ್ಲೆ ಅನಾವೃಷ್ಟಿಗೆ ಒಳಗಾಗಿ ಬರಗಾಲವನ್ನು ಅನುಭವಿಸುತ್ತದೆ.

ಚಿತ್ರದುರ್ಗ ಪ್ರದೇಶವೆಂದರೆ ಬೆಟ್ಟ-ಗುಡ್ಡ ಕೋಟೆಗಳು ಗೋಚರಿಸುವುದು ಸಹಜವಾಗಿದೆ. ಸ್ಥಳೀಯವಾಗಿ ಅವುಗಳಿಗೆ ಅನೇಕ ಹೆಸರುಗಳಿಂದ ಕರೆಯಲಾಗಿದೆ. ಅವುಗಳಲ್ಲಿ ಮೊಳಕಾಲ್ಮೂರು ತಾಲ್ಲೂಕಿನ ಜಟಿಂಗರಾಮೇಶ್ವರ ಬೆಟ್ಟ(೩೪೬೯ ಅಡಿ), ಬ್ರಹ್ಮಗಿರಿ ಬೆಟ್ಟ(೨೩೧೭ ಅಡಿ), ಸುಂಕಪ್ಪನ ಗುಡ್ಡ(೩೦೨೨ ಅಡಿ), ಜೋಗಪ್ಪನ ಗುಡ್ಡ (೨೯೩೬ ಅಡಿ), ಹೊಳಲ್ಕೆರೆ ತಾಲ್ಲೂಕಿನ ದೊಡ್ಡಹಟ್ಟಿ, ರಂಗಪ್ಪನಗುಡ್ಡ, ತಿರುಮಲ ದೇವರ ಗುಡ್ಡ, ಹಾಲುರಾಮೇಶ್ವರ, ಜೋಗಿಮಟ್ಟಿ (೩೮೦೩ ಅಡಿ), ಧವಳಪ್ಪನ ಗುಡ್ಡ (೩೨೮೫ ಅಡಿ), ಭೀರನಕಲ್ಲು ಗುಡ್ಡ(೩೮೬೩ ಅಡಿ), ಈಚಲುಗುಡ್ಡ(೩೮೦೪ ಅಡಿ), ಓಬಳದೇವರಗುಡ್ಡ ಮುಂತಾದವುಗಳು ಕಂಡುಬರುತ್ತವೆ.

ಜಲಸಂಪತ್ತಿನಲ್ಲಿ ಈ ಜಿಲ್ಲೆ ಮಹತ್ತರವಾದ ಸ್ಥಾನವೇನೂ ಪಡೆದಿಲ್ಲ. ವೇದಾವತಿ, ಚಿನ್ನಹಗರಿ (ಜನಿಗೆ ಹಳ್ಳ), ಸುವರ್ಣಮುಖಿ, ಮುಂತಾದ ನದಿಗಳು ಹರಿದು ನೀರಾವರಿ ಸೌಲಭ್ಯವನ್ನು ಒದಗಿಸಿವೆ. ಈ ಜಿಲ್ಲೆಯಲ್ಲಿ ವೇದಾವತಿ ನದಿ ೨೦೮ ಕಿ.ಮೀ. ಜನಗಿಹಳ್ಳ ೧೨೮ ಕಿ.ಮೀ., ಸುವರ್ಣಮುಖಿ ನದಿ ೧೧ ಕಿ.ಮೀ. ಹರಿದು, ೨೦೨೦ ಎಕರೆಗೆ ನೀರನ್ನು ಒದಗಿಸುತ್ತವೆ. ವಾಣಿವಿಲಾಸಸಾಗರ ಆಣೆಕಟ್ಟು ೧೦,೦೦೦ ಹೆಕ್ಟೇರ್, ಗಾಯತ್ರಿ ಜಲಾಶಯದಿಂದ ೬೨೮ ಹೆಕ್ಟೇರು, ರಂಗಯ್ಯನದುರ್ಗ, ಜಲಾಶಯದಿಂದ ಸುಮಾರು ೧೦೦೦ ಎಕರೆಗೆ ನೀರಾವತಿ ಸೌಲಭ್ಯವಾಗಿದೆ. ಚಂದ್ರವಳ್ಳಿ, ರಾಣಿಕೆರೆ, ನಾಯಕನಹಟ್ಟಿ, ಭರಮಸಾಗರ, ಗೌರಸಮುದ್ರ, ನಾಗಸಮುದ್ರ, ಗೋನೂರು, ಪರಶುರಾಮಪುರ, ಬುಕ್ಕಂಬೂದಿ ಮುಂತಾದ ಪ್ರಾಚೀನ ಕೆರೆಗಳಿಂದಲೂ ನೀರಾವರಿಯಾಗುತ್ತದೆ.

ಈ ಜಿಲ್ಲೆಯ ಪ್ರಮುಖ ನದಿ ವೇದಾವತಿ. ವೇದ ಮತ್ತು ಅವತಿ ಎಂಬ ಎರಡು ಹೊಳೆಗಳು ಸೇರಿ ವೇದಾವತಿ ನದಿಯಾಗಿ ಹರಿಯುತ್ತವೆ. ಹೊಸದುರ್ಗದ ಮೂಲಕ ಹರಿದುಬಂದು ಬ್ರಹ್ಮಗಿರಿ ದುರ್ಗದಿಂದ ವಾಣಿವಿಲಾಸ ಸಾಗರ ಸೇರುತ್ತದೆ. ನಂತರ ಹಿರಿಯೂರು ತಾಲ್ಲೂಕಿನಿಂದ ಚಳ್ಳಕೆರೆ ತಾಲ್ಲೂಕನ್ನು ಪ್ರವೇಶಿಸಿ, ಘಟಪರ್ತಿಯಿಂದ ಆಂಧ್ರಪ್ರದೇಶಕ್ಕೆ ಹರಿದು, ತರುವಾಯ ಚಿನ್ನಹಗರಿ ನದಿಯನ್ನು ಸೇರುತ್ತದೆ. ಜನ್ನಿಗೆ ಹಳ್ಳ ಅಥವಾ ಚಿನ್ನಹಗರಿ ನದಿ ಈ ಭಾಗದ ಜನರಿಗೆ ಪವಿತ್ರವಾದುದು. ಈ ನದಿ ಆಧ್ಯಾತ್ಮಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಬೇಡ ಬುಡಕಟ್ಟಿನ ಸಮುದಾಯಕ್ಕೆ ಆವಾಸದ ನೆಲೆಯಾಗಿದೆ. ಗಂಗೆ ಪೂಜೆ, ಹಬ್ಬ ಜಾತ್ರೆಗಳಲ್ಲದೆ, ವಾಸಿಸುವ ಮನೆಗೆ ಆಪು ಕೊಯ್ಯಲು, ಮೀನು ಹಿಡಿಯಲು, ಕುರಿಮೇಕೆಗಳನ್ನು ಮೇಯಿಸಲು ಮತ್ತು ಮಡುವಿನಲ್ಲಿ ಸ್ನಾನ ಮಾಡಿಸಲು ನೆರವಾಗಿದೆ. ಈ ನದಿಯು ಚಿತ್ರದುರ್ಗ ಸಮೀಪದ ಬೆಟ್ಟಗಳಲ್ಲಿ ಹುಟ್ಟಿ, ಹೊಳಲ್ಕೆರೆ, ಚಿತ್ರದುರ್ಗ ಜಗಳೂರು ತಾಲ್ಲೂಕುಗಳ ಮೂಲಕ ಕೂಡ್ಲಿಗಿ ತಾಲ್ಲೂಕಿನಲ್ಲಿ ಹರಿದು ಮುಂದೆ ರಾಯದುರ್ಗ ತಾಲ್ಲೂಕನ್ನು ಪ್ರವೇಶಿಸಿ ತುಂಗಭದ್ರಾ ನದಿ ಸೇರುತ್ತದೆ. ಇದಕ್ಕೆ ಮೊಳಕಾಲ್ಮೂರು ಸಮೀಪ ರಂಗಯ್ಯನದುರ್ಗ ಜಲಾಶಯವನ್ನು ನಿರ್ಮಿಸಿದ್ದಾರೆ. ಭಟ್ಟರಹಳ್ಳಿ, ದೇವಸಮುದ್ರ ಕೆರೆಗಳ ನೀರು ಹರಿದುಬಂದು ಈ

ನದಿಯನ್ನು ಸೇರುತ್ತದೆ. ಸುವರ್ಣಮುಖಿ ಇಲ್ಲಿನ ಪ್ರಮುಖ ಹೊಳೆ. ಇದರ ಮೂಲ ತುಮಕೂರು ಜಿಲ್ಲೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸುಮಾರು ೭ ಕಿ.ಮೀ. ಹರಿಯುತ್ತದೆ. ಹಿರಿಯೂರು ತಾಲೂಕಿನ ಕೂಡಲಹಳ್ಳಿಯ ಬಳಿ ಈ ಹೊಳೆ ವೇದಾವತಿ ನದಿಯನ್ನು ಸೇರುತ್ತದೆ.

ಚಳ್ಳಕೆರೆ ತಾಲ್ಲೂಕಿನ ರಾಣಿಕೆರೆಗೆ ಫೀಡರ್‌ನಾಲೆ, ಹಿರಿಯೂರು, ಧರ್ಮಪುರ ಫೀಡರ್ ನಾಲೆಗಳಿಂದ ನೀರಾವರಿ ಕೃಷಿ ನಡೆಯುತ್ತದೆ. ಚಿತ್ರದುರ್ಗ ಜಿಲ್ಲೆಯ ೩೭೦ ಚ.ಕಿ.ಮೀ. ವ್ಯಾಪ್ತಿಯಲ್ಲಿ ೩೦ ರಕ್ಷಿತ ಅರಣ್ಯ ಪ್ರದೇಶಗಳಿವೆ. ಹೆಚ್ಚು ಭಾಗ ಕಣಶಿಲೆಯ ಬೋಳು ಬೆಟ್ಟಗಳಿಂದ ಕೂಡಿದ್ದು, ಅಲ್ಲಲ್ಲಿ ಕಣಿವೆಗಳಿಂದ ಕೂಡಿದೆ. ಬೆಟ್ಟದ ಸಾಲು ದಕ್ಷಿಣ ಆಗ್ನೇಯದಿಂದ ಉತ್ತರ ವಾಯುವ್ಯದ ಕಡೆಗೆ ಸಮಾನಾಂತರದಲ್ಲಿ ಸಾಗಿವೆ. ಪೂರ್ವದ ಸಾಲು ಹಿರಿಯೂರಿನ ಪಶ್ಚಿಮದಿಂದ ಕಂಡುಬರುತ್ತದೆ. ಅರಣ್ಯ ಪ್ರದೇಶ ಜಿಲ್ಲೆಯಲ್ಲಿ ವ್ಯಾಪಕವಾಗಿದೆ. ಮುತ್ತಿಗಾರಹಳ್ಳಿ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ ಸುಮಾರು ೧೦ ಕಿ.ಮೀ. ಉದ್ದದ ರಸ್ತೆ ಹಾದುಹೋಗುತ್ತದೆ. ಈ ಪ್ರದೇಶದಲ್ಲಿ ಸುಂದರವನ, ತೋಟ, ನದಿ, ಹಳ್ಳಕೊಳ್ಳಗಳಿಂದ ಕೂಡಿದೆ. ತೋಟ, ಸಸ್ಯಕ್ಷೇತ್ರಗಳಲ್ಲಿ ಪರಿಸರ ಸಂಬಂಧಿತ ಕೆಲಸಗಳು ನಡೆಯುತ್ತವೆ. ಫಲವತ್ತಾದ ಮಣ್ಣಿಲ್ಲದೇ ಇರುವುದರಿಂದ ನಿರೀಕ್ಷಿತ ಬೆಳೆ ಪಡೆಯುವುದು ಕಷ್ಟ. ಇಲ್ಲಿನ ಸಸ್ಯಕ್ಷೇತ್ರಕ್ಕೆ ಇಂದಿರಾ ಪ್ರಿಯದರ್ಶಿನಿ ಪ್ರಶಸ್ತಿ ಲಭಿಸಿದೆ.

**ಚಿತ್ರದುರ್ಗ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ**

ಚಿತ್ರದುರ್ಗ ಪ್ರದೇಶದಲ್ಲಿ ಕೋಟೆ-ಕೊತ್ತಲಗಳ ಪ್ರದೇಶ ಕಣ್ಣಿಗೆ ಗೋಚರವಾಗುತ್ತದೆ. ಕರ್ನಾಟಕದ ಮೂಲೆ ಮೂಲೆಗಳಲ್ಲೂ ಈ ಜಿಲ್ಲೆಯ ಇತಿಹಾಸ ಮನೆಮಾತಾಗಿದೆ. ಅಸಾಧಾರಣವಾದ ಸಾಧನೆಗಳ ಪ್ರತೀಕ ಹುಟ್ಟಿಕೊಂಡ ಕಥೆಗಳು, ಅಪಾರ ಕುತೂಹಲ ಕೆರಳಿಸುವ ಕೋಟೆ, ದೇವಾಲಯ, ಮುದ ನೀಡುವ ಸರಳ ಭಾಷೆ ಇತ್ಯಾದಿ ಲಕ್ಷಣಗಳಿಂದ ಈ ಜಿಲ್ಲೆ ನಾಡಿನ ಉದ್ದಗಲಕ್ಕೂ ಚಿರಪರಿಚಿತವಾಗಿದೆ. ಚಂದ್ರವಳ್ಳಿಯ ಭೂ ಶೋಧನೆಗಿಂತ ಮೊದಲು(೧೯೨೯) ಚಿತ್ರದುರ್ಗದ ಇತಿಹಾಸವನ್ನು ಪುರಾಣ, ದಂತಕಥೆಗಳ ಮೂಲಕ, ದ್ವಾಪರಯುಗದಿಂದ ಹೇಳುತ್ತಾ ಬರುತ್ತಿದ್ದರು. ಸ್ಥಳೀಯರು ಭಾರತ ದೇಶದೊಂದಿಗೆ ಸಂಬಂಧ ಕಲ್ಪಿಸದೇ ಮಹಾಭಾರತದ ಮೂಲಕ ಗುರುತಿಸುತ್ತಾರೆ. ಚಿತ್ರದುರ್ಗ ಬೆಟ್ಟದಲ್ಲಿ, ಹಿಡಿಂಬಾಸುರ ವಾಸಿಸುತ್ತಿದ್ದನೆಂಬ ಪ್ರತೀತಿಯಿದೆ. ಪಾಂಡವರು ವನವಾಸ ಬಂದಾಗ ಕುಂತಿಯ ರಾಜಕುಮಾರನಾದ ಭೀಮನಿಗೆ ಮತ್ತು ಹಿಡಂಬಾಗೆ ಯುದ್ಧ ನಡೆದುದು ಇಲ್ಲಿನ ಪ್ರದೇಶದಲ್ಲಿ. ಇಂದಿಗೂ ಇವರ ಸಂಕೇತಕ್ಕೆ ಹಿಡಂಬೇಶ್ವರ ಮತ್ತು ಸಿದ್ದೇಶ್ವರ ದೇವಾಲಯಗಳೇ ಸಾಕ್ಷಿ. ಹಿಡಂಬೇಶ್ವರ, ಧರ್ಮೇಶ್ವರ, ಭೀಮೇಶ್ವರ, ಫಾಲ್ಗುಣೇಶ್ವರ, ನಕುಲೇಶ್ವರ ಮತ್ತು ಸಹದೇವೇಶ್ವರ ದೇವಾಲಯಗಳನ್ನು ನಿಮಿಸಲಾಗಿದೆ. ಮಹಾಭಾರತದ ಕಥೆ ಪ್ರಕಾರ ಭೀಮ, ಹಿಡಂಬಿ ಎನ್ನುವ ರಾಕ್ಷಸಿಯನ್ನು ಮದುವೆಯಾಗುತ್ತಾನೆ. ಇವಳು ಹಿಡಿಂಬಾ ರಾಕ್ಷಸನ ತಂಗಿ. ಇವರು ವಾಸಿಸಿದ್ದರೆಂದು ಹೇಳಲಾಗುವ ಕುಂತಲನಗರ ಅಥವಾ ಕುಪ್ಪಟುರು ಎನ್ನುವ ರಾಜಧಾನಿ ಶಿವಮೊಗ್ಗ ಉತ್ತರಕ್ಕಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ 'ಅಸುರ' ಎಂಬ ಸ್ಥಳದಿಂದ ಹರಿಹರ, ದಾವಣಗೆರೆ ನಿರ್ಮಾಣವಾಗಿದೆ ಎನ್ನುತ್ತಾರೆ. ಒಂದು ಮೂಲದ ಕಥೆಯ ಪ್ರಕಾರ ದೈತ್ಯ ಎನ್ನುವ ಗುಹಸುರ, ದೇವರನ್ನು ಒಳಿಸಿಕೊಳ್ಳುವಲ್ಲಿ

ಹರಿ ಮತ್ತು ಹರರ ಪಾತ್ರ ದೊಡ್ಡದು. ಜನಮೇಜಯನೆಂಬ ಖ್ಯಾತನಾದ ಅರ್ಜುನನ ಮೊಮ್ಮಗ ಚಕ್ರಾಧಿಪತ್ಯ ಸ್ಥಾಪಿಸಿ, ಕಿಷ್ಕಿಂದೆಯನ್ನು ಆಳಿದವನೆಂದು ಹೇಳಲಾಗುತ್ತದೆ. ರಾಮಾಯಣದ ಸಂಬಂಧವನ್ನು ಸಾರುವ ಜಟಂಗಿರಾಮೇಶ್ವರ, ಬ್ರಹ್ಮಗಿರಿ ಪ್ರದೇಶಗಳು ಈ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿದೆ. ಜಟಾಯು ಎಂಬ ಪಕ್ಷಿ ಸೀತೆಯನ್ನು ಕದ್ದು ಒಯ್ಯುತ್ತಿದ್ದ ರಾವಣನನ್ನು ತಡೆದಾಗ ಅವನಿಂದ ಸಂಹಾರಕ್ಕೆ ಒಳಗಾಯಿತು. ಪುರಾಣದ ಕಾಲದಲ್ಲಿ ಈ ಪ್ರದೇಶವನ್ನು 'ಅಸುರರ ನಾಡು' ಎನ್ನುತ್ತಿದ್ದರು. ಈಗ ಅಸುರರು, ರಾಕ್ಷಸರು, ದೈತ್ಯರು ಎಂದು ಸಾಂಪ್ರದಾಯಿಕವಾಗಿ ವ್ಯಾಖ್ಯಾನಿಸುತ್ತಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಶಿಲಾಯುಗ, ಆದಿಶಿಲಾಯುಗ, ಮಧ್ಯಶಿಲಾಯುಗ ಮತ್ತು ನವಶಿಲಾಯುಗ, ಬೃಹತ್ ಶಿಲಾಸಂಸ್ಕೃತಿ ಮುಂತಾದ ನೆಲೆಗಳನ್ನು ಶೋಧನೆ ಮಾಡಿದ್ದಾರೆ. ಐತಿಹಾಸಿಕವಾಗಿ ಇಲ್ಲಿ ಗಿರಿಕಂದರಗಳಿರುವುದರಿಂದಾಗಿ ಬೇಟೆಗಾರಿಕೆ ಸಮುದಾಯಗಳಿದ್ದವು. ಕ್ರಿ.ಪೂ.೪ನೇ ಶತಮಾನದಲ್ಲಿ ನಂದರು ಇಲ್ಲಿ ಆಳ್ವಿಕೆಯನ್ನು ನಡೆಸಿದ್ದಾರೆ. ಪುರಾಣಗಳ ಪ್ರಕಾರ ಕಾಳಿಂಗವನ್ನು ರಾಜಧಾನಿಯಾಗಿ ಮಾಡಿಕೊಂಡು ಇಡೀ ಭಾರತವನ್ನು ಆಳುವುದರ ಬಗ್ಗೆ ಕಾರವೇಲನ ಹಥಿಗುಂಪು ಶಾಸನದಲ್ಲಿದೆ. ಕ್ರಿ.ಪೂ. ೭ನೇ ಶತಮಾನದಲ್ಲಿ ನಂದರು, ಕುಂತಲ ಪ್ರದೇಶವನ್ನು ಮೈಸೂರು ಪ್ರದೇಶದ ೨/೩ನೇ ಭಾಗವನ್ನು ಆಳುತ್ತಿದ್ದರು. ಉತ್ತರ ಭಾರತ, ಸಿಲೋನ್, ಕುಂತಲ ಪ್ರದೇಶಗಳನ್ನು ಆಳಿದ ನಂದರು, ಕದಂಬ ರಾಜವಂಶಕ್ಕೆ ಸಂಬಂಧಿಸಿದವರು.

ಮೌರ್ಯರು ಇಲ್ಲಿ ಪ್ರಬಲರಾಗಿದ್ದುದರ ಬಗ್ಗೆ ರಾಜ್ಯ ಆಳ್ವಿಕೆ, ಪ್ರಜಾ ಸೇವೆ ಇತ್ಯಾದಿ ವಿವರಗಳನ್ನು ಶಾಸನಗಳು ತಿಳಿಸುತ್ತವೆ. ಸಾಂಪ್ರದಾಯಿಕವಾಗಿ ನಂದ ಸಾಮ್ರಾಜ್ಯ, ಅಶೋಕನ ಕಾಲದಲ್ಲಿ ಮೌರ್ಯ ಸಾಮ್ರಾಜ್ಯದ ಎದುರು ನಿತ್ರಾಣರಾಗಿದ್ದ ಪರಿಸ್ಥಿತಿ ಉಂಟಾಗುತ್ತದೆ. ಟಿಬೇಟ್‌ನ ಇತಿಹಾಸಕಾರ ತಾರನಾಥನು ಅಶೋಕನ ತಂದೆ ಬಿಂದುಸಾರನ ಅವಧಿಯಲ್ಲಿ ಇಲ್ಲಿಗೆ ಬಂದಿದ್ದನಂತೆ. ಅಶೋಕನ ಶಾಸನಗಳನ್ನು ೧೮೯೨ರಲ್ಲಿ ಬಿ.ಎಲ್.ರೈಸ್ ಅವರು ಆಗಿನ ಮೈಸೂರು ಪ್ರಾಂತ್ಯದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಮೂರು ಶಾಸನಗಳನ್ನು ಶೋಧಿಸಿದ್ದಾರೆ. ಸಿಲೋನಿನ ಮಹಾವಂಶದ ಪ್ರಕಾರ ಅಶೋಕ ಚಕ್ರವರ್ತಿ ಮೈಸೂರು ಪ್ರದೇಶದೊಂದಿಗೆ ಸಂಬಂಧವನ್ನು ಹೊಂದಿದ್ದನು ಎನ್ನುತ್ತವೆ. ಅಶೋಕನ ಶಿಲಾಶಾಸನ, ಚಿನ್ನಹಗರಿ ನದಿ ದಂಡೆಯ ಮೇಲಿರುವ ಸಿದ್ಧಾಪುರದ ಬಳಿಯಿದೆ. ಇದರ ಸಾರ ಸಂಗತಿಯೆಂದರೆ ದೇವನಾಂಪ್ರಿಯ, ರಾಜನಿಗೆ (ಆಯಪುತ್ರ), ಅಧಿಕಾರಿಗಳಿಗೆ(ಮಹಾಮಾತ್ರರು), ಸುವರ್ಣಗಿರಿ ಮುಖ್ಯ ಕೇಂದ್ರದಿಂದ ಹೇಳಿದ ವಿಚಾರಗಳಿವೆ. ರಾಜನೀತಿಯಲ್ಲಿ ಅಹಿಂಸೆಯನ್ನು ಅಳವಡಿಸಿದ ಸಂಗತಿ ಅಶೋಕನ ಕೀರ್ತಿಗೆ ಸಾಕ್ಷಿಯಾಗಿದೆ.

ಮೌರ್ಯರ ನಂತರ ಕದಂಬರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಾರೆ. ಚಂದ್ರವಳ್ಳಿಕೆರೆ, ಶಾಸನ, ದೇವಾಲಯಗಳು ಇವರ ಕಾಲದ ಹೆಗ್ಗುರುತುಗಳು, ಗಂಗರು, ಚಾಲುಕ್ಯರು ಇಲ್ಲಿ ಆಳ್ವಿಕೆ ನಡೆಸಿದ ಬಗ್ಗೆ ತಿಳಿದುಬರುತ್ತದೆ. ತೈಲಪ, ವಿಕ್ರಮಾದಿತ್ಯ ಅರಸರ ಕಾಣಿಕೆಗಳು ಅಪಾರವಾಗಿವೆ. ಚೋಳರ ಆಳ್ವಿಕೆಯಲ್ಲಿ ಅನೇಕ ಯುದ್ಧಗಳು ಇಲ್ಲಿ ಸಂಭವಿಸಿವೆ. ನೊಳಂಬವಾಡಿಯನ್ನು ಜಗದೇಕ ಪಾಂಡ್ಯ ಮತ್ತು ವಿಜಯಪಾಂಡ್ಯ ಪಡೆಯಲು ಹವಣಿಸುತ್ತಿದ್ದರು. ಹೊಯ್ಸಳರ ಕಾಲದಲ್ಲಿ ಅನೇಕ

ಸುಧಾರಣೆಗಳನ್ನು ಈ ಪ್ರದೇಶ ಕಂಡಿದೆ. ಪೆರುಮಾಳದೇವ ದಂಡನಾಯಕ ಇಲ್ಲಿನ ಆಡಳಿತ ಉಸ್ತುವಾರಿಯನ್ನು ನೋಡುತ್ತಿದ್ದರೆ, ಈ ಜಿಲ್ಲೆಗೆ ಎರಡನೇ ಬಲ್ಲಾಳ ಸಾಕಷ್ಟು ಪ್ರೋತ್ಸಾಹಿಸುತ್ತಿದ್ದನು. ನಂತರ ವಿಜಯನಗರ ಕಾಲದಲ್ಲಿ ಇದು ಹೃದಯ ಭಾಗವಾಗಿತ್ತು. ದೇವರಾಯ, ಚಿತ್ರದುರ್ಗದ ಕಲಾಪೋಷಣೆ, ಇತರೆ ಸುಧಾರಣೆಗಳನ್ನು ಮಾಡಿರುವುದು ಸ್ಮರಣೀಯ. ಬೇಟೆಗೆ ಬಂದ(ಗಜಬೇಟೆಗಾರ) ಪ್ರೌಢದೇವರಾಯ ಇಲ್ಲಿನ(ಮೊಳಕಾಲ್ಮೂರು) ಹಳ್ಳಿಗಳನ್ನು ಕಾಣಿಕೆ ಕೊಡುತ್ತಾನೆ. ದೇವರ ಪೂಜೆಗೆ ಎಣ್ಣೆಯನ್ನು ಹಾಕಿಸುವುದನ್ನು ಇಲ್ಲಿನ ಮಚ್ಚೇನಹಳ್ಳಿ ಶಾಸನ ತಿಳಿಸುತ್ತದೆ.

ವಿಜಯನಗರ ಅರಸರಿಂದ ನಿಯೋಜಿಸಲ್ಪಟ್ಟ ಸ್ಥಳೀಯ ಪಾಳೆಯಗಾರರು ಇಲ್ಲಿ ಭವ್ಯ ಆಡಳಿತ ನಡೆಸಿದ್ದಾರೆ. ಸುಮಾರು ಎರಡು ಶತಮಾನಗಳಿಗೂ ಹೆಚ್ಚು ಕಾಲ ಈ ಪಾಳೆಯಗಾರರು ಆಳ್ವಿಕೆ ನಡೆಸಿದರು. ಅವರಲ್ಲಿ ಪ್ರಮುಖರೆಂದರೆ ತಿಮ್ಮಣ್ಣನಾಯಕ, ಚಿಕ್ಕಣ್ಣನಾಯಕ, ಭರಮಪ್ಪನಾಯಕ, ಕಸ್ತೂರಿರಂಗಪ್ಪನಾಯಕ, ಮದಕರಿನಾಯಕ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಅಭಿವೃದ್ಧಿಗೊಂಡ ಚಿತ್ರದುರ್ಗಕ್ಕೆ ಮಹಾತಿರುವು ಬಂದಿದ್ದು ಪಾಳೆಯಗಾರರಿಂದಲೇ. ಇವರ ಆಳ್ವಿಕೆಯ ಅವಧಿಯಲ್ಲಿ ಅನೇಕ ಸಮಾಜ ಸುಧಾರಣಾ ಕೆಲಸಗಳಾಗಿವೆ. ಇವರ ಸಮಕಾಲೀನರಾಗಿ ಹರತಿ, ಮತ್ತೋಡು, ನಾಯಕನಹಟ್ಟಿ, ಮೊಳಕಾಲ್ಮೂರು, ರಾಯದುರ್ಗ ಮೊದಲಾದ ಆಳ್ವಿಕೆ ನಡೆಸುತ್ತಿದ್ದ ಇತರೇ ಪಾಳೆಯಗಳಾಗಿವೆ.

ಮೈಸೂರು ಅರಸ ೩ನೇ ಕೃಷ್ಣರಾಜ ಒಡೆಯರ ಕಾಲದಲ್ಲಿ ೬ ಫೌಜುದಾರಿಗಳು, ೧೦೧ ಉಪವಿಭಾಗದ ತಾಲ್ಲೂಕುಗಳಿದ್ದವು. ಚಿತ್ರದುರ್ಗ ಜಿಲ್ಲೆಗೆ ೧೩ ತಾಲ್ಲೂಕುಗಳು ಅಂದು ಸೇರಿದ್ದವು. ೧೮೩೪ರಲ್ಲಿ ೬ ಫೌಜುದಾರಿಗಳನ್ನು ೪ ವಿಭಾಗಗಳಾಗಿ ಮಾಡಲಾಯಿತು. ಬೆಂಗಳೂರು ನಗರ, ಚಿತ್ರದುರ್ಗ ಮತ್ತು ಅಷ್ಟಗ್ರಾಮ, ಮಧುಗಿರಿ ಚಿತ್ರದುರ್ಗಕ್ಕೆ ಮತ್ತು ಅಷ್ಟಗ್ರಾಮ ಮಂಜರಾಬಾದ್‌ಗೆ ಸೇರಿದ್ದವು. ಫೌಜುದಾರಿ ಕೇಂದ್ರಸ್ಥಳ ತುಮಕೂರು ಆಗಿತ್ತು. ಪ್ರತಿಯೊಂದು ವಿಭಾಗದಲ್ಲಿ ಯುರೋಪಿಯನ್ ಸೂಪರಿಂಟೆಂಡೆಂಟ್ ನ್ಯಾಯಾಂಗದ ಅಧಿಕಾರ ಪಡೆಯುತ್ತಿದ್ದನು. ೧೮೬೨ಲ್ಲಿ ಬೌರಿಂಗ್ ಕಮಿಷನರ್ ಆಗಿದ್ದಾಗ, ರಾಜ್ಯವನ್ನು ೮ ಜಿಲ್ಲೆಗಳಾಗಿ ವಿಭಾಗಿಸುತ್ತಾನೆ. ಅದರಲ್ಲಿ ಚಿತ್ರದುರ್ಗವೂ ಒಂದಾಗಿತ್ತು. ೮ ಜಿಲ್ಲೆಗಳು ಸೇರಿ ೩ ವಿಭಾಗಗಳನ್ನು ಮಾಡಿದ್ದರು. ಎಲ್ಲಾ ವಿಂಗಡಣೆಗಳು ಜಿಲ್ಲಾ ಸೂಪರಿಂಟೆಂಡೆಂಟ್ ಅಧೀನದಲ್ಲಿರುತ್ತಿದ್ದವು. ೧೮೭೯ರಲ್ಲಿ ಕಮಿಷನ್ ಪುನರ್ ಜಾಗೃತಿಗೊಂಡಿತು. ರಾಜ್ಯದ ಅಧಿಕಾರವನ್ನು ಚೀಫ್ ಕಮೀಷನರ್ಸ್ ಮತ್ತು ಅಮಿಲ್ದಾರರಿಗೆ ಹಂಚಿದ್ದರು.

೧೮೬೩ರಲ್ಲಿ ಚಿತ್ರದುರ್ಗ ವಿಭಾಗ ರದ್ದಾಯಿತು. ಇದು ನಗರ ವಿಭಾಗಕ್ಕೆ ಮತ್ತು ತುಮಕೂರು ಜಿಲ್ಲೆ ಹೊಸದಾಗಿ ಆದ ನಂದಿದುರ್ಗ ವಿಭಾಗಕ್ಕೆ ಸೇರಿದವು. ಸಿರಾ ತಾಲ್ಲೂಕು ೧೮೬೬ರ ವರೆಗೆ ಚಿತ್ರದುರ್ಗ ಜಿಲ್ಲೆಯಲ್ಲಿತ್ತು. ಆ ನಂತರ ಅದು ತುಮಕೂರು ಜಿಲ್ಲೆಗೆ ವರ್ಗವಾಯಿತು. ೧೮೮೬ರಲ್ಲಿ ಚಿತ್ರದುರ್ಗ ಜಿಲ್ಲೆ ಪುನರ್‌ವಿಂಗಡಣೆ ಮಾಡುವಾಗ ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆಗೆ ಸೇರಿತು. ಸ್ವತಂತ್ರ ಜಿಲ್ಲೆಯಾಗಿ ರೂಪುಗೊಂಡ ನಂತರ ಚಿತ್ರದುರ್ಗ ಜಿಲ್ಲೆಯು ಸ್ವಾತಂತ್ರ್ಯ ಹೋರಾಟ, ಏಕೀಕರಣ ಸಂದರ್ಭದಲ್ಲಿ ಮಹತ್ತರ ಬದಲಾವಣೆಯನ್ನು ಕಂಡಿದೆ. ೧೯೪೭ರಲ್ಲಿ ಸ್ವಾತಂತ್ರ್ಯ ಪಡೆದಾಗ ಚಿತ್ರದುರ್ಗ ಜಿಲ್ಲೆ ಎಲ್ಲಾ ಕ್ಷೇತ್ರಗಳಲ್ಲಿಯೂ ಹಿಂದೆ ಉಳಿದಿತ್ತು. ಪಂಚವಾರ್ಷಿಕ ಯೋಜನೆಗಳ

ಮೂಲಕ ಗ್ರಾಮೀಣ ಅಭಿವೃದ್ಧಿ ಮಾಡುವುದರ ಮೂಲಕ ಪರಿವರ್ತನೆ ಕಂಡುಬಂದಿದೆ. ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಚಿತ್ರದುರ್ಗ ಮುನ್ನಡೆ ಸಾಧಿಸುತ್ತಿದೆ. ಎಸ್.ನಿಜಲಿಂಗಪ್ಪ, ದೊಡ್ಡಸಿದ್ದವ್ವನಹಳ್ಳಿ ಯವರು ಈ ಜಿಲ್ಲೆಯ ಪ್ರತಿನಿಧಿಯಾಗಿ ರಾಜ್ಯ ಮುಖ್ಯಮಂತ್ರಿಗಳಾಗಿದ್ದರು. ಈ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲೆಗೆ ಕೀರ್ತಿ ಬಂದಿತೇ ಹೊರತು, ಪ್ರಗತಿಪರ ಕೆಲಸಗಳಾಗಲಿಲ್ಲ. ಈ ಕೊರತೆಯನ್ನು ನೀಗಿಸಲು ಅನೇಕ ನಾಯಕರು ಮುಂದಾದರು. ದಿ. ಎ. ಭೀಮಪ್ಪನಾಯಕ ಅವರು ಈ ಜಿಲ್ಲೆಯಲ್ಲಿ ಪರಿವರ್ತನ ಕೆಲಸಗಳನ್ನು ಮಾಡಿ ತೋರಿಸಿದರು. ಇವರ ಸಾಧನೆಯ ಪ್ರತೀಕ ಅನೇಕ ಶಿಕ್ಷಣ ಸಂಸ್ಥೆ, ಕಚೇರಿಗಳು ನಿರ್ಮಾಣವಾದವು. ಇವರ ಸಮಕಾಲೀನರಾದ ಹೋ.ಚಿ. ಬೋರಯ್ಯನವರು ಸಹಕಾರಿ ಕ್ಷೇತ್ರದಲ್ಲಿ ಸಾಕಷ್ಟು ಬದಲಾವಣೆ ತಂದು ಜನಾನುರಾಗಿಯಾಗಿದ್ದರು. ವೀರೇಂದ್ರಪಾಟೀಲ್, ಡಿ. ದೇವರಾಜ ಅರಸು, ನಿಜಲಿಂಗಪ್ಪನವರ ಅವಧಿಯಲ್ಲಿ ಚಿತ್ರದುರ್ಗ ಜಿಲ್ಲೆ ಪ್ರಗತಿ ಹಂತಕ್ಕೆ ಮುಂದಾಯಿತು. ಹಿರಿಯೂರು ತಾಲೂಕಿನ ವಾಣಿವಿಲಾಸ ಸಾಗರ ಜಲಾಶಯದ ನೀರಿನ ಸದುಪಯೋಗ ಮತ್ತು ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಹೊಸದಾಗಿ ನಿರ್ಮಾಣ ಕಾರ್ಯಕೈಗೊಂಡ ರಂಗಯ್ಯನದುರ್ಗ ಜಲಾಶಯವನ್ನು ಪೂರ್ಣಗೊಳಿಸಲು ಇಂದಿನವರೆಗೂ ಕಾಯಬೇಕಾಯಿತು. ಹತ್ತಿಗಿರಣಿ, ಕೃಷಿಮಾರುಕಟ್ಟೆ, ಎಣ್ಣೆ ಮಿಲ್‌ಗಳು ಮೊದಲಾದವು ಈ ಜಿಲ್ಲೆಯ ಆರ್ಥಿಕ ವಹಿವಾಟಿಗೆ ಕಾರಣವಾಗಿವೆ.

ಕಳೆದೆರಡು ದಶಕಗಳಿಂದ ಗ್ರಾಮಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯತಿಗಳ ಮೂಲಕ ಅಧಿಕಾರ ವಿಕೇಂದ್ರೀಕರಣವನ್ನು ಮಾಡಲಾಯಿತು. ಹೋಬಳಿ, ತಾಲ್ಲೂಕುಗಳು ಅಧಿಕಾರ ಮತ್ತು ಜನತೆಯ ಆಶೋತ್ತರ ಕೇಂದ್ರಗಳಾದವು. ಪ್ರಾಚೀನ ಪರಂಪರೆಯೊಂದಿಗೆ ರಾಜಪ್ರಭುತ್ವ ಮೆರುಗು ದೊರೆತ ಇಂತಹ ಸ್ಥಳಗಳು ಪ್ರಸಿದ್ಧಿ ಪಡೆಯುವುದರಲ್ಲಿ ಯಾವ ಅಡ್ಡಿ ಆತಂಕಗಳಿರಲಿಲ್ಲ. ನಾಯಕನಹಟ್ಟಿ, ಬಿ.ಜಿ. ಕೆರೆ, ರಾಂಪುರ, ಪರಶುರಾಮಪುರ, ನೇರ್ಲಗುಂಟೆ, ಸಿರಿಗೆರೆ, ಕಲ್ಲೇದೇವರಪುರ, ಯರಬಳ್ಳಿ, ಐಮಂಗಲ ಮೊದಲಾದ ಸ್ಥಳಗಳು ಗ್ರಾಮಪಂಚಾಯತಿ ಘಟಕಗಳಾಗಿ, ಹೋಬಳಿ ಕೇಂದ್ರಗಳಾಗಿ ಮಹತ್ವ ಪಡೆದಿವೆ. ವಿಶೇಷವೆಂದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಬುಡಕಟ್ಟು ಜನರು ಇನ್ನೂ ಗ್ರಾಮಗಳಿಗೆ ಬಾರದೆ ಹಟ್ಟಿ, ಕಪಿಲೆ, ತೋಟ, ಅಡವಿಗಳಲ್ಲಿ ಜೀವಿಸುತ್ತಿರುವುದು. ಪ್ರತಿಯೊಂದು ಹಟ್ಟಿಯಲ್ಲಿಯೂ ಚರಿತ್ರೆ ಮತ್ತು ಸಂಸ್ಕೃತಿಯು ನಿರ್ಮಾಣಗೊಂಡಿರುತ್ತದೆ. ಬಹುತೇಕ ಬುಡಕಟ್ಟು ಜನರು ಕೆರೆ, ಬಾವಿ ನೀರನ್ನು, ಅಡವಿಯ ಸೌದೆಯನ್ನು ಅವಲಂಬಿಸಿರುವರು. ಹೆಚ್ಚಾಗಿ ಒಣಬೇಸಾಯ ಮಾಡುವ ಇವರು, ನೀರಾವರಿ ಕೃಷಿಯಲ್ಲಿಯೂ ಹೆಚ್ಚಿನ ಉತ್ಪಾದನೆಯನ್ನು ಇತ್ತೀಚೆಗೆ ಕಂಡಿದ್ದಾರೆ. ಜನಸಾಮಾನ್ಯರ ಚರಿತ್ರೆಯೇ ಇಲ್ಲಿ ಪ್ರಧಾನವಾದುದು. ಹಿಂದೆ ಆಳಿದ ಪಾಳೆಯಗಾರರನ್ನು ಸ್ಮರಿಸುತ್ತಾ ಅವರ ಧೈರ್ಯ, ಪರಾಕ್ರಮಗಳನ್ನು ಕೊಂಡಾಡುವುದು ತಮ್ಮ ವಂಶಜರಿಗೆ ಈ ಹೆಸರುಗಳನ್ನು ಇಡುವುದು ರೂಢಿಯಲ್ಲಿದೆ.

ಒಟ್ಟಾರೆಯಾಗಿ ಚಾರಿತ್ರಿಕವಾಗಿ ಚಿತ್ರದುರ್ಗ ಜಿಲ್ಲೆಯು ವಿವಿಧ ಹಂತಗಳಲ್ಲಿ ಬೆಳೆದು ಬಂದಿರುವುದನ್ನು ಗುರುತಿಸಬಹುದು. ಇದಕ್ಕೊಂದು ತಿರುವು ಸಿಕ್ಕಿದ್ದು ಚಿತ್ರದುರ್ಗದ ಪಾಳೆಯಗಾರಾರರಿಂದ. ಪಾಳೆಯಗಾರರ ಬಗೆಗೆ ಲಭ್ಯವಿರುವ ಜನಪದ ಸಾಹಿತ್ಯವನ್ನು ಅವಲೋಕಿಸಿದರೆ,

ಗತಕಾಲದ ವೈಭವವನ್ನು ತಿಳಿಯಬಹುದಾಗಿದೆ. ಏಕೀಕೃತ ಆಡಳಿತ ನಡೆಸಿದ ಪಾಳೆಯಗಾರರು ತಮ್ಮ ಅವಧಿಯಲ್ಲಿ ಇತರರಿಗೆ ಪ್ರೋತ್ಸಾಹ ಕೊಟ್ಟಿದ್ದರು. ಆದರೂ ಸ್ಥಳೀಯ ಹೊಂದಾಣಿಕೆಗೆ ವಿರೋಧಿ ಅರಸರ ಪ್ರತಿರೋಧ ಎದುರಾಯಿತು. ಹೈದರ್‌ಅಲಿ, ಟಿಪ್ಪುಸುಲ್ತಾನ ನಂತರ ಇಲ್ಲಿನ ಅರಸರು ಸಣ್ಣಪುಟ್ಟ ಹುದ್ದೆಗಳಲ್ಲಿದ್ದ ಪ್ರತಿನಿಧಿಗಳಿಗೆ ಸ್ವತಂತ್ರ ನಿರ್ವಹಣೆಯನ್ನು ಕೊಟ್ಟಂತಾಯಿತು. ಈ ಮನೆತನಗಳು ಇಂದು ನಾನಾ ಬಗೆಯಲ್ಲಿ ಬೆಳವಣಿಗೆಯಾಗಿವೆ. ಕಲಾಸ್ಮಾರಕಗಳು, ಯಾತ್ರಾಸ್ಥಳಗಳು, ಐತಿಹಾಸಿಕ ನೆಲೆಗಳು, ಬುಡಕಟ್ಟು ಕೇಂದ್ರಗಳು ಇಲ್ಲಿ ಕಂಡುಬರುತ್ತವೆ. ಇವುಗಳ ಬಗೆಗೆ ಜನಪದರ ಇತಿಹಾಸವು ಚಾಲ್ತಿಯಲ್ಲಿದೆ.[೪]

**ಅಡಿಟಿಪ್ಪಣಿಗಳು**

೧. ಭಾರತೀಯ ಸಮಾಜ, ಚ.ನ.ಶಂಕರ್‌ರಾವ್, ಜೈಭಾರತ್ ಪ್ರಕಾಶನ, ಮಂಗಳೂರು, ೧೯೯೪, ಪುಟ.೧

೨. ಆದಿವಾಸಿ ಆಖ್ಯಾನ, ಡಾ.ಎ.ಎಸ್. ಪ್ರಭಾಕರ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬, ಪುಟ.೩೯-೪೦

೩. ಸಮಾಜಶಾಸ್ತ್ರ, ಸಂಪುಟ-೨, ಚ.ನ. ಶಂಕರ್‌ರಾವ್, ಜೈಭಾರತ್ ಪ್ರಕಾಶನ, ಮಂಗಳೂರು, ೧೯೯೪, ಪುಟ.೧೧೩-೧೧೭

೪. ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ.೯-೧೬

ಅಧ್ಯಾಯ: ೨

# ಬೇಡ ಬುಡಕಟ್ಟು ಸಮುದಾಯ

೨.೧. ಹಿನ್ನೆಲೆ
೨.೨. ಮೂಲ ಮತ್ತು ಪ್ರಸಾರ
೨.೩. ವಸತಿ ವ್ಯವಸ್ಥೆ
೨.೪. ಬಂಧುತ್ವ ಮತ್ತು ವಿವಾಹ ಪದ್ಧತಿ
೨.೫. ಆರಾಧನೆ, ಆಚರಣೆ ಮತ್ತು ನಂಬಿಕೆಗಳು
೨.೬. ಒಳಾಡಳಿತ ವ್ಯವಸ್ಥೆ
೨.೭. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ
೨.೮. ಭಾಷೆ ಮತ್ತು ಸಾಹಿತ್ಯ
೨.೯. ಪ್ರದರ್ಶನಾತ್ಮಕ ಕಲೆಗಳು
೨.೧೦. ಸಮಸ್ಯೆಗಳು ಮತ್ತು ಸವಾಲುಗಳು

ಅಧ್ಯಾಯ: ೨

# ಬೇಡ ಬುಡಕಟ್ಟು ಸಮುದಾಯ

## ೨.೧. ಹಿನ್ನೆಲೆ

ಕರ್ನಾಟಕದ ಚಿತ್ರದುರ್ಗ ಜಿಲ್ಲೆಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಯಲ್ಲಿ ಯತೇಚ್ಛವಾದ ಬೆಟ್ಟಗುಡ್ಡಗಳಿವೆ. ಚಿತ್ರದುರ್ಗದ ಪ್ರದೇಶವು ಆದಿಮಾನವನ ನೆಲೆಯಾಗಿತ್ತು ಎಂದು ವೈಜ್ಞಾನಿಕ ಸಂಶೋಧನೆಗಳಿಂದ ತಿಳಿದುಬಂದಿದೆ. ಇತಿಹಾಸಪೂರ್ವ ಕಾಲ(Pre-Historic Period)ದಿಂದಲೂ ಇಲ್ಲಿ ಆದಿಮಾನವರು ನೆಲೆಸಿದ್ದರು ಎನ್ನುವುದಕ್ಕೆ ಚಿತ್ರದುರ್ಗ ಪ್ರದೇಶದ ಪ್ರಾಕೃತಿಕ ಮತ್ತು ಭೌಗೋಳಿಕ ಅಂಶಗಳು ಪ್ರಾಮುಖ್ಯತೆ ಪಡೆದಿವೆ. ಬುಡಕಟ್ಟು ಸಂಸ್ಕೃತಿಯು ಚಿತ್ರದುರ್ಗದ ಪ್ರದೇಶದಲ್ಲಿ ಬೆಳೆದುಬರಲು ಮಾನವನು ಸಹಜವಾಗಿ ಬೆಟ್ಟಗುಡ್ಡಗಳಲ್ಲಿ ವಾಸ ಮಾಡುತ್ತಾ ಬೇಟೆಗಾಗಿ ಸುತ್ತಮುತ್ತಲಿನ ಕಾಡುಗಳನ್ನು ಆಶ್ರಯಿಸಿದ್ದುದು ಕಾರಣವಿರಬಹುದು. ಬೆಟ್ಟಗುಡ್ಡ ಪ್ರದೇಶಗಳು, ಕುರುಚಲು ಕಾಡು, ಬೆಟ್ಟಗುಡ್ಡ ಪ್ರದೇಶಗಳಲ್ಲಿ ಇದ್ದಂತಹ ಪ್ರಾಣಿಪಕ್ಷಿಗಳನ್ನು ಬೇಟೆಯಾಡಿ ತನ್ನ ಹಸಿವನ್ನು ನೀಗಿಸಿಕೊಳ್ಳುವುದರ ಮೂಲಕ ಈ ಪ್ರದೇಶದಲ್ಲಿ ಸುದೀರ್ಘವಾಗಿ ಮಾನವನು ವಾಸಮಾಡುತ್ತಾ ಬಂದಿರುವುದು ತಿಳಿದುಬರುತ್ತದೆ.

ಬೇಡಬುಡಕಟ್ಟು ಸಮುದಾಯವು ಈ ಹಿನ್ನೆಲೆಯಲ್ಲಿ ಬೆಳೆದುಬಂದಿದೆ. ಬೇಡ ಜನಾಂಗದ ಮೂಲ ವೃತ್ತಿ ಬೇಟೆಯಾಡುವುದು. ತದನಂತರ ಈ ಸಮುದಾಯವು ಪಶುಪಾಲನೆ, ಕೃಷಿ ಮತ್ತು ಇತರೇ ವೃತ್ತಿಗಳನ್ನು ಮಾಡುತ್ತಾ ಬಂದಿದೆ. ಬೇಡ ಜನಾಂಗವು ತನ್ನದೇ ಆದ ಬುಡಕಟ್ಟು ಸಂಸ್ಕೃತಿಯನ್ನು ಹೊಂದಿದೆ. ಬೇಡ ಜನಾಂಗವು ಮೂಲತಃವಾಗಿ ತುಂಬಾ ಧೈರ್ಯವಂತ ಜನಾಂಗವಾಗಿದೆ. ಬೇಟೆಯನ್ನೇ ಮೂಲ ವೃತ್ತಿಯನ್ನಾಗಿಸಿಕೊಂಡಿದ್ದ ಇವರು ಪಾಳೆಯಗಾರರಾಗಿ ತಮ್ಮದೇ ಸಾಮ್ರಾಜ್ಯಗಳನ್ನು ಸ್ಥಾಪಿಸಿ, ರಾಜರುಗಳಾಗಿ ಆಳ್ವಿಕೆ ನಡೆಸಿರುವುದು ಇತಿಹಾಸದಿಂದ ತಿಳಿದುಬರುತ್ತದೆ.

ಬುಡಕಟ್ಟು ಸಂಸ್ಕೃತಿಯ ಸಂರಕ್ಷಕರಾಗಿ ಬೇಡ ಸಮುದಾಯವು ಇಂದಿಗೂ ಚಿತ್ರದುರ್ಗ ಪ್ರದೇಶದಲ್ಲಿ ಕಂಡುಬರುತ್ತದೆ. ಬೇಡರು ಪಾಳೆಯಗಾರರಾಗಿ, ರಾಜರಾಗಿ ಚಿತ್ರದುರ್ಗ ಪ್ರದೇಶವನ್ನು

ಆಳ್ವಿಕೆ ಮಾಡಿರುವುದಕ್ಕೆ ಸಾಕ್ಷಿಯಾಗಿ ಇಂದಿಗೂ ಏಳುಸುತ್ತಿನ ಅದ್ಭುತವಾದ ಕೋಟೆಯನ್ನು ನೋಡಬಹುದಾಗಿದೆ. ಬೇಡ ನಾಯಕರ ಆಳ್ವಿಕೆಯಲ್ಲಿ ತನ್ನ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳ ಜನರನ್ನು ರಕ್ಷಣೆ ಮಾಡುವುದರ ಜೊತೆಗೆ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಪರಕೀಯರ ಜೊತೆಗೆ ನಿರಂತರವಾಗಿ ಯುದ್ಧಗಳು, ಸಂಘರ್ಷಗಳು ನಡೆದರೂ ಕೂಡ ಇಲ್ಲಿನ ಬುಡಕಟ್ಟು ಸಂಸ್ಕೃತಿಯು ಉಳಿದುಕೊಂಡು ಬಂದಿದೆ. ಭಾರತ ದೇಶದ ಮೂಲ ನಿವಾಸಿಗಳಾದ ಬೇಡರು ದ್ರಾವಿಡ ಜನಾಂಗಕ್ಕೆ ಸೇರಿದವರು. ಬೇಡರು ವೇದಗಳ ಕಾಲದಲ್ಲಿ ಹಾಗೂ ಇತರೇ ಸಂದರ್ಭಗಳಲ್ಲಿ ವಿವಿಧ ವೃತ್ತಿಗಳನ್ನು ಮಾಡಿಕೊಳ್ಳುವುದರ ಮೂಲಕ ವಾಸಿಸುತ್ತಾ ಬಂದಿದ್ದಾರೆ. ರಾಮಾಯಣದ ಕರ್ತೃ ಮಹರ್ಷಿ ವಾಲ್ಮೀಕಿಯು ಬೇಡ ಜನಾಂಗದವನೆಂದು ತಿಳಿದುಬರುತ್ತದೆ. ಅಲ್ಲದೆ, ಶಬರಿ, ಗುಹಾ, ಧರ್ಮವ್ಯಾಧ, ಬೇಡರ ಕಣ್ಣಪ್ಪ ಮೊದಲಾದವರು ಬೇಡ ಜನಾಂಗದವರೆಂದು ಇತಿಹಾಸದಿಂದ ತಿಳಿದುಬರುತ್ತದೆ. ಬೇಡರು ಪಾಳೆಯಗಾರರಾಗಿ, ರಾಜರುಗಳಾಗಿ, ರಾಜರ ಸಾಮ್ರಾಜ್ಯಗಳಲ್ಲಿ ಸೈನಿಕರಾಗಿ, ದಂಡನಾಯಕರಾಗಿ, ಬೇಡರ ಪಡೆಗಳಾಗಿ ಸೇವೆ ಸಲ್ಲಿಸಿರುವುದು ಕಂಡುಬರುತ್ತದೆ. ಬೇಡರು ವಿಶೇಷವಾಗಿ ಶೂರರು ಮತ್ತು ಧೀರರು. ಇಂತಹ ಬೇಡ ಜನಾಂಗವು ತಮ್ಮ ಸಂಸ್ಕೃತಿಯ ರಕ್ಷಣೆಗಾಗಿ ಹಾಗೂ ತಮ್ಮ ಸಾಮ್ರಾಜ್ಯದ ಸಂಸ್ಕೃತಿಯ ರಕ್ಷಣೆಗಾಗಿ ನಿರಂತರ ಸಂಘರ್ಷಗಳನ್ನು, ಯುದ್ಧಗಳನ್ನು ಎದುರಿಸುವುದರ ಮೂಲಕ ಹೋರಾಡಿರುವುದು ಇತಿಹಾಸ ಅಧ್ಯಯನದಿಂದ ತಿಳಿಯುತ್ತದೆ.

ಬೇಡ ಬುಡಕಟ್ಟು ಸಮುದಾಯವನ್ನು ವಾಲ್ಮೀಕಿ, ಬ್ಯಾಡರು, ಬೇಡನಾಯಕ, ತಳವಾರ, ಬೆರಡ, ಬೊದರ, ನಾಯಕ ಮಕ್ಕಳು, ನಾಯಕವಾಡಿ, ರಾಮೋಷಿ, ಬೆಂಡಾರ, ವಾಲ್ಮೀಕಿ ಮಕ್ಕಳು, ನ್ಯಾಕ ಮತ್ತ ಬೋಯರೆಂದು ಅನೇಕ ಹೆಸರುಗಳಿಂದ ಇವರನ್ನು ಕರೆಯುತ್ತಾರೆ. ಇವರು ತಾವು ವಾಲ್ಮೀಕಿ ಋಷಿಗಳ ವಂಶದವರೆಂದು ಹೇಳಿಕೊಳ್ಳುತ್ತಾರೆ. ಇವರು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಹಾಗೂ ಕನ್ನಡ ಲಿಪಿಯನ್ನು ಬಳಸುತ್ತಾರೆ. ಚಿತ್ರದುರ್ಗ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ತೆಲುಗು ಭಾಷೆಯನ್ನು ಹಾಗೂ ತೆಲುಗು ಲಿಪಿಯನ್ನು ಕೂಡ ಬಳಸುತ್ತಾರೆ. ಬೇಡರಲ್ಲಿ ಎರಡು ಪಂಗಡಗಳನ್ನು ಕಾಣುತ್ತೇವೆ. ಅವೆಂದರೆ ಊರುಬೇಡ ಮತ್ತು ಮ್ಯಾಸಬೇಡ ಅಥವಾ ಊರುನಾಯಕ ಮತ್ತು ಮ್ಯಾಸನಾಯಕ. ಹೆಸರುಗಳೇ ಹೇಳುವಂತೆ ಊರಿನಲ್ಲಿ ವಾಸ ಮಾಡುವವರನ್ನು ಊರುಬೇಡರೆಂದೂ, ಊರುಹೊರಗೆ ಪ್ರತ್ಯೇಕವಾಗಿ ಅಥವಾ ಕಾಡುಗಳಲ್ಲಿ ವಾಸಮಾಡುವವರನ್ನು ಮ್ಯಾಸಬೇಡ ಅಥವಾ ಅಡವಿಬೇಡ ಎಂದು ಕರೆಯಲಾಗಿದೆ.

ಕೆಲವು ಐಹಿತ್ಯಗಳ ಪ್ರಕಾರ, ಇವರು ಪಶುಪಾಲನೆ ಮಾಡುತ್ತಿದ್ದು, ಶ್ರೀಶೈಲದ ಕಡೆಯಿಂದ ಪಶುಗಳನ್ನು ಮೇಯಿಸಿಕೊಳ್ಳುತ್ತಾ ಕರ್ನಾಟಕದ ಕಡೆಗೆ ಬಂದವರೆಂದು ತಿಳಿಯುತ್ತದೆ. ಹಿಂದೆ ಮುಂದೆ ಒಬ್ಬ ಪಶುಗಳನ್ನು ಮೇಯಿಸುತ್ತಿದ್ದರು. ಹಿಂದಿನವನು ಆಕಳ ಕರುವಿನ ಕಾಲು ಮುರಿದು ತಿನ್ನಲು ಶುರುಮಾಡಿದನಂತೆ. ಅದಕ್ಕೆ ಮುಂದಿನವರು ನೀನು ಗೋಮಾಂಸ ತಿಂದೆ ನೀನು 'ಬ್ಯಾಡ' ಅಂತ ಅವನನ್ನು ಬಿಟ್ಟು ಮುಂದೆ ಬಂದನಂತೆ. ಮುಂದೆ ಬಂದವನು 'ಊರುಬೇಡ' ಆದ, ಹಿಂದೆ

ಉಳಿದವನು 'ಮ್ಯಾಸಬೇಡ' ಆದನಂತೆ. ಹಾಗಾಗಿ ಮೇಯಿಸುವವರು-ಮೇಸುವವರು-ಮ್ಯಾಸರು ಆಗಿದೆಯಂತೆ. ಊರುನಾಯಕರಲ್ಲೂ ಮ್ಯಾಸನಾಯಕರಲ್ಲೂ ಕೊಡುಕೊಳ್ಳುವ ಹಾಗೂ ಯಾವುದೇ ರೀತಿಯ ಸಾಂಪ್ರದಾಯಿಕ ಸಂಬಂಧವಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಇವರಲ್ಲಿ ಕೊಡುಕೊಳ್ಳುವುದು ನಡೆಯುತ್ತಿದೆ. ಆದರೂ ಇವರ ಸಾಂಪ್ರದಾಯಿಕ ಆಚರಣೆಗಳಲ್ಲಿ ಸ್ವಲ್ಪಮಟ್ಟಿನ ವ್ಯತ್ಯಾಸಗಳು ಇವೆ. ಇವರು ತಳವಾರ, ನಾಯಕವಾಡ, ಗುಂಡಾನಿ ಬಡ್ಡಿ, ಕಟ್ಟಿಮನಿ, ಭಟ್ಟಿ, ಮುಂತಾದ ಮನೆತನದ ಹೆಸರುಗಳನ್ನು ಹೊಂದಿದ್ದಾರೆ. ಸಾಮಾನ್ಯವಾಗಿ ಸ್ಥಳನಾಮವನ್ನು ಕೂಡ ಒಂದು ಕುಟುಂಬ ವಲಸೆ ಹೋದಾಗ ಮನೆತನದ ಹೆಸರಾಗಿ ತಮ್ಮ ಮೂಲ ಸ್ಥಳ ಸೂಚಕವಾಗಿ ಬಳಸಿಕೊಳ್ಳುತ್ತಾರೆ. ಒಳಬಾಂಧವ್ಯ ವಿವಾಹವು ಸಮುದಾಯದ ಮಟ್ಟದಲ್ಲೂ ಹೊರಬಾಂಧವ್ಯ ವಿವಾಹವು, ಶೇವಂತಿಗೆ, ಬೆಲ್ಲ, ಆಡು, ಎಮ್ಮೆ, ಮಲ್ಲಿಗೆ ಮುಂತಾದ ಬಳ್ಳಿಗಳ ಮಟ್ಟದಲ್ಲೂ ರೂಢಿಯಲ್ಲಿದೆ. ಸೋದರತ್ತೆ, ಸೋದರಮಾವ ಮತ್ತು ಅಕ್ಕನ ಮಗಳೊಂದಿಗೆ ವಿವಾಹಕ್ಕೆ ಅನುಮತಿ ಇದೆ. ಆದರೆ ಮ್ಯಾಸಬೇಡರಲ್ಲಿ ಒಂದು ಕುಲಸ್ಥರೆಲ್ಲ ಅಣ್ಣ ತಮ್ಮಂದಿರು ಎಂಬ ಭಾವನೆಯಿರುವುದರಿಂದ ಬೇರೆ ಬೇರೆ ಕುಲಗಳಲ್ಲಿ ಹೆಣ್ಣು ತರುತ್ತಾರೆ. ಹೆಣ್ಣನ್ನು ಮದುವೆ ಮಾಡಿಕೊಂಡು ಬರುವುದು ಎಂದರೆ ಲಕ್ಷ್ಮಿಯನ್ನು ಮನೆಗೆ ಕರೆತಂದಂತೆ ಎಂಬ ಭಾವನೆಯಿದೆ. ಆದ್ದರಿಂದ ಲಕ್ಷ್ಮಿಯನ್ನು ಹಾಗೇ ತರಬಾರದೆಂದೂ, ದುಡ್ಡುಕೊಟ್ಟು ತರಬೇಕೆಂದೂ 'ತೆರ' ಕೊಡುವ ಪದ್ಧತಿ ಇವರಲ್ಲಿ ಈಗಲೂ ಇದೆ. ಬ್ರಾಹ್ಮಣರು ಅಥವಾ ವೀರಶೈವ ಜಂಗಮರು ಧಾರ್ಮಿಕ ಕ್ರಿಯಾವಿಧಿ ಜರುಗಿಸುತ್ತಾರೆ. ಪಾರಂಪರಿಕವಾಗಿ ನಲವತ್ತು ರೂಪಾಯಿಗಳನ್ನು ವಧುಮೌಲ್ಯವಾಗಿ ಕೊಡುವ ಸಾಂಪ್ರದಾಯಿಕ ಪದ್ಧತಿ ಇವರಲ್ಲಿ ಈ ದಿನಗಳಲ್ಲಿಯೂ ಕಂಡುಬರುತ್ತದೆ. ಜೊತೆಗೆ ವರದಕ್ಷಿಣೆಯನ್ನು ಸಹ ನಗದು ಹಾಗೂ ಪದಾರ್ಥಗಳ ರೂಪದಲ್ಲಿ ಇತ್ತೀಚೆಗೆ ಕೊಡಲಾಗುತ್ತದೆ. ಸಮುದಾಯದ ನಾಯಕರು ವಿಚ್ಛೇದನವನ್ನು ನಿರ್ಧರಿಸಿ ಪರಿಹಾರವನ್ನು ನಿಂದನೆಗೊಳಗಾದವರಿಗೆ ನಿಗದಿಗೊಳಿಸಿ, ಮಕ್ಕಳ ಸ್ಥಾನವನ್ನು ಆ ಸಂದರ್ಭದಲ್ಲಿ ನಿರ್ಧರಿಸುತ್ತಾರೆ. ಇವರಲ್ಲಿ ವಿಧವೆ, ವಿದುರ, ವಿಚ್ಛೇದಿತರು ವಿವಾಹವಾಗಬಹುದು. ಹಿರಿಯ ಮಗನು ತಂದೆಯ ನಂತರ ಕುಟುಂಬದ ಉತ್ತರಾಧಿಕಾರಿಯಾಗುತ್ತಾನೆ.

ಸಾಂಪ್ರದಾಯಿಕವಾಗಿ ಇವರು ಸೈನಿಕ ಹಾಗೂ ಗ್ರಾಮಸೇವಕರಾಗಿ ದುಡಿಯುತ್ತಿದ್ದರು. ಇತ್ತೀಚೆಗೆ ಹೊಲದಲ್ಲಿ ಶ್ರಮಗೂಲಿಯಾಗಿ ದುಡಿಯುವುದು ಹೆಚ್ಚಿನ ಕುಟುಂಬಗಳಿಗೆ ಆದಾಯದ ಮೂಲವಾಗಿದೆ. ಇವರಲ್ಲಿ ಕೆಲವರು ಜಮೀನನ್ನು ಹೊಂದಿ ವ್ಯವಸಾಯದಲ್ಲಿ ನಿರತರಾಗಿದ್ದಾರೆ. ಜೊತೆಗೆ ಕೆಲವೇ ಜನ ಸರ್ಕಾರಿ ಮತ್ತು ಖಾಸಗಿ ಸೇವೆಗಳಲ್ಲಿ ಉದ್ಯೋಗಗಳಲ್ಲಿದ್ದಾರೆ. ಪಾರಂಪರಿಕವಾಗಿ ಬೇಡರು ಬೇಟೆಯಾಡುತ್ತಿದ್ದರು. ಬಿಲ್ಲು ಮತ್ತು ಭರ್ಜಿಗಳನ್ನು ಬಳಸುವುದರಲ್ಲಿ ಪ್ರವೀಣರಾಗಿದ್ದರು. ಈಗ ಕಾಡುಗಳು ನಾಶವಾಗಿರುವುದರಿಂದ ತಮ್ಮ ವೃತ್ತಿಯನ್ನು ಬದಲಾಯಿಸಿಕೊಂಡಿದ್ದಾರೆ. ಆದರೂ ಯುಗಾದಿ ಹಬ್ಬದ ಸಂದರ್ಭದಲ್ಲಿ ಈಗಲೂ ಸಾಂಪ್ರದಾಯಿಕವಾಗಿ ಬೇಟೆಯಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಇವರು ಹೊಲದಲ್ಲಿ ಕೂಲಿ ಮಾಡಲು ಪ್ರಾರಂಭಿಸಿದ್ದಾರೆ. ಸರಕಾರದಿಂದ ದರಖಾಸ್ತು

ಭೂಮಿ ತೆಗೆದುಕೊಂಡಿರುವವರು ಹಾಗೂ ಕೆಲವರು ಸ್ವಂತ ವ್ಯವಸಾಯ ಮಾಡುವುದನ್ನು ಉದ್ಯೋಗವನ್ನಾಗಿಸಿಕೊಂಡಿದ್ದಾರೆ. ಇವರಲ್ಲಿ ಗೊಂಚಿಕಾರನು ಸಾಂಪ್ರದಾಯಿಕವಾಗಿ ಸಮುದಾಯದ ಸಮಿತಿಯ ನಾಯಕತ್ವ ವಹಿಸಿರುತ್ತಾನೆ. ಇವರ ದೈವಗಳು– ಬೋರೆದೇವರು, ಗಾದ್ರಿಪಾಲಯ್ಯ, ದೊಡ್ಡ ಮಾರಮ್ಮ, ದುರುಗಮ್ಮ, ಮಾರಮ್ಮ ಮುಂತಾದವುಗಳು. ಇವರಲ್ಲಿ ಶೈಕ್ಷಣಿಕ ಮಟ್ಟ ಕಡಿಮೆ ಇದೆ. ಆಧುನಿಕ ಮತ್ತು ಪ್ರಾಚೀನ ವೈದ್ಯಕೀಯ ಚಿಕಿತ್ಸೆಗಳನ್ನು ಬಳಸುತ್ತಾರೆ. ಇವರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಪರಿಸ್ಥಿತಿಗಳು ಸುಧಾರಣೆಯಾಗಬೇಕಾಗಿದೆ.[೧]

ನಾಯಕ್ಡ(Naikda), ನಾಯಕ(Nayaka), ಚೋಲಿವಾಲ ನಾಯಕ(Cholivala Nayaka), ಕಪಾಡಿಯಾನಾಯಕ(Kapadiya Nayaka), ಮೋಟನಾಯಕ(Mota Nayaka), ನಾನಾ ನಾಯಕ(Nana Nayaka), ನಾಯಕ್(Nayak), ಬೇಡ(Beda), ಬೇಡರ್(Bedar) ಮತ್ತು ವಾಲ್ಮೀಕಿ(Valmiki) ಇವು ಬೇಡ ಬುಡಕಟ್ಟಿನ ಪರ್ಯಾಯ ಹೆಸರುಗಳು. ಅಲ್ಲದೆ, ಬೇಡರಿಗೆ ಕಿರಾತ, ಶಬರ, ಕಂಕ, ನೈಷಧ, ಕುಳಿಂದ, ಪುಳಿಂದ, ಭಿಲ್ಲ, ವ್ಯಾಧ, ವನಚರ, ವಾಲ್ಮೀಕಿ, ನಿಷಾಧ, ತಳವಾರ, ದೊರೆನಾಯಕ, ಕಣ್ಣಪ್ಪನ ಮಕ್ಕಳು, ಬೆಂದ್, ವೇದನ್, ಬೋಯ ಎನ್ನುವ ಪರ್ಯಾಯ ಹೆಸರುಗಳಿವೆ. ಇವರು ಪ್ರೊಟೊ ಆಸ್ಟ್ರಲಾಯಿಡ್ ಜನಾಂಗಕ್ಕೆ ಸೇರಿದ್ದು ಭಾರತದಲ್ಲಿ ಇವರು ಮೂಲ ದ್ರಾವಿಡರಾಗಿದ್ದಾರೆ. ಇವರಿಗೆ ದ್ರಾವಿಡ ಭಾಷೆಯಲ್ಲಿ ವೇಡನ್, ವೆಟ್ಟುವನ್, ಹಳೆಗನ್ನಡದಲ್ಲಿ ವೇಡರ್, ವೇಳರ್, ವಿದಿರ್, ಬಿಲ್ಲ, ಬೇಂಟೆಯವರ್, ಬೇಂಟೆಕಾರ, ವಿಯದರ್, ಬಿಯದರ್, ಕಣಿಂದರ್, ಕೋವರ್ ಎಂಬ ಸಂವಾದಿ ಪದಗಳನ್ನು ಬಳಸಲಾಗಿದೆ. ಕರ್ನಾಟಕದಲ್ಲಿ ಬೇಡರಿಗೆ ಮುಖ್ಯವಾಗಿ ವಾಲ್ಮೀಕಿ ಮತ್ತು ನಾಯಕ ಎಂದು ಕರೆಯುತ್ತಾರೆ. ಇವರಲ್ಲಿನ ಒಳಬಾಂಧವ್ಯವಾದ ಪ್ರಬೇಧಗಳನ್ನು ಎಚ್.ವಿ. ನಂಜುಂಡಯ್ಯನವರು ಈ ರೀತಿ ವಿಂಗಡಿಸಿದ್ದಾರೆ.

೧. ಊರು ಬೇಡರು(ಚಿನ್ನಬೋಯಿ ವಾಂಡ್ಲು)

೨. ಮ್ಯಾಸ ಬೇಡರು(ಪೆದ್ದಬೋಯಿ ವಾಂಡ್ಲು)

೩. ಗುಡ್ಲು ಬೇಡರು(ಗುಂತಬೋಯಿ ವಾಂಡ್ಲು)

೪. ಮಾರಮ್ಮನ ಬೇಡರು(ಮುತ್ಯಾಲಮ್ಮ ಅಥವಾ ಎರುಮೆ ಬೇಡರು)

೫. ಹಾಲು ಬೇಡರು

೬. ಮೊಂಡ ಬೇಡರು(ಅಲೆಮಾರಿ ಭಿಕ್ಷುಕ ಬೇಡರು)

ಊರಿನಲ್ಲಿ ವಾಸಿಸುವವರು ಊರು ಬೇಡರಾದರೆ, ಮೇಷ(ಕುರಿ ಅಥವಾ ಮೇಕೆ)ಗಳನ್ನು ಮೇಯಿಸುವವರು ಮ್ಯಾಸಬೇಡರಾದರು. ಮಾರಮ್ಮನ ಆರಾಧಕರು ಮಾರಮ್ಮನ ಬೇಡರಾದರೆ, ಗುಡಿಸಿಲುಗಳಲ್ಲಿ ವಾಸಿಸುವವರು ಗುಡ್ಲುಬೇಡರೆನಿಸಿಕೊಂಡರು. ಪಶುಪಾಲಕ ಬೇಡರು ಹಾಲು ಬೇಡರಾದರೆ, ಅಲೆಮಾರಿ ಭಿಕ್ಷುಕ ಬೇಡರಿಗೆ ಮೊಂಡ ಬೇಡರೆಂದು ಕರೆಯಲಾಗಿದೆ. ಮ್ಯಾಸ(ಮೇಷ) ಬೇಡರಿಂದ ಕವಲೊಡೆದ ಬೇಡರೇ ಊರು ಬೇಡರು. ಊರಿಗೆ ಕೂಡಿಕೊಂಡವರು. ಊರು ಭಾಷೆಗಳನ್ನು ಕಲಿತು ಮೂಲಭೂಷೆಯಿಂದ ವಿಮುಖರಾದರು. ಊರಿನ ಸಂಸ್ಕೃತಿಗೆ ಒಗ್ಗಿಕೊಂಡರು.

ಕರ್ನಾಟಕದಲ್ಲಿ ಕನ್ನಡ ಇವರ ಮಾತೃಭಾಷೆಯಾಯಿತು. ಇವರನ್ನು ಊರುನಾಯಕರೆಂದು ಕರೆಯಲಾಗಿದೆ. ಮ್ಯಾಸಬೇಡರು ದ್ರಾವಿಡ ಮೂಲದ ತೆಲುಗು ಮಾತೃಭಾಷೆಯನ್ನಾಗಿ ಉಳಿಸಿಕೊಂಡರು. ಆದರೂ ಇತರರೊಂದಿಗೆ ಕನ್ನಡ ಭಾಷೆ ಮತ್ತು ಲಿಪಿಯನ್ನು ಬಳಸುವರು. ಇವರನ್ನು ಮ್ಯಾಸನಾಯಕರು ಎಂದು ಕರೆಯುತ್ತಾರೆ.[೨]

ದಕ್ಷಿಣ ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ ಸಾಕಷ್ಟು ನಡೆದಿದೆ. ಎಡ್ಗರ್ ಥರ್‌ಸ್ಟನ್ ಮತ್ತು ಕೆ. ರಂಗಾಚಾರಿ ಇವರು 'Castes and Tribes of Southern Indian' ಎನ್ನುವ ಕೃತಿಯನ್ನು ಪ್ರಕಟಿಸಿದ್ದಾರೆ. ಕರ್ನಾಟಕದಲ್ಲಿ ಎಲ್.ಕೆ. ಅನಂತಕೃಷ್ಣ ಅಯ್ಯರ್ ಮತ್ತು ಎಚ್.ವಿ. ನಂಜುಂಡಯ್ಯ ಅವರು 'The Mysore Castes and Tribes' ಎನ್ನುವ ಕೃತಿಯಲ್ಲಿ ಕರ್ನಾಟಕದ ಬುಡಕಟ್ಟುಗಳ ಬಗ್ಗೆ ಸಾಕಷ್ಟು ಅಧ್ಯಯನವನ್ನು ಮಾಡಿರುವುದು ಕಂಡುಬರುತ್ತದೆ. ಎಂ.ಜಿ. ಈಶ್ವರಪ್ಪ ಅವರು 'ಮ್ಯಾಸಬೇಡರು' ಪುಸ್ತಕವನ್ನು ಪ್ರಕಟಿಸಿದ್ದಾರೆ. ಆರ್.ರಾಜಣ್ಣ ಇವರು 'ನಾಯಕ ಜನಾಂಗದ ಇತಿಹಾಸ' ಎನ್ನುವ ಕೃತಿಯನ್ನು ಪ್ರಕಟಿಸಿದ್ದಾರೆ. ಎಂ.ಎಸ್.ಪುಟ್ಟಣ್ಣನವರು 'ಚಿತ್ರದುರ್ಗದ ಪಾಳೆಯಗಾರರು' ಎನ್ನುವ ಕೃತಿಯನ್ನು ರಚಿಸಿದ್ದಾರೆ.

**ಬೇಡ ಜನಾಂಗದ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆ**

ಮೂಲತಃ ಅರಣ್ಯವಾಸಿಗಳಾದ, ಬೇಟೆ ವೃತ್ತಿಯ ಹಿನ್ನೆಲೆಯನ್ನು ಹೊಂದಿದ ಬೇಡರಿಗೆ ಪೌರಾಣಿಕ ಮತ್ತು ಐತಿಹಾಸಿಕ ಹಿನ್ನೆಲೆಯಿದೆ. ಒಮ್ಮೆ ಕಾಡಿನಲ್ಲಿ ತಪಸ್ಸು ಮಾಡುವ ಭಕ್ತರ ತಪಸ್ಸನ್ನು ಪರೀಕ್ಷೆ ಮಾಡಲು ದೇವರಾದ ಶಿವನು ಬೇಡರ ವೇಷವನ್ನು ಧರಿಸಿ ಬರುತ್ತಾನಂತೆ. ಕಾಡುಬೇಡರು ಎಂದರೆ, ಯುದ್ಧಪ್ರಿಯರು, ಪ್ರಾಣಿ ಬೇಟೆಯಲ್ಲಿ ತೀವ್ರ ಆಸಕ್ತಿಯುಳ್ಳವರು, ಶೌರ್ಯ ಪ್ರದರ್ಶನದಲ್ಲಿ ಪಾಲ್ಗೊಳ್ಳುವವರು ಎನ್ನುವುದನ್ನು ಪಂಪ ಮತ್ತು ಕುಮಾರವ್ಯಾಸರ ಕೃತಿಗಳಲ್ಲಿ ನೋಡಬಹುದಾಗಿದೆ. ಶಿವನು ತನ್ನ ನಿಜರೂಪವನ್ನು ತೊರೆದು ಶಬರ ವೇಷವನ್ನು ತೊಟ್ಟಿರುವ ವರ್ಣನೆಯು ವಿಕ್ರಮಾರ್ಜುನ ವಿಜಯದಲ್ಲಿ ಪ್ರಸ್ತುತಪಡಿಸಲಾಗಿದೆ. ಹಾಗೂ ಈ ರೀತಿಯಾಗಿ ವರ್ಣಿಸಲಾಗಿದೆ.

ವನಚರನಾಗಿ ಶಂಭು ಗಿರಿಜಾತೆಯನೋತು ಪುಳಿಂದ ಮಾಡಿ ನ
ಚ್ಚಿನ ಗುಹನ ಕಿರಾತಬಲ ನಾಯಕನಾಗಿರೆ ಮಾಡಿ ಭೂತ ಮು
ಳ್ಳನಿತುಮನೆಯ್ದೆ ಬೇಡವಡೆಮಾಡಿ ಯುಗಾಂತ ಪಯೋಧರಾಳಿ
ಭೋಂಕನೆ ಕವಿವಂದದಿಂ ಕವಿದನಾ ಬನಮಂ ಮೃಗಯಾ ನಿಧಾನಮಂ'

ಕುಮಾರವ್ಯಾಸನ ಈ ಪದ್ಯದಲ್ಲಿ ಕಾಡಿನ ಬೇಡರು ಪ್ರಾಣಿ ಬೇಟೆಗಾಗಿ ಉಪಯೋಗಿಸುತ್ತಿದ್ದಂತಹ ಬಲೆ, ಆಯುಧಗಳ ವಿಶೇಷಗಳ ವಿವರಗಳು ಇವೆ.

ಚಾಳಿಸಿದ ಹದವಿಲ್ಲುಗಳ ಬಡಿ
ಕೋಲುಗಳ ಸಂಕಲೆಯ ನಾಯ್ಗಳ
ಕೋಲುವಲೆಗಳ ಸಿಡಿವಲೆಯ ಮಿಡಿವಲೆಯ
ಕಾಲುಗಣ್ಣಿಯ ಹೆಬ್ಬಲೆಯ ಬೆ

ಳ್ಳಾಲ ವಲೆಗಳ ಮಯಣದಂಟಿನ
ಮೇಲು ಕೊಂಬಿನ ಬೇಟೆಗಾರರು ಬಳಿಸಿದರು ಶಿವನ

ಕಪಟರಾಳ ಕೃಷ್ಣರಾಯರು ಬೇಡನಾಯಕರ ವೇಷಭೂಷಣಗಳನ್ನು ವರ್ಣಿಸುತ್ತಾ ಈ ರೀತಿ ಹೇಳುತ್ತಾರೆ. 'ಕೈಯಲ್ಲಿ ಬಡಿಗೋಲು, ನಡುವಿನಲ್ಲಿ ಕಠಾರಿ, ಮುಂಗೈಯಲ್ಲಿ ಬೇಟೆಯ ಗಿಡುಗವನ್ನು ಕೂರಿಸಿಕೊಂಡು ಹಿಂದೆ ಮುಂದೆ ಬರುವ ಬೇಟೆ ನಾಯಿಗಳೊಡನೆ ಬೇಡನಾಯಕರು ಸಮಯಕ್ಕೆ ತಕ್ಕಂತೆ ಸುಂದರವಾಗಿ ಶೋಭಿಸುವರು.[೩]

ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಬೇಡ ಯುವಕನೊಬ್ಬನ ಮಾನವ ಸಂಬಂಧದ ಭಾವನೆಗಳನ್ನು ಈ ರೀತಿ ವರ್ಣಿಸಲಾಗಿದೆ.

ಎನಿತ್ತೆನಿತ್ತಂಬುಜ ಪತ್ರ ನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ
ಅನಿತ್ತನಿತ್ತು ವನದೊಳ್ ವನೇಚರಂ
ತನತ್ತು ಬಿಲ್ಲಾನದನಂತೆ ಕೀಸುವಂ

ಅವಿವಾಹಿತ ಬೇಡನೊಬ್ಬ ಏರುಜವ್ವನದ ಬೇಡತಿಯನ್ನು ಕಂಡಂತೆಲ್ಲ ದುರ್ಬಲನಾಗುತ್ತಿದ್ದಾನೆ. ಅವಳ ಸ್ತ್ರೀತ್ವ ಮತ್ತು ಸೌಂದರ್ಯದ ಮುಂದೆ ಅವನ ಪುರುಷ ಪರಾಕ್ರಮ ಕರಗುತ್ತಿದೆ. ಹಾಗಾಗುತ್ತಿರುವುದರಿಂದ ಅವನು ಅವನ ವೃತ್ತಿಗೆ ಅಗತ್ಯವಾಗಿ ಬೇಕಾದ ಬಿಲ್ಲನ್ನು ಹೊರಲೂ ಅಶಕ್ತನಾಗಿ ಬಿಟ್ಟಿದ್ದಾನೆ. ಅವಿವಾಹಿತ ಪುರುಷನು ತಾನು ಪ್ರೇಮಿಸಿದ ಸ್ತ್ರೀಯ ಸಂಬಂಧದಲ್ಲಿ ಎರಡು ವಿಧದ ಗುಣಗಳನ್ನು ಪ್ರದರ್ಶಿಸುತ್ತಾನೆ. ಒಂದನೆಯದು ತಾನು ಬಯಸಿದವಳು ದೊರಕುವವರೆಗೆ ಇತರೆ ಚಟುವಟಿಕೆಗಳಲ್ಲಿ ನಿರಾಸಕ್ತನಾಗಿ ತನಗೆ ತಾನೇ ಭಾರವಾಗಿ ಬಿಡುವುದು. ಇದು ಪ್ರಣಯದ ಒಂದು ಮುಖವಾದರೆ ಇನ್ನೊಂದು ಇಷ್ಟಪಟ್ಟ ಸ್ತ್ರೀಯು ನೋಡಿ ಮೆಚ್ಚಲಿ ಎಂದು ಎಂತಹ ಸಾಹಸವನ್ನಾದರೂ ಕೈಗೊಳ್ಳುವುದು. ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಪುರುಷನು ಸ್ತ್ರೀಯರನ್ನು ಮೆಚ್ಚಿಸಲು ಮೊದಲನೆಯದಕ್ಕಿಂತ ಎರಡನೆಯದನ್ನು ಆಯ್ಕೆ ಮಾಡಿಕೊಂಡದ್ದೇ ಹೆಚ್ಚು. ಅಂಥದ್ದೊಂದು ಪದ್ಯವು ಈ ರೀತಿ ಇದೆ.

ಕೆಲದೊಳ್ ಪುಳಿಂದಿಯಿರೆ ಪೆ
ರ್ಬುಲಿ ಬಂದೊಡಮಂಜನಳ್ಕನೋಡಂ ನೋಡಂ
ಚಲದಿಂ ಕಾಡಂ ಕಾಡಂ
ಸಲೆ ಪಸಿವಂ ಮರೆದು ತಣಿದು ಬೇಡಂ ಬೇಡಂ

ಬೇಡತಿಯು ಪಕ್ಕದಲ್ಲಿರಬೇಕಾದರೆ, ಬೇಡನು ಹುಲಿಯ ಕಡೆ ನೋಡುವುದೂ ಇಲ್ಲ. ಅದಕ್ಕೆ ಹೆದರುವುದೂ ಇಲ್ಲ. ಹಸಿವು, ನೀರಡಿಕೆಗಳೂ ಅವನನ್ನು ಕಾಡುವುದಿಲ್ಲ. ಅವಿವಾಹಿತ ಯುವಕರು ತಾವು ಮೆಚ್ಚುವ ಹೆಣ್ಣುಗಳನ್ನು ನೋಡಿದಾಗ ಮುಖ್ಯವಾಗಿ ಪ್ರದರ್ಶಿಸುವ ಎರಡು ಬಗೆಯ ಪ್ರಣಯ ಭಾವಗಳು ಮೇಲಿನ ಎರಡೂ ಪದ್ಯಗಳಲ್ಲಿ ಸೂಕ್ಷ್ಮವಾಗಿ ವ್ಯಕ್ತವಾಗಿದೆ.[೪]

ಚಿತ್ರದುರ್ಗ ಪ್ರದೇಶವು ಮೌರ್ಯರು, ಶಾತವಾಹನರು, ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯಗಳ ಆಳ್ವಿಕೆಗೆ ಒಳಪಟ್ಟಿತ್ತು ಎನ್ನುವುದು

ಇತಿಹಾಸದಿಂದ ತಿಳಿದುಬರುತ್ತದೆ. ಚಿತ್ರದುರ್ಗ ಪ್ರದೇಶದಲ್ಲಿ ಪಾಳೆಯಗಾರರ ಆಳ್ವಿಕೆಯು ಹದಿನಾಲ್ಕನೇ ಶತಮಾನದಿಂದ ಆರಂಭವಾಗಿ ಹದಿನೆಂಟನೆಯ ಶತಮಾನದವರೆಗೂ ನಡೆಯುತ್ತದೆ. ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿದ್ದ ಚಿತ್ರದುರ್ಗದ ನಾಯಕ ಪಾಳೆಯಗಾರರು ನಂತರ ಸ್ವತಂತ್ರವಾಗಿ ಆಳ್ವಿಕೆಯನ್ನು ನಡೆಸಿದರು. ಹೈದರಾಲಿ ಮತ್ತು ಚಿತ್ರದುರ್ಗದ ಮದಕರಿ ನಾಯಕನ ನಡುವಿನ ಯುದ್ಧದಲ್ಲಿ ಚಿತ್ರದುರ್ಗದ ಕೋಟೆಯು ಹೈದರಾಲಿಯ ವಶವಾಯಿತು ಎಂದು ಇತಿಹಾಸದಿಂದ ತಿಳಿಯುತ್ತದೆ. ಪ್ರಾಚೀನ ಕಾಲದಿಂದಲೂ ಕೂಡ ಬೇಡನಾಯಕರು ಶೂರರು ಮತ್ತು ಧೀರರು ಆಗಿದ್ದರೆಂದು ತಿಳಿಯುತ್ತದೆ. ಚಿತ್ರದುರ್ಗದ ನಾಯಕ ಸಂಸ್ಥಾನಕ್ಕೆ ತನ್ನದೇ ಆದ ವಿಶೇಷ ಮಹತ್ವ ಇತಿಹಾಸದಲ್ಲಿದೆ.

ಬೇಡನಾಯಕರು ಮೂಲತಃವಾಗಿ ಆಂಧ್ರಪ್ರದೇಶದ ಗುಡ್ಡಗಾಡು ಪ್ರದೇಶದ ಶ್ರೀಶೈಲದ ಕಡೆಯಿಂದ ಕರ್ನಾಟಕಕ್ಕೆ ಬಂದವರೆಂದು ಬೇಡಜನಾಂಗದ ಕೆಲವು ಹಿರಿಯರು ತಿಳಿಸುತ್ತಾರೆ. ಅದಕ್ಕೆ ಪೂರಕವಾಗಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮೂರು, ಭಾಗಗಳಲ್ಲಿ ಬೇಡರು ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿನ ಬೇಡನಾಯಕರು ತಮ್ಮ ಜನಾಂಗವನ್ನು ಮ್ಯಾಸರು, ಬೇಡರು, ನಾಯಕ ಜನಾಂಗದವರೆಂದು ಗುರುತಿಸಿಕೊಳ್ಳುತ್ತಾರೆ. ಈ ಮೂರು ಪದಗಳೂ ಬೇಡನಾಯಕರೇ ಎಂಬುದನ್ನು ತಿಳಿಸುತ್ತಾರೆ. ಮ್ಯಾಸರು ಎಂದು ಕರೆಸಿಕೊಳ್ಳುವರು ಇವರು ತಾವು ವ್ಯಾಸ ಮಹಾಕವಿಯ ಕುಲದವರೆಂದು ಹೇಳಿಕೊಳ್ಳುತ್ತಾರೆ. ಅಲ್ಲದೆ, ವಾಲ್ಮೀಕಿ ಬೇಡ ಕುಲದವನಾಗಿದ್ದು, ತಾವೂ ಕೂಡ ವಾಲ್ಮೀಕಿ ಗೋತ್ರದವರೆಂದು ಹೇಳಿಕೊಳ್ಳುತ್ತಾರೆ. ಚಿತ್ರದುರ್ಗವನ್ನು ಆಳ್ವಿಕೆ ಮಾಡಿದ ಬೇಡನಾಯಕ ಪಾಳೆಯಗಾರರು ತಮ್ಮ ಶಾಸನಗಳಲ್ಲಿ ತಮ್ಮನ್ನು ವಾಲ್ಮೀಕಿ ಗೋತ್ರದವರೆಂದು ತಿಳಿಸಿದ್ದಾರೆ.

**ಬೇಡರ ಹುಟ್ಟು**

ಸಾಮಾನ್ಯವಾಗಿ ಎಲ್ಲಾ ಬುಡಕಟ್ಟುಗಳಲ್ಲಿಯೂ ಪ್ರಪಂಚದ ಹುಟ್ಟನ್ನು ಕುರಿತು ಸ್ವಾರಸ್ಯಕರ ಕಥೆಗಳಿದ್ದು ಈ ಪ್ರಪಂಚದ ಹುಟ್ಟಿನ ಆರಂಭಕ್ಕೆ ತಮ್ಮ ಬುಡಕಟ್ಟಿನ ಮೂಲ ಪುರುಷನೇ ಇದ್ದನು ಎಂದು ಹೇಳಿಕೊಳ್ಳುತ್ತವೆ. ಹಾಗೆಯೇ ಬೇಡ ಬುಡಕಟ್ಟು ಸಮುದಾಯದ ಮೂಲ ಪುರುಷನ ಹುಟ್ಟು ಕೂಡ ಬ್ರಹ್ಮ, ವಿಷ್ಣು, ಮಹೇಶ್ವರರಿಂದಲೇ ಆಯಿತು. ಈ ತ್ರಿಮೂರ್ತಿಗಳು ಪ್ರಪಂಚದ ಮೇಲೆ ಬರುತ್ತಿದ್ದರು. ಆಗ ಭೂಮಿಯ ಮೇರೆ ಬರೀ ಅರಣ್ಯವೇ ಇತ್ತು. ನರಮನುಷ್ಯರ ಸುಳಿವು ಇರಲಿಲ್ಲ. ತ್ರಿಮೂರ್ತಿಗಳು ಪ್ರಪಂಚದ ಮೇಲೆ ಬರುವಾಗ ಮೊಳಕಾಲ್ಮೂರು ಬಳಿಯ ಬಿ.ಜಿ. ಕೆರೆಯ ಬಳಿ ಕಮರದ ಕಾಡಿನಲ್ಲಿ ಒಂದು ಸರೋವರದ ಮುಂದೆ ಇಳಿದರು. ಆಗ ತಾನೆ ಬೆಳಗಾಗುತ್ತಲಿತ್ತು. ಮೂವರೂ ಕೂಡ ಮುಖಮಾರ್ಜನ ಮಾಡಿ ಬ್ರಹ್ಮ, ವಿಷ್ಣು ಇಬ್ಬರೂ ಹಣೆಗೆ ನಾಮ ಇಟ್ಟುಕೊಂಡರು. ಹಾಗೆ ನಾಮ ಇಡುವಾಗ ಅದರ ಶುದ್ಧಿಗೆ ಗೋವಿನ ಮೂತ್ರ ಬೇಕಾಯಿತು. ಆಗ ಬ್ರಹ್ಮ ಒಂದು ಒಂಟಿಕೊಂಬಿನ ಪಂಪಾದ್ರಿ ಎಂಬ ಬಸವನನ್ನು ಸೃಷ್ಟಿಸಿದನು. ಗೋವಿನ ಮೂತ್ರದ ಒಂದು ಹನಿಯನ್ನ ತೆಗೆದು ಬ್ರಹ್ಮ, ವಿಷ್ಣು ನಾಮವನ್ನು, ಮಹೇಶ್ವರನು ವಿಭೂತಿಯನ್ನು ಧರಿಸಿಕೊಂಡರು. ಮಹೇಶ್ವರನು ವಿಭೂತಿ ಧರಿಸುವಾಗ ವಿಭೂತಿಯ ಒಂದು ಧೂಳು ಬ್ರಹ್ಮನು

ಸೃಷ್ಟಿಸಿದ ಒಂಟಿಕೊಂಬಿನ ಹಸುವಿನ ಕಾಲುಗೊರಸಿನಲ್ಲಿ ಬಿದ್ದು ಅಲ್ಲಿ ಸಿಕ್ಕಿ ಹಾಕಿಕೊಂಡಿತು. ತ್ರಿಮೂರ್ತಿಗಳು ಆ ಸರೋವರವನ್ನು ಬಿಟ್ಟು ಹೋಗುವಾಗ ಅವರು ಸೃಷ್ಟಿಸಿದ ಒಂಟಿಕೊಂಬಿನ ಪಂಪಾದ್ರಿ ಬಸವನನ್ನು ನೋಡಿಕೊಳ್ಳುವವರು ಯಾರು ಎನ್ನುವ ಯೋಚನೆ ಬಂದಾಗ, ಬ್ರಹ್ಮನು ಆ ಎರಡು ಜೀವರಾಶಿಗಳನ್ನು ಸಲುಹುವವನು ಅವುಗಳಿಂದಲೇ ಹುಟ್ಟುತ್ತಾನೆ ಚಿಂತೆ ಮಾಡುವುದು ಬೇಡ ಎಂದನು. ಪ್ರತಿದಿನವೂ ಒಂಟಿಕೊಂಬಿನ ಹಸು ಮತ್ತು ಪಂಪಾದ್ರಿ ಬಸವ ಕಾಡಿನಲ್ಲಿ ಮೇಯ್ದು ಸರೋವರದಲ್ಲಿ ನೀರು ಕುಡಿದುಕೊಂಡಿದ್ದವು. ಒಂಟಿಕೊಂಬಿನ ಹಸುವಿನ ಕಾಲುಗೊರಸಿನಲ್ಲಿ ಸಿಕ್ಕಿಹಾಕಿಕೊಂಡಿದ್ದಂತಹ ವಿಭೂತಿಯ ಧೂಳು ಒಂಭತ್ತು ತಿಂಗಳು, ಒಂಭತ್ತು ದಿನ, ಒಂಭತ್ತು ಘಳಿಗೆಯಲ್ಲಿ ಬೆಳೆದು ಗರ್ಭಹೊಡೆದು ಗಂಡು ಶಿಶುವಿನ ಜನನವಾಯಿತು. ಅದು ಕೊಳದ ದಂಡೆಯಲ್ಲಿ ಅಳುತ್ತಿರುವಾಗ ಆ ದಿನವೇ ವಾಯುಮಾರ್ಗದಲ್ಲಿ ಹೋಗುತ್ತಿದ್ದಂತಹ ಶಿವಪಾರ್ವತಿಯರಿಗೆ ಕೇಳಿಸಿತು. ಪಾರ್ವತಿಯು ಬಂದು ಶಿಶುವಿನ ಹೊಕ್ಕಳದ ಹುರಿಯನ್ನು ಕತ್ತರಿಸಿ ಹಣೆಗೆ ಸುಟಿಗೆ ಹಾಕಿ ಮಗುವನ್ನು ಕೊಳದ ದಂಡೆಯಲ್ಲೇ ಮಲಗಿಸಿ ಅದಕ್ಕೆ ಚೆಟ್ಲುಗೊಟ್ಲು ಮಲ್ಲನಾಯಕ ಎಂದು ಹೆಸರಿಟ್ಟಳು. ಆ ಮಗುವು ಗಿಡಮರಗಳ ಮಧ್ಯದ ಕಾಡಿನಲ್ಲಿ ಹುಟ್ಟಿದ್ದುದರಿಂದ ಅದಕ್ಕೆ ಚೆಟ್ಲುಗೊಟ್ಲು ಮಲ್ಲನಾಯಕ ಎಂದು ಹೆಸರಾಯಿತು. ಆ ಶಿಶುವು ಮಲಗಿದ್ದ ಜಾಗದಲ್ಲಿಯೇ ಒಂದು ಮರವಿದ್ದು ಆ ಮರದಲ್ಲಿ ತುಡುಬೆ ಜೇನು ಕಟ್ಟಿತ್ತು. ಆ ಜೇನುಗೂಡಿನಿಂದ ಜೇನು ತೊಟ್ಟು ತೊಟ್ಟಾಗಿ ಶಿಶುವಿನ ಬಾಯಿಗೆ ಬಿದ್ದು ಮಗುವು ಅಳುವುದನ್ನು ನಿಲ್ಲಿಸಿಬಿಟ್ಟಿತು. ಶಿಶುವು ಚೆಟ್ಲುಗೊಟ್ಲು ಮಲ್ಲನಾಯಕನು ಬೆಳೆದು ಆ ಒಂಟಿಕೊಂಬಿನ ಹಸುವನ್ನು, ಪಂಪಾದ್ರಿ ಬಸವನನ್ನು ಸಾಕಿಕೊಂಡು ಕಾಲವನ್ನು ಕಳೆದನು. ಆಗಾಗ ದೇವಲೋಕದಿಂದ ಕಮರದ ಕಾಡಿನ ಸರೋವರದ ಕಡೆಗೆ ಗಂಧರ್ವ ಕನ್ಯೆಯರು ಬಂದು ನೀರಾಟವಾಡಿ ಹೋಗುತ್ತಿದ್ದರು. ಆಗ ಒಬ್ಬಳು ಗಂಧರ್ವ ಕನ್ಯೆ ಚೆಟ್ಲುಗೊಟ್ಲು ಮಲ್ಲನಾಯಕನನ್ನು ಕಂಡು ಮೋಹಗೊಂಡು ವಿವಾಹವಾಗಿ ಅಲ್ಲಿಯೇ ಇದ್ದುಬಿಟ್ಟಳು. ಇವರಿಬ್ಬರಿಗೂ ಹುಟ್ಟಿದ ಒಬ್ಬಳೇ ಹೆಣ್ಣುಮಗಳು ಚಂಚುಲಕ್ಷ್ಮಿ. ಈ ಚಂಚುಲಕ್ಷ್ಮಿ ಬೆಳೆದು ಕಾಡಿನಲ್ಲಿ ಇರುವಾಗ ವಿಷ್ಣುವು ನರಸಿಂಹನ ಅವತಾರ ತಾಳಿ ಹಿರಣ್ಯ ಕಶಿಪುನನ್ನು ಕೊಂದು ತನ್ನ ಪ್ರತಾಪ ಹಾಗೂ ಕೋಪವನ್ನು ತಾಳಲಾರದೆ ಬರುತ್ತಿರಬೇಕಾದರೆ ಅವನ ಆಟಾಟೋಪವನ್ನು ಚಂಚುಲಕ್ಷ್ಮಿ ತಡೆದಳು. ನಂತರ ಚಂಚುಲಕ್ಷ್ಮಿಯು ತನ್ನ ವಂಶಕ್ಕೆ ದೇವತೆಯಾಗಿ ನಿಲ್ಲಬೇಕೆಂದು ಕೇಳಿಕೊಂಡಳು. ನರಸಿಂಹನು ಚಂಚುಲಕ್ಷ್ಮಿಯನ್ನು ವಿವಾಹವಾಗಿ ಸ್ವಲ್ಪಕಾಲ ಅವಳೊಂದಿಗೆ ಸಂಸಾರ ಮಾಡಿ ದೇವಲೋಕಕ್ಕೆ ಹೋದನು. ಚಂಚುಲಕ್ಷ್ಮಿ ಮತ್ತು ನರಸಿಂಹನಿಗೆ ಹುಟ್ಟಿದ ಮೂವರು ಮಕ್ಕಳೇ ಪೆದ್ದನಾಯಕ, ಕೋರಿಮರ ಮಂಚನಾಯಕ, ಕೋರಿ ಪಾಪನಾಯಕ, ಇವರೇ ಬೇಡನಾಯಕರ ಮೂಲ ಪುರುಷರೆನಿಸಿಕೊಂಡರು. ಚಿತ್ರದುರ್ಗ ಜಿಲ್ಲೆಯ ಹಿರಿಯರೆಲ್ಲರೂ ತಮ್ಮ ಈ ಕುಲಮೂಲಕಥೆಯನ್ನು ಅತ್ಯಂತ ಭಕ್ತಿಯಿಂದಲೇ ನೆನೆಯುತ್ತಾರೆ. ಸಾಮಾನ್ಯವಾಗಿ ಪ್ರಕೃತಿಯಿಂದಲೇ ತನ್ನ ಕುಲಮೂಲ ಮೂಡಿ ಬಂದುದಾಗಿ ಎಲ್ಲಾ ಬುಡಕಟ್ಟುಗಳೂ, ತಮ್ಮ ಕುಲಮೂಲ ಕಥೆಗಳನ್ನು ಹೇಳಿಕೊಂಡಂತೆ ಬೇಡನಾಯಕರು, ತಮ್ಮ ಕುಲಮೂಲ ಪುರುಷನನ್ನು ಚೆಟ್ಲುಗೊಟ್ಲು ಮಲ್ಲನಾಯಕನೆಂದೇ ಕರೆದುಕೊಂಡಿದ್ದಾರೆ. ತೆಲುಗಿನ ಚೆಟ್ಲುಗೊಟ್ಲು ಪದಕ್ಕೆ ಕನ್ನಡದಲ್ಲಿ

ಗಿಡಗಂಟೆ(ಗಿಡ-ಮರ) ಎಂದು ಗಿಡಮರಗಳ ಮಧ್ಯೆ ಬೆಳೆದವನನ್ನು ಚೆಟ್ಲುಗೊಟ್ಲು ಮಲ್ಲನಾಯಕ ಎಂದು ಕರೆಯಲಾಗಿದೆ.[೫]

**೨.೨. ಮೂಲ ಮತ್ತು ಪ್ರಸಾರ**

ಬೇಡನಾಯಕ ಜನಾಂಗವು ಆಂಧ್ರಪ್ರದೇಶದ ಶ್ರೀಶೈಲ ಬೆಟ್ಟಗುಡ್ಡ ಪ್ರದೇಶಗಳಿಂದ ಕರ್ನಾಟಕ ಪ್ರದೇಶಕ್ಕೆ ಬಂದವರೆಂದು ಬಹಳಷ್ಟು ಮೂಲಗಳಿಂದ ತಿಳಿದುಬರುತ್ತದೆ. ಎಂ.ಎಸ್. ಪುಟ್ಟಣ್ಣನವರು 'ಚಿತ್ರದುರ್ಗದ ಪಾಳೆಯಗಾರರು' ಎನ್ನುವ ತಮ್ಮ ಕೃತಿಯಲ್ಲಿ ಬೇಡನಾಯಕರು ಮೂಲತಃವಾಗಿ ದೆಹಲಿಯಿಂದ ಬಂದವರೆಂದು ತಿಳಿಸುತ್ತಾರೆ. ಇದಕ್ಕೆ ಪೂರಕವೆಂಬಂತೆ ಚಿತ್ರದುರ್ಗ ಪ್ರದೇಶದ ಬೇಡನಾಯಕರು ಬಹುತೇಕವಾಗಿ ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ಅಲ್ಲದೆ ತಮ್ಮ ಮೂಲದೇವರು ಶ್ರೀಶೈಲ ಮಲ್ಲಿಕಾರ್ಜುನ ಎಂದು ತಿಳಿಸುತ್ತಾರೆ. ತಮ್ಮ ಹೆಸರುಗಳನ್ನು ಮಲ್ಲಪ್ಪನಾಯಕ, ಬೋಸೆ ಮಲ್ಲಪ್ಪನಾಯಕ, ಮಲ್ಲಪ್ಪ ಎಂದು ಕರೆದುಕೊಳ್ಳುತ್ತಾರೆ. ಬೇಡನಾಯಕರು ಕ್ರಿಶ.೧೫೦೦ರ ಕಾಲದಲ್ಲಿ ಕಾಟೇಮಲ್ಲಿನಾಯಕ ಎನ್ನುವ ಮುಖಂಡನ ನಾಯಕತ್ವದಲ್ಲಿ ಶ್ರೀ ಶೈಲ ಪ್ರದೇಶಗಳಿಂದ ಚಿತ್ರದುರ್ಗದ ಪ್ರದೇಶಗಳಿಗೆ ಬಂದರೆನ್ನುವುದು ತಿಳಿಯುತ್ತದೆ. ಬೇಡನಾಯಕರು ಚಿತ್ರದುರ್ಗ, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿ ಯತೇಚ್ಛವಾಗಿ ಕಂಡುಬರುತ್ತಾರೆ. ಕರ್ನಾಟಕದ ಬಹುತೇಕ ಎಲ್ಲಾ ಜಿಲ್ಲೆಗಳಲ್ಲೂ ಕೂಡ ಪಸರಿಸಿದ್ದಾರೆ. ಪ್ರಾಕೃತಿಕ ಸ್ಥಿತ್ಯಂತರಗಳು, ಶೈಕ್ಷಣಿಕ ಮತ್ತು ಉದ್ಯೋಗಗಳ ಅವಶ್ಯಕತೆಗಳಿಗಾಗಿ ಕರ್ನಾಟಕ ರಾಜ್ಯದಾದ್ಯಂತ ಬೇಡನಾಯಕರು ಕಂಡುಬರುತ್ತಾರೆ. ಕರ್ನಾಟಕ ರಾಜ್ಯವನ್ನೊಳಗೊಂಡಂತೆ ಮಹಾರಾಷ್ಟ್ರ, ತಮಿಳುನಾಡು, ಕೇರಳ, ಆಂಧ್ರಪ್ರದೇಶ ರಾಜ್ಯಗಳಲ್ಲಿಯೂ ಬೇಡನಾಯಕರು ಕಂಡುಬರುತ್ತಾರೆ. ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮೂರು, ಹೊಳಲ್ಕೆರೆ ಮತ್ತು ಹೊಸದುರ್ಗ ತಾಲ್ಲೂಕುಗಳಲ್ಲಿ ಬೇಡನಾಯಕರು ವಾಸಿಸುತ್ತಿದ್ದಾರೆ.

**೨.೩. ವಸತಿ ವ್ಯವಸ್ಥೆ**

ಬೇಡ ಬುಡಕಟ್ಟು ಜನಾಂಗದಲ್ಲಿ ಊರುನಾಯಕ ಮತ್ತು ಮ್ಯಾಸನಾಯಕ ಎನ್ನುವ ಎರಡು ಪಂಗಡಗಳಿವೆ. ಊರುನಾಯಕರು ಊರುಗಳಲ್ಲಿ ವಾಸಮಾಡುತ್ತಾರೆ. ಮ್ಯಾಸನಾಯಕರು ಊರು ಹೊರಗೆ ಹಟ್ಟಿಗಳನ್ನು ಕಟ್ಟಿಕೊಂಡು ವಾಸಮಾಡುತ್ತಾರೆ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಮತ್ತು ಚಳ್ಳಕೆರೆ ತಾಲ್ಲೂಕುಗಳಲ್ಲಿ ಈಗಲೂ ಈ ರೀತಿಯ ವಾಸಮಾಡುವ ಪದ್ಧತಿ ಕಂಡುಬರುತ್ತದೆ. ಊರುಗಳಲ್ಲಿ ವಾಸಮಾಡುವ ಬೇಡರು ಶಿಕ್ಷಣವನ್ನು ಪಡೆದು ಬೇರೆ ಬೇರೆ ಉದ್ಯೋಗಗಳನ್ನು ಮಾಡಿಕೊಂಡು ಆಧುನಿಕ ಶೈಲಿಯಂತೆ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಮ್ಯಾಸನಾಯಕರು ಈಗಲೂ ಕೆಲವೊಂದು ಕಡೆ ತಮ್ಮ ಹಟ್ಟಿಗಳ ಸುತ್ತಲೂ ಮುಳ್ಳುಬೇಲಿ ಹಾಕಿಕೊಂಡಿರುವುದು ಕಂಡುಬರುತ್ತದೆ. ಈ ಹಿಂದೆ ತಮ್ಮ ಮನೆಗಳನ್ನು, ಗುಡಿಸಲುಗಳನ್ನು ಅಂಚೆ ಹುಲ್ಲು, ಲಕ್ಕಿ ಬರಲು ಇವುಗಳಿಂದ ಕಟ್ಟಿಕೊಳ್ಳುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಹೆಂಚಿನ ಮನೆಗಳು, ಕಡಪದ ಕಲ್ಲಿನ ಮನೆಗಳು, ಸಿಮೆಂಟ್ ಶೀಟ್‌ಗಳ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಆರ್ಥಿಕವಾಗಿ ಅನುಕೂಲ ಸ್ಥಿತಿಯಲ್ಲಿರುವ ಕುಟುಂಬಗಳು ಆರ್.ಸಿ.ಸಿ. ಮನೆಗಳನ್ನೂ ಕಟ್ಟಿಕೊಂಡಿದ್ದಾರೆ. ಬೇಡನಾಯಕರು ಸಹಜವಾಗಿ ತಮ್ಮ

ಊರುಗಳನ್ನು ಚಿಕ್ಕದಾದ ಕೋಟೆಯ ರಕ್ಷಣೆ ಇರುವಂತೆ ಕಟ್ಟಿಕೊಳ್ಳುತ್ತಿದ್ದರು. ಮುಳ್ಳುಬೇಲಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುತ್ತಿದ್ದರು. ಈ ಹಿಂದೆ ಪದೇ ಪದೇ ಯುದ್ಧಗಳು ನಡೆಯುತ್ತಿದ್ದವು. ತಮ್ಮನ್ನು ರಕ್ಷಿಸಿಕೊಳ್ಳುವ ಅನಿವಾರ್ಯತೆ ಇತ್ತು. ಶತ್ರು ಸೈನಿಕರು ದಾಳಿ ಮಾಡುವುದನ್ನು ತಪ್ಪಿಸಲು, ಸ್ತ್ರೀಯರನ್ನು ಅಪಹರಣ ಮಾಡುತ್ತಾರೆನ್ನುವ ಕಾರಣಗಳಿಂದ ತಮ್ಮ ಕುಟುಂಬದ ರಕ್ಷಣೆಗೆ ಆದ್ಯತೆಯನ್ನು ನೀಡುತ್ತಿದ್ದರು.

ಚಿತ್ರದುರ್ಗ ಪ್ರದೇಶಗಳಲ್ಲಿನ ಹಳ್ಳಿಗಳಲ್ಲಿ ಬೇಡನಾಯಕರ ಹಳೆಯ ಮನೆಗಳು ಈಗಲೂ ಇವೆ. ಇಂತಹ ಮನೆಗಳು ಸಾಲು ಸಾಲು ಮನೆಗಳಾಗಿದ್ದು, ಮನೆಯ ಒಂದು ಭಾಗದಲ್ಲಿ ದನಕರುಗಳನ್ನು ಕಟ್ಟಲು ಜಾಗವಿದ್ದರೆ, ಇನ್ನೊಂದು ಭಾಗದಲ್ಲಿ ಕುಟುಂಬದವರು ವಾಸಮಾಡುವ ಜಾಗವಾಗಿರುತ್ತದೆ. ಮನೆಯ ಮುಖ್ಯದ್ವಾರವನ್ನು ಮುಚ್ಚಿದರೆ, ಕುಟುಂಬದ ಸದಸ್ಯರು ಮತ್ತು ದನಕರುಗಳು ಒಂದೇ ಮನೆಯಲ್ಲಿ ಇರುತ್ತವೆ. ತಮ್ಮನ್ನು ಹಾಗೂ ದನಕರುಗಳನ್ನು ರಕ್ಷಣೆ ಮಾಡಿಕೊಳ್ಳುವುದಕ್ಕಾಗಿ ಈ ರೀತಿಯ ವ್ಯವಸ್ಥೆ ಮಾಡಿಕೊಂಡಿರಬಹುದು. ಮನೆಗಳು ಸಾಲಾಗಿ ಅಕ್ಕಪಕ್ಕದ ಗೋಡೆಗೆ ಅಂಟಿಕೊಂಡಂತೆ ಇರುತ್ತವೆ. ಪ್ರತಿ ಮನೆಯೂ ಪೆಟ್ಟಿಗೆಯಂತೆ ಇರುತ್ತದೆ. ಮನೆಯ ಒಳಗಡೆ ಗಾಳಿ ಬೆಳಕಿನ ವ್ಯವಸ್ಥೆಯು ಕಡಿಮೆ ಇರುತ್ತದೆ. ಎಂಟರಿಂದ ಹತ್ತು ಅಡಿಯ ವರೆಗೆ ಗೋಡೆಯನ್ನು ನಿರ್ಮಿಸಿ ಅದರ ಮೇಲೆ ತೆಂಗು, ಈಚಲು ಮುಂತಾದ ಮರದ ತುಂಡುಗಳನ್ನು ಅಡ್ಡಹಾಕಿ, ಆ ಮರದ ತುಂಡುಗಳ ಮೇಲೆ, ಆವುರಿಕೆ, ಲಕ್ಕಿ ಬರಲು ಮುಂತಾದ ಕಡ್ಡಿಗಳನ್ನು ಹಾಕಿ ಮಣ್ಣನ್ನು ಹಾಕಿ ಮುಚ್ಚಿ ಅದರ ಮೇಲೆ ಕರಲು ಅಥವಾ ಜೇಡಿಮಣ್ಣನ್ನು ಹಾಕುತ್ತಿದ್ದರು.

ಬೇಡನಾಯಕರು ವಾಸಿಸುವ ಗುಡಿಸಲುಗಳು ಈ ರೀತಿ ಇರುತ್ತಿದ್ದವು. ಕೆಲವು ಕಡೆ ಈಗಲೂ ಇವೆ. ವೃತ್ತಾಕಾರದ ಅಥವಾ ಚೌಕಕಾರದಲ್ಲಿ ಮಣ್ಣಿನ ಅಥವಾ ಕಲ್ಲಿನ ಗೋಡೆಯನ್ನು ಸುಮಾರು ಐದರಿಂದ ಆರು ಅಡಿ ನಿರ್ಮಿಸಿ ಅದರ ಮೇಲೆ ಲಕ್ಕಿ ಬರಲು ಕಟ್ಟುತ್ತಾರೆ. ಅದರ ಮೇಲೆ ಅಂಚಿ ಹುಲ್ಲು ಹೊಂದಿಸುತ್ತಾರೆ. ನೆಲವನ್ನು ಸಮತಟ್ಟು ಮಾಡಿ ಸಗಣಿಯಿಂದ ಒರೆಸುತ್ತಾರೆ. ಬಾಗಿಲುಗಳು ಚಿಕ್ಕದಾಗಿರುತ್ತವೆ. ಮೂಲತಃವಾಗಿ ಅರಣ್ಯ ವಾಸಿಗಳಾಗಿದ್ದ ಇವರ ಗುಡಿಸಲುಗಳು ಇತರೆ ಬುಡಕಟ್ಟು ಜನಾಂಗದ ಗುಡಿಸಲುಗಳಂತೆಯೇ ಇರುತ್ತವೆ. ಮನೆಯ ಸುತ್ತಾ ಮುಳ್ಳು ಬೇಲಿಗಳನ್ನು ಹಾಕಿಕೊಂಡಿರುತ್ತಾರೆ. ತಮ್ಮನ್ನು ರಕ್ಷಿಸಿಕೊಳ್ಳಲು ಈ ರೀತಿ ಮಾಡುತ್ತಾರೆನ್ನುವುದು ತಿಳಿಯುತ್ತದೆ. ಆದರೆ ಆಧುನಿಕತೆಯ ಈ ಕಾಲದಲ್ಲಿ ತಮ್ಮ ಮನೆಗಳನ್ನು ಆಧುನಿಕ ಮನೆಗಳ ರೀತಿಯಲ್ಲಿ ನಿರ್ಮಿಸಿಕೊಳ್ಳುತ್ತಿದ್ದಾರೆ.

ಬೇಡ ನಾಯಕರ ಮನೆಗಳು ಸಾಮಾನ್ಯವಾಗಿ ಆಯತಾಕಾರವನ್ನು ಹೊಂದಿರುತ್ತವೆ. ಕೆಲವು ಕಡೆ ಸಾಲು ಮನೆಗಳು ಇರುತ್ತವೆ. ಮನೆಯು ಪಡಸಾಲೆ, ಅಡುಗೆ ಮನೆ, ದೇವರ ಕೋಣೆ, ಬಚ್ಚಲು ಕೋಣೆಗಳನ್ನು ಹೊಂದಿರುತ್ತವೆ. ಮನೆಯ ಒಳಗಡೆ ಪಾದರಕ್ಷೆಗಳನ್ನು ಹಾಕಿಕೊಂಡು ಇವರು ಹೋಗುವುದಿಲ್ಲ. ಮನೆಯ ಹೊರಗಡೆಯ ಒಂದು ಭಾಗದಲ್ಲಿ ಪಾದರಕ್ಷೆಗಳನ್ನು ಬಿಟ್ಟಿರುತ್ತಾರೆ. ಮನೆಯನ್ನು ಪವಿತ್ರ ಭಾವನೆಯಿಂದ ಕಾಣುತ್ತಾರೆ. ಋತುಮತಿಯಾದ ಸ್ತ್ರೀಯರು ದೇವರ ಕೋಣೆಯನ್ನು ಪ್ರವೇಶಿಸುವುದಿಲ್ಲ. ದೇವರ ಕೋಣೆಯನ್ನು ಪ್ರವೇಶಿಸುವುದು ಅಪವಿತ್ರ ಎನ್ನುವ ಭಾವನೆ

ಬೇಡನಾಯಕರಲ್ಲಿದೆ. ದೇವರ ಕೋಣೆಯಲ್ಲಿ ತಮ್ಮ ಮನೆ ದೇವರ ಮೂರ್ತಿ ಅಥವಾ ದೇವರ ಭಾವಚಿತ್ರವನ್ನು ಇಟ್ಟು ಪೂಜಿಸುತ್ತಾರೆ. ಕೆಲವು ಮನೆಗಳಲ್ಲಿ ಸ್ನಾನದ ಕೋಣೆಗಳು ಇರುವುದಿಲ್ಲ. ಅಂತಹ ಮನೆಗಳಲ್ಲಿ ಬಟ್ಟೆಯಿಂದ ಮರೆಮಾಚಿದ ಬಚ್ಚಲುಗಳು ಇರುತ್ತವೆ. ಸಾಮಾನ್ಯವಾಗಿ ಶೌಚಾಲಯಗಳು ಇವರ ಮನೆಗಳಲ್ಲಿ ಇರುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಆರೋಗ್ಯದ ದೃಷ್ಟಿಯಿಂದ ಶೌಚಾಲಯಗಳನ್ನು ಸರ್ಕಾರದ ಸಹಾಯಧನದಿಂದ ಕಟ್ಟಿಸಿಕೊಳ್ಳುತ್ತಿದ್ದಾರೆ. ಕೆಲವು ಕಡೆಗಳಲ್ಲಿ ಇವರ ಮನೆಗಳು ಗುಡಿಸಲುಗಳಾಗಿದ್ದರೂ ಬಿದಿರುಗಳಿಂದ ಭದ್ರವಾಗಿ ಕಟ್ಟಿಕೊಂಡಿರುತ್ತಾರೆ. ತೆಂಗಿನಗರಿಯ ಚಾಪೆಗಳು ಅಡಿಕೆ ದೆಬ್ಬೆ(ಕತ್ತರಿಸಿದ ಕೋಲು)ಗಳನ್ನು ಬಳಸುತ್ತಾರೆ.

ಬೇಡನಾಯಕರು ತಮ್ಮ ಮನೆಗಳನ್ನು ಕಟ್ಟುವ ಸಂದರ್ಭದಲ್ಲಿ ಬುನಾದಿಯನ್ನು ಉದ್ದ ಮತ್ತು ಅಗಲದ ಬೆಸಸಂಖ್ಯೆಯನ್ನು ಆಧರಿಸಿ ಹಾಕುತ್ತಾರೆ. ಮನೆಯ ಬಾಗಿಲುಗಳು ಇಂತಹುದೇ ದಿಕ್ಕಿಗೆ ಇರಬೇಕು ಎನ್ನುವ ನಿರ್ಬಂಧವೇನೂ ಇರುವುದಿಲ್ಲ. ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ಸೇರಿದಂತೆ ಎಲ್ಲಾ ದಿಕ್ಕುಗಳಿಂದ ಮನೆಗಳು ಇರುತ್ತವೆ. ಬೇಡನಾಯಕರು ನಿರ್ದಿಷ್ಟವಾಗಿ ಒಂದೇ ಸ್ಥಳದಲ್ಲಿ ವಾಸಮಾಡುವುದಕ್ಕಾಗಿ ಸ್ವಂತದ್ದಾದ ತಮ್ಮದೇ ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಕೆಲವೊಂದು ಮನೆಗಳಲ್ಲಿ ಅವಿಭಕ್ತ ಕುಟುಂಬಗಳು ಇರುತ್ತವೆ. ಕೆಲವು ಮನೆಗಳಲ್ಲಿ ವಿಭಕ್ತ ಕುಟುಂಬಗಳು ವಾಸಿಸುತ್ತವೆ. ಮಾಳಿಗೆ ಮನೆಗಳನ್ನು ಇಟ್ಟಿಗೆ, ಮಣ್ಣಿನ ಹೆಂಡೆ, ಮರದ ದಿಮ್ಮಿ(ಮರದ ತುಂಡು)ಗಳು, ಕಾಡುಕಲ್ಲುಗಳು, ಕಡಪದ ಕಲ್ಲುಗಳು ಮುಂತಾದವುಗಳನ್ನು ಬಳಸಿ ಕಟ್ಟುತ್ತಾರೆ. ಬೆಳಕಿಗಾಗಿ ಸಣ್ಣ ಕಿಟಕಿಗಳು ಮತ್ತು ಗವಾಕ್ಷಿಗಳು ಇರುತ್ತವೆ. ಇತ್ತೀಚಿನ ಆಧುನಿಕ ದಿನಗಳಲ್ಲಿ ಹೆಂಚು, ಸಿಮೆಂಟ್ ಶೀಟುಗಳು, ಸಿಮೆಂಟ್, ಕಬ್ಬಿಣ ಮುಂತಾದವುಗಳನ್ನು ಬಳಸಿ, ಆಧುನಿಕ ರೀತಿಯ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಇಂದಿಗೂ ಕೂಡ ಬಡತನ ಸ್ಥಿತಿಯಲ್ಲಿರುವ ಬೇಡನಾಯಕರು ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಮನೆಗಳನ್ನು ಕಟ್ಟಲು ಬೇರೆ ಜನಾಂಗಗಳಾದ ಉಪ್ಪಾರ, ವಡ್ಡರು, ಸುಣಗಾರರು, ಮುಸ್ಲಿಮರನ್ನು ಕೆಲಸಕ್ಕೆ ಕರೆತರುತ್ತಾರೆ.

### ೨.೪. ಬಂಧುತ್ವ ಮತ್ತು ವಿವಾಹ ಪದ್ಧತಿ

ಪ್ರತಿಯೊಂದು ಬುಡಕಟ್ಟು ಜನಾಂಗಗಳಲ್ಲಿ ಬಂಧುತ್ವ ಮತ್ತು ವಿವಾಹ ಪದ್ಧತಿಗೆ ವಿಶೇಷ ಸ್ಥಾನಮಾನವಿದೆ. ಪ್ರತಿಯೊಂದು ಜನಾಂಗವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ವಿವಾಹ ಪದ್ಧತಿಯನ್ನು ಆಚರಿಸಿಕೊಂಡು ಬಂದಿದೆ. ವಿವಾಹದ ಮೂಲಕ ವಯಸ್ಕರಾದ ಗಂಡು ಮತ್ತು ಹೆಣ್ಣು ತಮ್ಮ ಪ್ರಕೃತಿ ಸಹಜವಾದ ಲೈಂಗಿಕ ಆಸೆ–ಆಕಾಂಕ್ಷೆಗಳನ್ನು ಪೂರೈಸಿಕೊಳ್ಳುವುದರ ಮೂಲಕ ಸಂತಾನವನ್ನು ಪಡೆಯುವುದು ವಿವಾಹದ ಪ್ರಮುಖ ಉದ್ದೇಶವಾಗಿದೆ.

ಬೇಡನಾಯಕ ಸಮುದಾಯದಲ್ಲಿ ವಿವಾಹಕ್ಕೆ ಪವಿತ್ರವಾದ ಸ್ಥಾನವಿದೆ. ಮದುವೆಯಾದ ಪುರುಷರು ಮತ್ತು ಸ್ತ್ರೀಯರು ಬೇಡ ಸಮಾಜದಲ್ಲಿ ವಿಶೇಷವಾದ ಗೌರವಕ್ಕೆ ಪಾತ್ರರಾಗುತ್ತಾರೆ. ವಿವಾಹವನ್ನು ಒಂದು ಸಂಸ್ಕಾರದ ರೀತಿಯಲ್ಲಿ ಆಚರಿಸಲಾಗುತ್ತದೆ. ಬೇಡ ಸಮುದಾಯವು ತನ್ನ ವಂಶವನ್ನು ಮುಂದುವರೆಸಲು ವಿವಾಹ ಪದ್ಧತಿಯನ್ನು ಆಚರಿಸುತ್ತವೆ. ವಿವಾಹದ ಸಂದರ್ಭದಲ್ಲಿ

ತಮ್ಮ ಎಲ್ಲಾ ಬಂಧು ಬಾಂಧವರು ಒಂದು ಕಡೆ ಸೇರಿ ವಿವಾಹವಾಗುವ ವಧು ಮತ್ತು ವರನನ್ನು ಆಶೀರ್ವದಿಸುತ್ತಾರೆ. ವಿವಾಹವನ್ನು ಸಂಭ್ರಮದ ರೀತಿಯಲ್ಲಿ ಆಚರಿಸುತ್ತಾರೆ. ವರನ ಕಡೆಯವರೆಗೆ ಮತ್ತು ವಧುವಿನ ಕಡೆಯವರಿಗೆ ಸಂಭ್ರಮಾಚರಣೆ ರೀತಿಯಲ್ಲಿ ವಿವಾಹವು ಕಂಡುಬರುತ್ತದೆ. ವಿವಾಹದ ಸಂದರ್ಭದಲ್ಲಿ ಬೇಡನಾಯಕರು ಹಲವಾರು ವಿಧಿವಿದಾನಗಳು, ಸಂಪ್ರದಾಯಗಳನ್ನು ಆಚರಿಸುತ್ತಾರೆ. ವಿವಾಹದ ಪೂರ್ವದಲ್ಲಿ ಹಾಗೂ ವಿವಾಹದ ನಂತರ ಹಲವಾರು ಸಾಂಪ್ರದಾಯಿಕ ಆಚರಣೆಗಳನ್ನು ಆಚರಿಸುತ್ತಾರೆ. ಈ ಸಾಂಪ್ರದಾಯಿಕ ಆಚರಣೆಗಳು ಬೇಡ ಬುಡಕಟ್ಟು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ.

ಬೇಡ ಬುಡಕಟ್ಟು ಸಮುದಾಯದಲ್ಲಿ ಪಿತೃಪ್ರಧಾನ ಕುಟುಂಬ ಪದ್ಧತಿ ಅಸ್ತಿತ್ವದಲ್ಲಿದೆ. ಕುಟುಂಬದ ಹಿರಿಯ ಪುರುಷನಿಗೆ ಪ್ರಮುಖ ಸ್ಥಾನವಿದೆ. ಆದಾಗ್ಯೂ ಹೆಣ್ಣು ಮಕ್ಕಳ ಸ್ಥಾನವೂ ಕೂಡ ಪ್ರಮುಖವಾದುದಾಗಿದೆ. ಬೇಡನಾಯಕ ಬುಡಕಟ್ಟು ಜನಾಂಗದಲ್ಲಿ ಹೆಣ್ಣು ಮಕ್ಕಳನ್ನು ಹೆತ್ತವರು ತಮ್ಮ ಮಕ್ಕಳ ಮದುವೆಗೆ ವರನನ್ನು ಹುಡುಕೊಂಡು ಹೋಗುವುದಿಲ್ಲ. ಬದಲಾಗಿ, ವರನ ಕಡೆಯವರೇ ವಧುಗಳು ಇರುವ ಮನೆಗೆ ಹೋಗಿ ಹೆಣ್ಣನ್ನು ಕೇಳುವುದು ಸಂಪ್ರದಾಯವಾಗಿದೆ. ಒಸಗೆಯನ್ನು ತೆಗೆದುಕೊಂಡು ವರನ ಕಡೆಯವರು ವಧುವಿನ ಮನೆಗೆ ಹೋಗುತ್ತಾರೆ. ಒಸಗೆ ಎಂದರೆ ಎಲೆ ಅಡಿಕೆ, ಐದು ಚಿಪ್ಪು ಬಾಳೆಹಣ್ಣು, ಐದು ಉತ್ತುತ್ತಿ, ಐದು ಕೊಬ್ಬರಿ, ಅರಿಶಿಣದ ಕೊಂಬು, ನಾಲ್ಕು ಸೇರು ಹಸಿ ಅಕ್ಕಿ, ಅಕ್ಕಿ ಹಿಟ್ಟಿನ ಉಂಡೆ, ಮುಂತಾದವುಗಳನ್ನು ತೆಗೆದುಕೊಂಡು ಹೋಗಬೇಕು. ಹೆಣ್ಣು ಒಪ್ಪಂದದ ನಂತರ ವಧುವಿನ ಕಡೆಯವರು ತಮ್ಮ ಕುಲಸ್ಥರಿಗೆ ವೀಳ್ಯವನ್ನು ಹಂಚಿಕೆ ಮಾಡುತ್ತಾರೆ. ಮದುವೆಗೂ ಕೂಡ ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಬರಬೇಕೆಂಬ ಸಂಪ್ರದಾಯವಿದೆ. ವಧುವನ್ನು ನೋಡುವುದಕ್ಕೆ ಬರುವ ಸಂದರ್ಭದಿಂದ ಪ್ರಾರಂಭವಾಗಿ ವಿವಾಹದ ಕೊನೆಯ ಆಚರಣೆಯವರೆಗೂ ಬೇಡನಾಯಕರ ಕುಲಸ್ಥರು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತಾರೆ. ಎಲ್ಲಾ ಸಂಪ್ರದಾಯಗಳೂ ಕೂಡ ಕುಲಸ್ಥರ ಉಪಸ್ಥಿತಿಯಲ್ಲಿಯೇ ಜರುಗುತ್ತವೆ. ವಿವಾಹವಾಗುವುದಕ್ಕಿಂತ ಮುಂಚೆ ವರನ ಕಡೆಯವರು ವಧುವಿನ ಕಡೆಯವರಿಗೆ 'ತೆರಕೊಡುವ ಪದ್ಧತಿ' ಇದೆ. ಬಹುತೇಕ ಎಲ್ಲಾ ಬುಡಕಟ್ಟುಗಳಲ್ಲಿಯೂ ತೆರಕೊಡುವ ಸಂಪ್ರದಾಯ'ವು ರೂಢಿಯಲ್ಲಿದೆ. ತೆರಕೊಡುವುದು ಎಂದರೆ ವರನ ಕಡೆಯವರು ವಧುವಿನ ಕಡೆಯವರಿಗೆ ವಿವಾಹವಾಗುವುದಕ್ಕಿಂತ ಮುಂಚೆ ಇಂತಿಷ್ಟು ಎಂದು ಹಣವನ್ನು ಕೊಡುವುದು. ಹಣವಿಲ್ಲದಿದ್ದರೆ ಬೆಲೆಬಾಳುವ ವಸ್ತುಗಳನ್ನು ಕೊಟ್ಟು ವಿವಾಹವಾಗುವ ಸಂಪ್ರದಾಯವಾಗಿದೆ. ಮದುವೆಯಾಗುವ ವಧು ಮತ್ತು ವರನ ಬೆಡಗುಗಳು ಬೇರೆ ಬೇರೆಯಾಗಿರಬೇಕು. ಒಂದೇ ಬೆಡಗು ಆಗಿದ್ದರೆ ವಿವಾಹವನ್ನು ಮಾಡುವುದಿಲ್ಲ. ಕಾರಣವೇನೆಂದರೆ ಒಂದೇ ಬೆಡಗು ಒಂದೇ ಕುಟುಂಬದ ರೀತಿಯಲ್ಲಿ ಸಹೋದರತ್ವವನ್ನು ಹೊಂದಿರುತ್ತದೆ. ಬೇಡನಾಯಕರ ವಿವಾಹದ ಸಂದರ್ಭದಲ್ಲಿ ಹಲವಾರು ಆಚರಣೆಗಳನ್ನು ಮಾಡುತ್ತಾರೆ. ದಿಬ್ಬಣಿಗರನ್ನು ಸ್ವಾಗತಿಸುವುದು, ಒಳಕಲ್ಲು ಪೂಜೆ, ಬೀಸುವ ಕಲ್ಲುಪೂಜೆ, ಹಸೆ ಬರೆಯುವುದು, ಕಳಸ ತುಂಬುವುದು, ಅರಿಶಿನಶಾಸ್ತ್ರ, ಸುರಗಿ ಎರೆಯುವುದು, ಸುತ್ತುವುದು, ಧಾರೆಶಾಸ್ತ್ರ, ಲಗ್ನಪತ್ರಿಕೆ ಕಟ್ಟುವುದು ಮುಂತಾದ ಆಚರಣೆಗಳನ್ನು ಮಾಡುತ್ತಾರೆ. ಪ್ರತಿಯೊಂದು ಆಚರಣೆಗಳ ಸಂದರ್ಭದಲ್ಲಿಯೂ ಸೋಬಾನೆ ಪದಗಳನ್ನು ಹಾಡುತ್ತಾರೆ.

ಬೇಡನಾಯಕರಲ್ಲಿ ಕುಲಪಂಗಡಗಳಿವೆ. ತಮ್ಮ ಗುಂಪುಗಳನ್ನು ಅನೇಕ ಬೆಡಗುಗಳನ್ನಾಗಿ ಮಾಡಿಕೊಂಡಿದ್ದಾರೆ. ಕೆಲವು ಬೆಡಗುಗಳನ್ನು ಅಣ್ಣ ತಮ್ಮಂದಿರು ಎಂದು ತಮ್ಮಲ್ಲಿಯೇ ವಿಂಗಡಿಸಿಕೊಂಡಿದ್ದು ಅಂತಹ ಬೆಡಗುಗಳ ನಡುವೆ ವಿವಾಹವು ನಿಷಿದ್ಧವಾಗಿದೆ. ಅಣ್ಣತಮ್ಮಂದಿರ ಬೆಡಗುಗಳನ್ನು ಬಿಟ್ಟು ನೆಂಟರಾಗುವ ಬೆಡಗುಗಳ ನಡುವೆ ವಿವಾಹವು ಏರ್ಪಡುತ್ತದೆ. ಇಂತಹ ಬೇಡನಾಯಕ ಜನಾಂಗದ ಬೆಡಗುಗಳನ್ನು ತಾರಿಹಳ್ಳಿ ಹನುಮಂತಪ್ಪ ಅವರು 'ಹೊಸಪೇಟೆ ನಾಯಕರ ಏಳುಕೇರಿಗಳ ಸಾಂಸ್ಕೃತಿಕ ಅಧ್ಯಯನ' ಎನ್ನುವ ಪಿಎಚ್.ಡಿ. ಪ್ರಬಂಧದಲ್ಲಿ ಪಟ್ಟಿ ಮಾಡಿದ್ದಾರೆ.

**ಬೇಡನಾಯಕ ಜನಾಂಗದ ಬೆಡಗುಗಳು**

೧. ಅತ್ತಿ ಕಂಕಣ
೨. ಅನಾಲರು
೩. ಅಂಕೆಲರು
೪. ಅನ್ಯಾವರು
೫. ಅಕ್ಕಲೂರು ಬುಟಕಲವರು
೬. ಅಗಸ್ತ್ಯ
೭. ಅಜ್ಜಮುತ್ತಿಯವರು
೮. ಅಜ್ಜಡ್ಲೋರು
೯. ಅಜ್ಜ ಪಲ್ಲೋರು
೧೦. ಅಂದರದವರು
೧೧. ಅರಕೋರು
೧೨. ಅನಂದರು
೧೩. ಅಲಕತ್ತು ಬುಟಕಲವರು
೧೪. ಅಂಗುಮೋಲರು
೧೫. ಅವುರೋರ್ಲು
೧೬. ಅಚರ್ಲವರು
೧೭. ಇಮ್ಮಳ್ಳು
೧೮. ಈರಗಾರ
೧೯. ಈಟಿಯವರು
೨೦. ಉರಿಶಿಂಗರು
೨೧. ಉದ್ದಲೋರು
೨೨. ಎನುಮಲವರು
೨೩. ಎಕ್ರಪೋತಲೋರು
೨೪. ಎಮ್ಮೋಲವರು
೨೫. ಎಕ್ಕೇಲೋರು
೨೬. ಎರ್ರಿಸಾಮಿ
೨೭. ಏಳುಬೆಟ್ಟದವರು
೨೮. ಓತಲವರು
೨೯. ಓಬನಾಯಕರು
೩೦. ಕುರ್ತೀರ್
೩೧. ಕಳಿಸಲರ
೩೨. ಕೆಂಗಲರ
೩೩. ಕೋಣಿಗಲ್
೩೪. ಕರೇಸಲ್ಲರ್
೩೫. ಕಬ್ಬೇಲರ
೩೬. ಕಲ್ಲಲ್ಲೇರ
೩೭. ಕುರ್ತೀರ
೩೮. ಕುಲಘದವರು
೩೯. ಕರುವಂತದವರು
೪೦. ಕನ್ಯಾಲೋರು
೪೧. ಕಾಂಗೆತ್ತಲರು
೪೨. ಕಂಕಾಳ ಸಹಕೇತರು
೪೩. ಕಲ್ನಷರು
೪೪. ಕಂಕರು
೪೫. ಕಾಮಕೇತಲವರು
೪೬. ಕಾಮಲವರು
೪೭. ಕಿರಿಯ ಮುಚ್ಚಲವರು

೪೮. ಕಿಲ್ಲಿಷರು
೪೯. ಕಸ್ತೂರಿಯವರು
೫೦. ಕುಂಚೇಲವರು
೫೧. ಕಲ್ಯಾಣದವರು
೫೨. ಕವಲವರು
೫೩. ಕತ್ತಿಯವರು
೫೪. ಕವಾರಿಕಾರರು
೫೫. ಕಿರಾತಕರು
೫೬. ಕಿನ್ನರರು
೫೭. ಕುರ್ಲೇರು
೫೮. ಕುರಂಗ ಸಹಕೇತರು
೫೯. ಕುಂತಳದವರು
೬೦. ಕಂಬಳದವರು
೬೧. ಕುರಿಯವರು
೬೨. ಕುಕ್ಕಲವರು
೬೩. ಕಾಳಿದವರು
೬೪. ಕಾಡುಚರರು
೬೫. ಕಮಲದವರು
೬೬. ಕುರಂಜರು
೬೭. ಕುಳಿಂದರು
೬೮. ಕೋರೆಣ್ಣವರು
೬೯. ಕುಂಟ್ಲವರು
೭೦. ಕೆಂಗ ಪುಟ್ಟಲವರು
೭೧. ಕಾಶೀಗೋತ್ರ
೭೨. ಕಬ್ಬಿಲವರು
೭೩. ಕೊಳಾಯಿಲವರು
೭೪. ಕುರಸಾಲವರು
೭೫. ಕಂದಿರ್ಲವರು
೭೬. ಕೆಬ್ಬೋಳ್ಳು
೭೭. ಗಂಗನಾಥರು
೭೮. ಗಗ್ಗಡಲವರು
೭೯. ಗಂಗೆನನಾಯಕ ಪೆನ್ನಯ್ಯಲವರು
೮೦. ಗಜ್ಜಲವರು
೮೧. ಗಾಕಣ್ಣವರು
೮೨. ಗುಮ್ಮಟದವರು
೮೩. ಗೂಜಲವರು
೮೪. ಗಡ್ಡದವರು
೮೫. ಗೆದ್ದಲವರು
೮೬. ಗೋಲೇರು
೮೭. ಗೋಪಾಲಪಾತರು
೮೮. ಗೋಪಾನವರು
೮೯. ಗೊಲ್ಲಾಳರು
೯೦. ಗೋವಿನವರು
೯೧. ಗೌಂಪೋರು
೯೨. ಗೆಜ್ಜೇಡರು
೯೩. ಗುಲ್ಲನವರು
೯೪. ಗುಜ್ಜಲರು
೯೫. ಗೋಸಲರ್
೯೬. ಗೆಬ್ಬೆಲರ್
೯೭. ಗೊಬ್ಬಿಲರ್
೯೮. ಗುಡಗ್ಲೇರ್
೯೯. ಗವಲೇರ್
೧೦೦. ಗವಲೇರ್
೧೦೧. ಗೌಲರು
೧೦೨. ಗೊರಲಾರ
೧೦೩. ಗುರಲೇವರು
೧೦೪. ಚಂಪಲರು
೧೦೫. ಚಂದಬಲನ್ನವರು
೧೦೬. ಚಕ್ರ
೧೦೭. ಚಿಪ್ಪಲವರು
೧೦೮. ಚಿನಗಾಟನಾಯಕರು
೧೦೯. ಚಿನಮದಿಲವರು

೧೧೦.ಚಿನ್ನಗಟ್ಲೋರು
೧೧೧.ಚೀಮಲವರು
೧೧೨.ಚೆಡುಬೋಕುಲವರು
೧೧೩.ಬಿಜ್ಜಟ್ಲವರು
೧೧೪.ಜಂಪಲರು
೧೧೫.ಜಂತಲವರು
೧೧೬.ಜನುಕ್ತಿಯವರು
೧೧೭.ಜುಕ್ಕಲವರು
೧೧೮.ಜಂಕೇಲವರು
೧೧೯.ಜಕಲರು
೧೨೦.ಜಂಗಲರು
೧೨೧.ಜಾಡಲರು
೧೨೨.ಜಿನಗಲರು
೧೨೩.ತಳಗಲ್ಲ
೧೨೪.ತರಮುಖರು
೧೨೫.ತುರುಮನೇರು
೧೨೬.ತಿರಮುಖರ್
೧೨೭.ತಟ್ಟಿಲರ್
೧೨೮.ತನುಲಮತ್ತೇರು
೧೨೯.ತಂಪುಲೋರು
೧೩೦.ತಪುಲವರು
೧೩೧.ತೇರುಸಾಮಂತರು
೧೩೨.ತೊಡಲವರು
೧೩೩.ದ್ವಿರಕಲ್ಲೇರ
೧೩೪.ದೊರಿಲವರು
೧೩೫.ಪೋಲರ
೧೩೬.ಪುರ್ತೀರ
೧೩೭.ಪೊತ್ತುಗಳೇರ
೧೩೮.ಪರಮುಖರ
೧೩೯.ಪೋತಲರ
೧೪೦.ಪಿಂಗಾರ
೧೪೧.ಪೆರುಮಕ್ಕಳೀರ್
೧೪೨.ಪಡಲಿವರ್
೧೪೩.ಪೋಲೋರು
೧೪೪.ಪುಟ್ಟಮುಲವರು
೧೪೫.ಪಡ್ಡಲವರು
೧೪೬.ಪಾಲೋರು
೧೪೭.ಪಲ್ಲೆಪರಲವರು
೧೪೮.ಪರಮಶಿವಲವರು
೧೪೯.ಪಾನುಮಲವರು
೧೫೦.ಪಗಲವರು
೧೫೧.ಪಾಲಮುನಿ ಗೋತ್ರದವರು
೧೫೨.ಪುಟ್ಟಪೂಲವರು
೧೫೩.ಪಾಮಡಲವರು
೧೫೪.ಪಾವಕಲವರು
೧೫೫.ಪಾಮುಲವರು
೧೫೬.ಪೀತಲವರು
೧೫೭.ಪುವ್ವಲವರು
೧೫೮.ಪೆಯ್ಯಲವರು
೧೫೯.ಪೂಲರು
೧೬೦.ಪುಟ್ಟಲವರು
೧೬೧.ಪೂಲಮಾಲವರು
೧೬೨.ಪೆದ್ದಮದಿಲವರು
೧೬೩.ಪೆದ್ದಳ್ಳನಾಯಕರು
೧೬೪.ನಲ್ಲೆತೀರ
೧೬೫.ನಲ್ಲೆಲ್ಲಾರು
೧೬೬.ನಿಚ್ಚಿಮಲೆಯರು
೧೬೭.ನಲ್ಲಬೋತಲವರು
೧೬೮.ನಗರಾಂತಕರು
೧೬೯.ನವಣೆಯವರು
೧೭೦.ನಾಮಲವರು
೧೭೧.ನಾಗರಸರು

೧೭೨. ನಾರಪೋರು
೧೭೩. ನಲ್ಲೆಲವರು
೧೭೪. ನಲುಕೇತರಲವರು
೧೭೫. ನಾಯಿಗುಜ್ಜಲವರು
೧೭೬. ನಾದೆರ್ಲವರು
೧೭೭. ನೀರಕಾಶೀ
೧೭೮. ನೀಲಮೋರು
೧೭೯. ಬಾಚಕಲ್ಲೇರ
೧೮೦. ಬಂಡೆ ಬಲದವರ
೧೮೧. ಬೆನಕನವರ
೧೮೨. ಬರಿಪಿಲರ್
೧೮೩. ಭಟ್ಟರ್
೧೮೪. ಬೋಗಿಲರ್
೧೮೫. ಬೆಂಚಲರ್
೧೮೬. ಬೆಲ್ಲೋಲರ್
೧೮೭. ಬಡಕಲರ
೧೮೮. ಬಲ್ಲರ್
೧೮೯. ಮಳಲೇರು
೧೯೦. ಮೀನಗಲರ್
೧೯೧. ಮಲ್ಲರ್
೧೯೨. ಮುಮ್ಮಡಲವರ್
೧೯೩. ಮನಪೊಲ್ಲಾರ್
೧೯೪. ಮುದಗೊಂಡ್ಲರ್
೧೯೫. ಮುರ್ತೀರ್
೧೯೬. ಮಸಗಲ್ಲರ್
೧೯೭. ಮನ್ನಲರ್
೧೯೮. ಮೋಗಲ್ಲರ್
೧೯೯. ಮಲ್ಲಗ್ಲರ
೨೦೦. ಮಣಿಗಲರ
೨೦೧. ಮೀನುಗೋತ್ರ
೨೦೨. ಮಲೆಯರು
೨೦೩. ಮುತ್ತೋರು
೨೦೪. ಮದಲೋರು
೨೦೫. ಮುಚ್ಚಳವರು
೨೦೬. ಮಂದಲೋರು
೨೦೭. ಮುತಶ್ಯರ್
೨೦೮. ಮಳಗಲ್ಲರ್
೨೦೯. ಮರ್ತೇರ
೨೧೦. ಡೇವಕಲ್ಲರ್
೨೧೧. ಯಮಗಲೂರ್
೨೧೨. ಯುದ್ಧಲವರ
೨೧೩. ಯಮೇಲರು
೨೧೪. ರೆಂಗಾಲೇರ
೨೧೫. ರಂಬೆಲವರ
೨೧೬. ಲಕ್ಷ್ಮೇಲೇರು
೨೧೭. ಸೊಳ್ಳೇರ್
೨೧೮. ಹುಲೇರ
೨೧೯. ಹೊನ್ನಬಂಟ್ಲವರ
೨೨೦. ಡಾಕೇಲವರು
೨೨೧. ಹೊನ್ನ
೨೨೨. ಸಂತಾಲೇರ

**ವಿವಾಹ ಪದ್ಧತಿ :**

ಬೇಡ ಜನಾಂಗದ ಹಿರಿಯರ ಸಮ್ಮುಖದಲ್ಲಿ ವಿವಾಹಕ್ಕೆ ಸಂಬಂಧಿಸಿದ ಪ್ರಮುಖ ನಿರ್ಧಾಗಳನ್ನು ತೆಗೆದುಕೊಳ್ಳಲಾಗುತ್ತದೆ. ಕುಲಗಳು ಹೊಂದಾಣಿಕೆಯಾದರೆ ಪುರೋಹಿತರು ಅಥವಾ ಜಂಗಮರ ಹತ್ತಿರ ಹೋಗಿ ಮದುವೆಯಾಗುವ ವಧು-ವರರ ಹೆಸರಿನಲ್ಲಿ 'ಸಾಲಾವಳಿ'ಯನ್ನು ಕೇಳಲಾಗುತ್ತದೆ. ಸಾಲಾವಳಿಯು ಕೂಡಿ ಬಂದರೆ ವಿವಾಹಕ್ಕೆ ಒಪ್ಪಿಗೆಯನ್ನು ಸೂಚಿಸಲಾಗುತ್ತದೆ. ವರನು ತನ್ನ ಅಕ್ಕನ ಮಗಳು, ಮಾವನ ಮಗಳನ್ನು ವಿವಾಹವಾಗಬಹುದು. ಹಿರಿಯ ಅಣ್ಣನ ಹೆಂಡತಿಯನ್ನು ತಾಯಿಯ ರೀತಿಯಲ್ಲಿ ಗೌರವಿಸಲಾಗುತ್ತದೆ. ಬಾಲ್ಯವಿವಾಹವನ್ನು ಮಾಡುವುದಿಲ್ಲ. ಹೆಣ್ಣುಮಕ್ಕಳು ಋತುಮತಿಯಾದ ನಂತರ ಪ್ರಾಪ್ತವಯಸ್ಕರಾದ ಮೇಲೆ ವಿವಾಹವನ್ನು ಮಾಡಲಾಗುತ್ತದೆ. ಎರಡು ಕುಟುಂಬಗಳು ಪರಸ್ಪರ ಒಪ್ಪಿಗೆಯ ಮೇರೆಗೆ ಗಂಡು ಮತ್ತು ಹೆಣ್ಣು ಕೊಟ್ಟುಕೊಳ್ಳುವುದರ ಮೂಲಕ ವಿವಾಹವಾಗಬಹುದು. ಈ ವಿವಾಹವನ್ನು 'ಹೆಣ್ಣು ಕೊಟ್ಟು ಹೆಣ್ಣುತರುವ ಪದ್ಧತಿ' ಎಂದು ಕರೆಯಲಾಗುತ್ತದೆ. ಒಂದು ವೇಳೆ ವರನು ಮದುವೆಯಾದ ಹೆಂಡತಿಯು ನಿಧನ ಹೊಂದಿದರೆ, ನಿಧನ ಹೊಂದಿದ ಹೆಂಡತಿಯ ತಂಗಿಯನ್ನು ಬೇಕಾದರೆ ವಿವಾಹ ಮಾಡಿಕೊಳ್ಳಬಹುದು. ಮನೆಯಲ್ಲಿ ಅಣ್ಣ ತಮ್ಮಂದಿರು ಇದ್ದಾಗ ಮೊದಲು ಹಿರಿಯ ಮಗನಿಗೆ ಮದುವೆ ಮಾಡಲಾಗುತ್ತದೆ. ನಂತರ ಕಿರಿಯ ಮಗನಿಗೆ ಮದುವೆಯನ್ನು ಮಾಡುತ್ತಾರೆ. ವರನು ಮದುವೆಗೆ ಮುಂಚೆ ಮುದ್ರೆಯನ್ನು ಹಾಕಿಸಿಕೊಂಡಿರಬೇಕೆಂಬ ನಿಯಮವಿದೆ. ಒಂದು ವೇಳೆ ಮುದ್ರೆಯನ್ನು ಹಾಕಿಸಿಕೊಂಡಿರದಿದ್ದರೆ ಮುದ್ರೆಯನ್ನು ಹಾಕಿಸಿಕೊಂಡು ವಿವಾಹವಾಗ ಬೇಕಾಗುತ್ತದೆ. ಶಂಕು ಮತ್ತು ಚಕ್ರದ ಮುದ್ರೆಯ ಗುರುತುಗಳನ್ನು ಹಾಕುತ್ತಾರೆ.

ನಿಶ್ಚಿತಾರ್ಥ ಶಾಸ್ತ್ರದ ಮೂಲಕ ಬೇಡರ ವಿವಾಹ ಅಧಿಕೃತವಾಗುತ್ತದೆ. ವಧುವಿನ ಮನೆಯಲ್ಲಿ ನಿಶ್ಚಿತಾರ್ಥಶಾಸ್ತ್ರ ನಡೆಯುತ್ತದೆ. ಈ ಶಾಸ್ತ್ರಕ್ಕಾಗಿ ವರನ ಕಡೆಯವರು ವಧುವಿನ ಮನೆಗೆ ಹೋಗುತ್ತಾರೆ. 'ಇಳೇವು' ಎನ್ನುವ ಶಾಸ್ತ್ರವು ದೇವಸ್ಥಾನದ ಮುಂದೆ ನಡೆಯುತ್ತದೆ. ಅಲ್ಲಿ ವರ ಮತ್ತು ವಧುವನ್ನು ಇಂತಹ ವರನಿಗೆ ಕೊಡಲಾಗಿದೆ ಎಂದು ಹೇಳುತ್ತಾ ಶಂಖವನ್ನು ಊದಿ ಜಾಗಟೆಯನ್ನು ಬಾರಿಸುವುದರ ಮೂಲಕ ನಿಶ್ಚಿತಾರ್ಥ ಶಾಸ್ತ್ರ ನೆರವೇರುತ್ತದೆ. ಮದುವೆಗೆ ಒಂಭತ್ತು ದಿನ ಅಥವಾ ಹದಿನೈದು ದಿನ ಇದ್ದಾಗ ಮದುವೆಗೆ ಸಿದ್ಧತೆ ನಡೆಯುತ್ತಿದೆ ಎನ್ನುವುದನ್ನು ತೋರಿಸುವುದಕ್ಕೆ ವಳ್ಳಕ್ಕಿ ಪಾಡುವುದು ಎನ್ನುವ ಶಾಸ್ತ್ರವನ್ನು ಮಾಡುತ್ತಾರೆ. ಬೀಸುವ ಕಲ್ಲಿನ ಪೂಜೆ, ವಳ್ಳು, ಒನಕೆಯನ್ನು ಪೂಜೆ ಮಾಡುತ್ತಾರೆ. ಐದು ಸೇರು ಭತ್ತವನ್ನು ವಳ್ಳಿನಲ್ಲಿ ಹಾಕಿ ಐದು ಜನ ಐಲುಗಿತ್ತಿಯರು ಕುಟ್ಟುತ್ತಾರೆ. ಈ ಸಂದರ್ಭದಲ್ಲಿ ಸಂಬಂಧಿಕರ ಮನೆಯ ಹಿರಿಯರು ಇರುತ್ತಾರೆ. ವಳ್ಳಕ್ಕಿ ಪಾಡಿರುವ ಅಕ್ಕಿಯನ್ನು ಅರಿಶಿಣ ಮತ್ತು ಕುಂಕುಮವನ್ನು ಲೇಪಿಸಿ ಮದುವೆಯ ತಾಳಿಕಟ್ಟುವ ಸಮಯದಲ್ಲಿ ಅಕ್ಷತೆಯಾಗಿ ಕೊಡುತ್ತಾರೆ. ವಳ್ಳಕ್ಕಿ ಪಾಡುವ ಸಂದರ್ಭದಲ್ಲಿ ಐಲುಗಿತ್ತಿಯರು (ಸೋಬಾನ ಗಿತ್ತಿಯರು) ಸೋಬಾನೆ ಪದಗಳನ್ನು ಹಾಡುತ್ತಾರೆ.

**ಸೋಬಾನೆ ಹಾಡು**

ಸುವೀ ಸುವೀ ಸುವ್ವಾಲೆ
ಸುವೀ ಸುವೀ ಸುವ್ವಾಲೆ
ವಳ್ಳಕ್ಕಿ ಪಾಡಾಕ ನಮನ್ಯಾರೋ ಕರೆಸ್ಯಾರೆ
ಮ್ಯಾಲೆ ಮಾಳಿಗಿ ಅಯ್ಯಮ್ಮ
ಸುವೀ ಸುವೀ ಸುವ್ವಾಲೆ
ಸುವೀ ಸುವೀ ಸುವ್ವಾಲೆ
ಸುಣ್ಣ ಮಾರುವ ಜಾಣ ನಮ್ಮ ಓಣಿಗೆ ಬಾರೋ
ಜಾಣೆ ಮೊಮ್ಮಕ್ಕಳ ಮದುವೀಗೀ
ಸುವೀ ಸುವೀ ಸುವ್ವಾಲೆ
ಸುವೀ ಸುವೀ ಸುವ್ವಾಲೆ
ಅಂಗೈಲಿ ಮಣ್ಣು ತೀಡ್ಯಾಳೆ ಆಕೆ
ನಂದಿಗೀಶ್ವರನಾ ಮಾಡ್ಯಾಳೆ
ಮುತ್ತೈದೆ ತನವಾ ಪಡೆದಂತಾ ಚೆನ್ನಮ್ಮ ಬಾರೇ
ಸುವೀ ಸುವೀ ಸುವ್ವಾಲೆ
ಸುವೀ ಸುವೀ ಸುವ್ವಾಲೆ
ಹೆಬ್ಬೆಟ್ಟಿಲಿ ಮಣ್ಣು ತೀಡ್ಯಾಳೆ ಆಕೆ
ಸೃಷ್ಟಿಗೀಶನಾ ಸೆಟ್ಯಾರ ಪ್ರಾಣ ಪಡೆದಂತ ಚೆನ್ನಮ್ಮ ಬಾರೇ
ಸುವೀ ಸುವೀ ಸುವ್ವಾಲೆ
ಸುವೀ ಸುವೀ ಸುವ್ವಾಲೆ

ವಧು–ವರರಿಗೆ ಬಟ್ಟೆಯನ್ನು ಖರೀದಿಸುವುದು ಬೇಡರ ವಿವಾಹದಲ್ಲಿ ಮುಖ್ಯವಾದ ಸಂಪ್ರದಾಯವಾಗಿದೆ. ವರನ ಕಡೆಯವರು ತಮ್ಮ ಹಿರಿಯರನ್ನು ಕರೆದುಕೊಂಡು ಹೋಗುತ್ತಾರೆ. ವಧುವಿನ ಕಡೆಯವರು ಸೇರಿ ತಮಗೆ ಹಾಗೂ ಕುಲಬಾಂಧವರಿಗೆ ಬಟ್ಟೆಯನ್ನು ಖರೀದಿ ಮಾಡುತ್ತಾರೆ. ಮದುವೆ ಮಾತುಕತೆಯ ಪ್ರಕಾರ ವರನಿಗೆ ಕೈಗಡಿಯಾರ, ಉಂಗುರ, ಬಂಗಾರದ ಸರ, ಬಟ್ಟೆಯನ್ನು ಕೊಡುವುದು ಹಾಗೂ ವಧುವಿಗೆ ಕಿವಿಯ ಆಭರಣ, ಕೈಉಂಗುರ, ಕಾಲುಂಗುರ, ಮೂಗುತಿ, ಸರ, ಬಟ್ಟೆಯನ್ನು ಕೊಡುವುದು ಮಾಡುತ್ತಾರೆ. ವರನ ಕಡೆಯವರು ಒಂದು ತಾಳಿಯನ್ನು ವಧುವಿನ ಕಡೆಯವರು ಒಂದು ತಾಳಿಯನ್ನು ಮಾಡಿಸುವ ತಾಳಿಯ ಶಾಸ್ತ್ರವನ್ನು ಮಾಡುತ್ತಾರೆ. ಮದುವೆಯನ್ನು ನಿರ್ಧಾರ ಮಾಡಿದ ಐದು ಅಥವಾ ಒಂಭತ್ತು ದಿನಗಳಲ್ಲಿ ಲಗ್ನಪತ್ರಿಕೆಯನ್ನು ಕಟ್ಟಿಸುವ ಶಾಸ್ತ್ರವನ್ನು ಮಾಡುತ್ತಾರೆ. ಸಾಮಾನ್ಯವಾಗಿ ಬೇಡರ ಕೇರಿಗಳಲ್ಲಿ ದೇವಸ್ಥಾನದಲ್ಲಿ ಈ ಶಾಸ್ತ್ರವನ್ನು ಮಾಡುತ್ತಾರೆ. ದೇವಸ್ಥಾನದ ಮುಂದೆ ಸಾಯಂಕಾಲದ ಸಮಯದಲ್ಲಿ ಪುರೋಹಿತರು ಮತ್ತು ಹಿರಿಯರ ಸಮ್ಮುಖದಲ್ಲಿ ಕಂಬಳಿಯ ಮೇಲೆ ಲಗ್ನಪತ್ರಿಕೆ ಇಟ್ಟು, ಪೂಜೆಯನ್ನು ಮಾಡಿ ಮುತ್ತೈದೆಯರು ಕಳಸವನ್ನು ಬೆಳಗುತ್ತಾರೆ. ಪುರೋಹಿತರಿಗೆ ಕಾಣಿಕೆಯ ರೂಪದಲ್ಲಿ ಅಕ್ಕಿ, ಬೇಳೆ, ಬೆಲ್ಲ, ಹೋಳಿಗೆ ಹಿಟ್ಟು, ಕೊಬ್ಬರಿ, ಎಣ್ಣೆ, ಅಡಿಕೆ ಮುಂತಾದವುಗಳನ್ನು ಕೊಡಲಾಗುತ್ತದೆ. ಲಗ್ನಪತ್ರಿಕೆಯಲ್ಲಿ ಪುರೋಹಿತರು ವಧು ಮತ್ತು ವರನ ಹೆಸರು, ತಂದೆ ಮತ್ತು ತಾಯಂದಿರ ಹೆಸರು, ಬೆಡಗು, ವಯಸ್ಸು,

ವಿದ್ಯಾಭ್ಯಾಸ, ಮದುವೆಯ ಮಹೂರ್ತ, ಕಲ್ಯಾಣ ಮಂಟಪದ ಹೆಸರು, ಮದುವೆಯ ದಿನಾಂಕ ಮುಂತಾದ ವಿವಾಹಗಳನ್ನು ಬರೆಯುತ್ತಾರೆ. ನಂತರ ಎಲ್ಲರೂ ಅಕ್ಷತೆಯನ್ನು ಹಾಕುತ್ತಾರೆ.

ಮದುವೆಯ ಸಂದರ್ಭದಲ್ಲಿ ಐಲುಗಿತ್ತಿಯರು (ಸೋಬಾನಗಿತ್ತಿಯರು) ಬಹಳ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತಾರೆ. ಐದು ಜನ ಸೋಬಾನ ಗಿತ್ತಿಯರು ಸೇರಿದರೆ ಮಾತ್ರ ಐಲುಗಿತ್ತಿಯರಾಗುತ್ತಾರೆ. ಮದುವೆಯ ಕಾರ್ಯದ ಸಮಯದಲ್ಲಿ ಇವರು ವಳ್ಳಕ್ಕಿ ಪಾಡುವುದು, ಸೋಬಾನೆ ಪದಗಳನ್ನು ಹಾಡುವುದು, ಲಗ್ನ ಪತ್ರಿಕೆ ಕಟ್ಟಿಸುವುದು, ಮದುವೆಯ ದಿನದಂದು ಸುರಗಿ ಸುತ್ತುವುದು, ಕಳಸವನ್ನು ಹಿಡಿಯುವುದು, ವಧು–ವರರಿಗೆ ಅರಿಷಿಣವನ್ನು ಹಚ್ಚುವುದು, ಗಂಗೆಯ ಪೂಜೆಯನ್ನು ಮಾಡಿಸುವುದು, ಹೂವು ಹಣ್ಣುಗಳನ್ನು ತರುವುದು, ಮದುವೆಗೆ ಸಂಬಂಧಿಸಿದ ಸಿದ್ಧತೆಗಳನ್ನು ಮಾಡಿಕೊಳ್ಳುವುದು, ತಾಳಿಕಟ್ಟುವ ಸಂದರ್ಭದಲ್ಲಿ ಪುರೋಹಿತರಿಗೆ ಸಹಾಯ ಮಾಡುವುದು, ಮಾವನ ಮನೆಗೆ ಕರೆದುಕೊಂಡು ಹೋಗುವುದು, ದೇವರ ಕಳಸವನ್ನು ನೋಡಲು ಕರೆದುಕೊಂಡು ಹೋಗುವುದು, ಐರಾಣಿಯನ್ನು ತರುವುದು, ಸೋಬಾನೆ ಪದಗಳನ್ನು ಸಂದರ್ಭಕ್ಕೆ ಸರಿಯಾಗಿ ಹಾಡುವುದು ಮುಂತಾದ ಕಾರ್ಯಗಳನ್ನು ಮಾಡುತ್ತಾರೆ. ಮದುವೆಯ ಜವಾಬ್ದಾರಿತನ ಇವರ ಮೇಲೆ ಅವಲಂಬಿತವಾಗಿರುತ್ತದೆ. ಮದುವೆಗೆ ಒಂದು ದಿನಕ್ಕೆ ಮುಂಚಿತವಾಗಿ ವರನನ್ನು ಮದುಮಗನನ್ನಾಗಿ ಮಾಡುವ ಶಾಸ್ತ್ರವಿದೆ. ತೆಂಗಿನಗರಿ, ಹಂದ್ರಕಾಯಿ, ಹಾಲುಕಂಬವನ್ನು ದೇವಸ್ಥಾನದ ಮುಂದೆ ಇಡುತ್ತಾರೆ. ದೇವಸ್ಥಾನದ ಮುಂದೆ ಹಂದರವನ್ನು ಹಾಕುವ ಸಾಂಪ್ರದಾಯಿಕ ಸಂಸ್ಕೃತಿ ಇದೆ. ಐದುಜನ ಗಂಡಸರನ್ನು ಕಂಬಳಿಯ ಮೇಲೆ ಕೂಡಿಸಿ ಮುತ್ತೈದೆ ಐಲುಗಿತ್ತಿಯರು ಅಡಿಕೆ, ಎಲೆ, ಉತ್ತುತ್ತಿ, ಅಕ್ಕಿ, ಕೊಬ್ಬರಿ ಬಟ್ಟಲು ಮುಂತಾದವುಗಳನ್ನು ಕೊಟ್ಟು ಉಡಿ ತುಂಬಲಾಗುತ್ತದೆ. ಅವರುಗಳ ಹಣೆಗೆ ವಿಭೂತಿಯನ್ನು ಹಚ್ಚಲಾಗುತ್ತದೆ. ಕಂಕಣವನ್ನು ಕಟ್ಟಿಕಳಸವನ್ನು ಬೆಳಗುತ್ತಾರೆ. ಹಾಲುಕಂಬವನ್ನು ತಂದು ದೇವಸ್ಥಾನದ ಮುಂದೆ ಕಟ್ಟಲಾಗುತ್ತದೆ. ತೆಂಗಿನ ಗರಿಗಳಿಂದ ದೇವಸ್ಥಾನದ ಎದುರು ಚಪ್ಪರ ಹಾಕಲಾಗುತ್ತದೆ.

ಐರಾಣಿ ಶಾಸ್ತ್ರದ ಪ್ರಕಾರ ಎರಡು ಗಡಿಗೆಗಳಂತೆ ನಾಲ್ಕು ಗಡಿಗೆಗಳನ್ನು ಜೋಳದ ಮೇಲೆ ಇಡುವುದರ ಮೂಲಕ ಗಡಿಗೆಯ ಒಳಗೆ ಐದು ದಿನಬಳಕೆಯ ಧಾನ್ಯಗಳನ್ನು ಒಂದು ರೂಪಾಯಿ ನಾಣ್ಯವನ್ನು ಹಾಕುತ್ತಾರೆ. ಗಡಿಗೆಯ ಮೇಲೆ ಮುಚ್ಚಳವನ್ನು ಹಾಕಿ ದೀಪವನ್ನು ಹಚ್ಚಲಾಗುತ್ತದೆ. ವರನನ್ನು ದೇವಸ್ಥಾನ ಮುಂಭಾಗದಲ್ಲಿನ ಒನಕೆಯ ಮೇಲೆ ಕೂರಿಸಿ ಅರಿಷಿಣವನ್ನು ಹಚ್ಚಲಾಗುತ್ತದೆ. ಬಿಸಿ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಅಕ್ಷತೆಯನ್ನು ಹಾಕಿ ಮದುಮಗನನ್ನು ಮಾಡುತ್ತಾರೆ. ಮದುಮಗನ ಕೈ ಬೆರಳಿಗೆ ಬೆಳ್ಳಿ ಅಕ್ಕಿ ಉಂಗುರವನ್ನು ಹಾಕಿ ಹೊಸಬಟ್ಟೆಯನ್ನು ಕೊಡುತ್ತಾರೆ. ಬೀಗರನ್ನು ಎದುರುಗೊಳ್ಳುವಿಕೆಯ ಶಾಸ್ತ್ರದ ಪ್ರಕಾರ, ವಧುವಿನ ಜೊತೆಗೆ ಬಂದಿರುವ ನೆಂಟರನ್ನು ವರನ ಮನೆಗೆ ಸಮೀಪದಲ್ಲಿರುವ ದೇವಸ್ಥಾನದಲ್ಲಿ ಉಳಿದುಕೊಳ್ಳಲು ವ್ಯವಸ್ಥೆಯನ್ನು ಮಾಡಲಾಗಿರುತ್ತದೆ. ಇವರನ್ನು ಕರೆಯುವುದಕ್ಕೆ ವರನ ಕಡೆಯವರು ವಾದ್ಯಮೇಳಗಳೊಂದಿಗೆ ಹೋಗುತ್ತಾರೆ. ಬಿದಿರು ಬುಟ್ಟಿಯಲ್ಲಿ ಚಕ್ಕುಲಿ, ಹಪ್ಪಳ, ಸಂಡಿಗೆ, ವಡೆ, ಮೆಣಸಿನಕಾಯಿ, ಈರುಳ್ಳಿ ಮುಂತಾದ ಕರಿದ

ವಸ್ತುಗಳನ್ನು ಹಾಕಲಾಗಿರುತ್ತದೆ. ಇದನ್ನು ಸೀರೆ ಉಟ್ಟಿರುವ ಗಂಡಸರು ಹಿಡಿದುಕೊಂಡಿರುತ್ತಾರೆ. ಇದನ್ನು ಛತ್ರಿಕೆ ಹಿಡಿಯುವುದು ಎನ್ನುತ್ತಾರೆ. ವಧುವಿನ ಕಡೆಯವರು ಇರುವ ದೇವಸ್ಥಾನದಲ್ಲಿ ಕಂಬಳಿ ಹಾಸುವುದರ ಮೂಲಕ ವಧುವಿನ ಕಡೆಯ ಹನ್ನೊಂದು ಜನ ಗಂಡಸರನ್ನು ಕೂರಿಸಿ ಹಣೆಗೆ ವಿಭೂತಿ, ಕುಂಕುಮವನ್ನು ಹಚ್ಚಿ ಮುತ್ತೈದೆ ಸ್ತ್ರೀಯರು ಕಳಸವನ್ನು ಬೆಳಗುತ್ತಾರೆ. ಅವರನ್ನು ವಾದ್ಯವೃಂದಗಳ ಮೇಳದೊಂದಿಗೆ ಬಿಡದಿ ಮನೆಗೆ(ವಾಸ್ತವ್ಯ ಮಾಡುವ ಮನೆ) ಕರೆದುಕೊಂಡು ಬರುತ್ತಾರೆ. ಸುರಗಿ ನೀರು ಶಾಸ್ತ್ರದ ಪ್ರಕಾರ ನಾಲ್ಕು ಚಂಬುಗಳಲ್ಲಿ ನೀರನ್ನು ಹಾಕಿ ಚಂಬುಗಳಿಗೆ ಕಂಕಣವನ್ನು ಕಟ್ಟುತ್ತಾರೆ. ಸುರಗಿಯ ಒಳಗೆ ವಧು-ವರರನ್ನು ಕೂರಿಸಿ ನೀರು ಹಾಕುವುದಕ್ಕಾಗಿ ನಾಲ್ಕು ಮೂಲೆಗಳಲ್ಲಿ ಚಂಬುಗಳನ್ನು ಇಡುವುದರ ಮೂಲಕ ಐದು ಸುತ್ತು ದಾರವನ್ನು ಚಂಬುಗಳಿಗೆ ಸುತ್ತುತ್ತಾರೆ. ಸುರಗಿ ಒಳಗೆ ಒನಕೆಯನ್ನು ಇಟ್ಟು ಸುರಗಿಗೆ ಕೈಮುಗಿಯುವುದರ ಮೂಲಕ ವಧು-ವರರನ್ನು ಒನಕೆ ಅಥವಾ ಮಣೆಯ ಮೇಲೆ ಕೂರಿಸಲಾಗುತ್ತದೆ. ಅರಿಷಿಣದ ನೀರನ್ನು ಹಾಕುತ್ತಾರೆ. ದೃಷ್ಟಿಯಾಗಬಾರದು ಎಂದು ವಧು-ವರರಿಗೆ ನಿಳೇವು ತೆಗೆಯುತ್ತಾರೆ. ವಧು-ವರರ ಮೇಲೆ ಕಂಚಿನ ತಟ್ಟೆಗೆ ವೀಳ್ಯದ ಎಲೆಯನ್ನು ಹಿಡಿದು ನೀರನ್ನು ಬಿಡಲಾಗುತ್ತದೆ. ಬಾಸಿಂಗ ಶಾಸ್ತ್ರದ ಪ್ರಕಾರ, ವರನ ಹಣೆಗೆ ಬಾಸಿಂಗವನ್ನು ಕಟ್ಟುತ್ತಾರೆ. ಬೇಡಜನಾಂಗದ ಮದುವೆಯಲ್ಲಿ ತಾಳಿ ಮಹೂರ್ತ ಶಾಸ್ತ್ರವು ಬಹಳ ಮುಖ್ಯವಾದುದಾಗಿದೆ. ಈ ಶಾಸ್ತ್ರದ ಪ್ರಕಾರ, ಪುರೋಹಿತರು ಹೇಳಿರುವ ಸಮಯಕ್ಕೆ ಸರಿಯಾಗಿ ತಾಳಿ ಮಹೂರ್ತ ಶಾಸ್ತ್ರ ನಡೆಯುತ್ತದೆ. ಅಕ್ಷತೆ, ಅಡಿಕೆ, ವೀಳ್ಯದ ಎಲೆ, ಎರಡು ಕೊಬ್ಬರಿ ಬಟ್ಟಲುಗಳ ಮೇಲೆ ಮಾಂಗಲ್ಯ(ತಾಳಿ)ವನ್ನು ಇಟ್ಟು ಅರಿಷಿಣ, ಕುಂಕುಮವನ್ನು ಹಚ್ಚಿ ಐದು ಮಂದಿ ಮುತ್ತೈದೆ ಸ್ತ್ರೀಯರು ತಾಳಿಯನ್ನು (ಮಾಂಗಲ್ಯ) ನಮಸ್ಕರಿಸಲು ಹೇಳುತ್ತಾರೆ. ಮಾಂಗಲ್ಯ(ತಾಳಿ)ವನ್ನು ಸರಿಯಾದ ಮಹೂರ್ತ ಸಮಯಕ್ಕೆ ವರನು ವಧುವಿಗೆ ಕಟ್ಟುತ್ತಾನೆ. ಈ ಶಾಸ್ತ್ರವನ್ನು 'ಧಾರೆ ಎರೆಯುವಶಾಸ್ತ್ರ'ವೆಂದೂ ಕರೆಯುತ್ತಾರೆ. ನಂತರ ಮೆರವಣಿಗೆ, ಕಳಸ ನೋಡುವಿಕೆಯ ಶಾಸ್ತ್ರ, ಗಂಡನ ಮನೆಗೆ ಪ್ರವೇಶ ಮಾಡುವಶಾಸ್ತ್ರ, ಗಂಗೆಪೂಜೆಯಶಾಸ್ತ್ರ, ನಡೆಯುತ್ತದೆ. ವಧುವಿನ ಮನೆಯಲ್ಲಿ ವಧು-ವರರ ಪ್ರಥಮರಾತ್ರಿಶಾಸ್ತ್ರ(ಪ್ರಸ್ತದ ಶಾಸ್ತ್ರ) ನಡೆಯುತ್ತದೆ.

**೨.೫. ಆರಾಧನೆ, ಆಚರಣೆ ಮತ್ತು ನಂಬಿಕೆಗಳು**

ಬೇಡ ಬುಡಕಟ್ಟು ಜನಾಂಗವು ತನ್ನದೇ ಆದ ದೈವದ ಆರಾಧನೆಗಳು, ದಿನನಿತ್ಯದಲ್ಲಿ ಆಚರಿಸುವ ಆಚರಣೆಗಳು ಮತ್ತು ನಂಬಿಕೆಗಳನ್ನು ಹೊಂದಿದೆ. ಭಾರತೀಯ ಬುಡಕಟ್ಟು ಸಮಾಜದಲ್ಲಿ ಇಂತಹ ಆರಾಧನೆ, ಆಚರಣೆ ಮತ್ತು ನಂಬಿಕೆಗಳು ಆ ಬುಡಕಟ್ಟು ಜನಾಂಗವು ಒಗ್ಗಟ್ಟಿನಿಂದ ಸಹಜೀವನವನ್ನು ನಡೆಸಲು ಸಹಕಾರಿಯಾದವುಗಳಾಗಿವೆ. ಪ್ರತಿಯೊಂದು ಬುಡಕಟ್ಟು ಜನಾಂಗದ ಅಂತಃಸತ್ವವೇ ದಿನನಿತ್ಯದ ಜೀವನದಲ್ಲಿನ ಆಚರಣೆಗಳು ಮತ್ತು ನಂಬಿಕೆಗಳು. ಬುಡಕಟ್ಟು ಸಮುದಾಯದಲ್ಲಿ ಇರುವ ದೈವದ ಪರಿಕಲ್ಪನೆಗಳು, ದೈವದ ಆರಾಧನೆಗಳು ಮತ್ತು ನಂಬಿಕೆಗಳು ಪ್ರತಿಯೊಂದು ಬುಡಕಟ್ಟು ಸಮುದಾಯವನ್ನೂ ಐಕ್ಯತೆಯಿಂದ ಜೀವನ ನಡೆಸುವಂತೆ ಪ್ರೇರಣೆ ನೀಡುತ್ತವೆ. ತನ್ನದೇ

ಆದ ರೀತಿ-ನೀತಿಗಳನ್ನೊಳಗೊಂಡ ಆಚರಣೆಗಳನ್ನು ಆ ಬುಡಕಟ್ಟು ಜನಾಂಗದ ಪೂರ್ವಜರು ಆಚರಿಸಿಕೊಂಡು ಬಂದಿರುತ್ತಾರೆ. ಅಂತಹ ಆಚರಣೆಗಳು ಪೀಳಿಗೆಯಿಂದ ಪೀಳಿಗೆಗೆ ವರ್ಗಾವಣೆಗೊಂಡು ಬಂದಿರುತ್ತವೆ. ಸಾಂಪ್ರದಾಯಿಕವಾಗಿ ಆಚರಿಸಿಕೊಂಡು ಬಂದಂತಹ ಶಾಸ್ತ್ರಗಳು ಸಾಂಪ್ರದಾಯಿಕ ಆಚರಣೆಗಳಾಗಿ ಆ ಬುಡಕಟ್ಟು ಸಮಾಜದ ಶಾಶ್ವತ ಆಚರಣೆಗಳಾಗಿ ತಮ್ಮ ದಿನನಿತ್ಯದ ಜೀವನದಲ್ಲಿ ಆಚರಣೆಗೊಳಪಟ್ಟವು. ಬೇಡ ಬುಡಕಟ್ಟು ಸಮುದಾಯವು ಜನನ, ನಾಮಕರಣ, ಋತುಮತಿ, ಸೀಮಂತ, ಮರಣದ ಸಂದರ್ಭಗಳಲ್ಲಿ ತನ್ನದೇ ಆದ ಆಚರಣೆಗಳನ್ನು ಮಾಡುತ್ತದೆ.

**ಜನನ ಮತ್ತು ನಾಮಕರಣಶಾಸ್ತ್ರ**

ಬೇಡ ಬುಡಕಟ್ಟು ಜನಾಂಗದಲ್ಲಿ ಗರ್ಭಿಣಿಯಾದ ಮಹಿಳೆಯನ್ನು ಸಾಮಾನ್ಯವಾಗಿ ತವರು ಮನೆಗೆ ಕರೆದುಕೊಂಡು ಹೋಗಿ 'ಸೀಮಂತಶಾಸ್ತ್ರ'ವನ್ನು ಮಾಡುತ್ತಾರೆ. ಚೊಚ್ಚಲ ಹೆರಿಗೆಯು ತವರು ಮನೆಯಲ್ಲೇ ಆಗಬೇಕೆಂಬ ಸಂಪ್ರದಾಯವಿದೆ. ಸಾಮಾನ್ಯವಾಗಿ ತವರುಮನೆಯ ಕಡೆಯವರೇ ಹೆರಿಗೆಗಳನ್ನು ಮಾಡಿಸುತ್ತಾರೆ. ಬೇಡ ಜನಾಂಗದ ಹಿರಿಯ ಹೆಂಗಸರು ಹೆರಿಗೆಯನ್ನು ಮಾಡಿಸುತ್ತಾರೆ. ಇವರಿಗೆ ಸೂಲಗಿತ್ತಿಯರು ಎನ್ನುತ್ತಾರೆ. ಸೀಮಂತಶಾಸ್ತ್ರವನ್ನು ತವರು ಮನೆಯಲ್ಲೇ ಆಚರಿಸುತ್ತಾರೆ. ಐದನೇ ಅಥವಾ ಆರನೇ ತಿಂಗಳ ಗರ್ಭಿಣಿ ಸ್ತ್ರೀಯನ್ನು ತವರುಮನೆಯವರು ಕರೆದುಕೊಂಡು ಹೋಗಿ ಅರಿಶಿಣ, ಕುಂಕುಮ, ಬಳೆಗಳು, ಹೊಸದಾದ ಬಟ್ಟೆಗಳು, ಸೀರೆ, ಕುಪ್ಪಸಗಳನ್ನು ಕೊಟ್ಟು, ಅಲಂಕರಿಸಿ ಹೂವು, ಹಣ್ಣುಗಳನ್ನು ಕೊಡುತ್ತಾರೆ. ಸಿಹಿ ಅಡುಗೆಗಳನ್ನು ಮಾಡಿ ಸಂಬಂಧಿಕರನ್ನು ಕರೆದು ಊಟ ಹಾಕುತ್ತಾರೆ. ಹೆಂಗಸರು ಸೋಬಾನೆ ಪದಗಳನ್ನು ಹಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಹೆರಿಗೆಗಳನ್ನು ನಗರಗಳ ಆಸ್ಪತ್ರೆಗಳಲ್ಲಿ ಮಾಡಿಸುತ್ತಾರೆ. ಕಾರಣವೇನೆಂದರೆ, ಹಿಂದಿನ ಕಾಲದಲ್ಲಿ ಇರುತ್ತಿದ್ದಂತಹ ಸೂಲಗಿತ್ತಿಯರ ಸಂಖ್ಯೆ ಕಡಿಮೆಯಾಗಿದೆ. ಅಲ್ಲದೆ, ಆರೋಗ್ಯ ಸಂಬಂಧಿತ ಕಾರಣಗಳಿಂದ ಹಾಗೂ ತಾಯಿ ಮತ್ತು ಮಗು ಆರೋಗ್ಯವಾಗಿರಲಿ ಎಂದು ಇಚ್ಛಿಸುತ್ತಾರೆ. ಸಾಮಾನ್ಯ ಹೆರಿಗೆಗಳು ಆಸ್ಪತ್ರೆಗಳಲ್ಲಿ ಆಗುವುದು ಕಡಿಮೆಯಾಗಿದೆ. ಬಹುತೇಕ ಶಸ್ತ್ರಚಿಕಿತ್ಸೆಯ ಮೂಲಕವಾಗಿ ಹೆರಿಗೆಗಳು ಆಗುತ್ತಿವೆ. ಹೆರಿಗೆಯಾದ ನಂತರ ಬಾಣಂತಿಗೆ ಬಾಣಂತಿಶಾಸ್ತ್ರವನ್ನು ಮಾಡುತ್ತಾರೆ. ನಂಜಿನ ಚಕ್ಕೆ, ಅಜಿವಾನ, ಬೇವಿನಸೊಪ್ಪು, ಅರಿಶಿಣ ಮುಂತಾದವುಗಳನ್ನು ಔಡಲ ಎಣ್ಣೆಯಲ್ಲಿ ಚೆನ್ನಾಗಿ ಬೇಯಿಸುತ್ತಾರೆ. ಈ ಎಣ್ಣೆಯನ್ನು ಬಾಣಂತಿಗೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ಕೊಬ್ಬರಿ, ಉತ್ತುತ್ತಿ, ತುಪ್ಪ ಮುಂತಾದ ತಿನಿಸುಗಳನ್ನು ಬಾಣಂತಿಗೆ ಪ್ರತಿದಿನವೂ ಕೊಡುತ್ತಾರೆ.

ಬಾಣಂತಿ ಹಡೆದ ಮೂರು ದಿನದಲ್ಲಿ ಕೂಸಿಗೆ ನೀರ್ಲ ಮಾಡುತ್ತಾರೆ. ನೀರ್ಲ ಎಂದರೆ ಹರೇಪಲ್ಲೆ ಅಥವಾ ರಾಜಗಿರಿ ಪಲ್ಲೆ ಹಾಗೂ ಮೂರು ಬೊಗಸೆ ಅಕ್ಕಿ ಹಾಕಿ ಎಡೆ ಮಾಡಲಾಗುತ್ತದೆ. ಕಾಯಿ, ಬಜ್ಜಿಯನ್ನು ದಾರದಲ್ಲಿ ಕಟ್ಟಿ, ಐದು ಮಕ್ಕಳಿಗೆ ಕಟ್ಟಲಾಗುತ್ತದೆ. ಎಲೆ ತುಂಬನ್ನು ಸುಟ್ಟು ಕೂಸಿಗೆ ಮತ್ತು ಬಾಣಂತಿಗೆ ಕಾಡಿಗೆ(ಕಪ್ಪು) ಹಚ್ಚುತ್ತಾರೆ. ಗುಂಡುಕಲ್ಲು ಇಟ್ಟು ಪೂಜೆಮಾಡುತ್ತಾರೆ. ಆ ಸಮಯದಲ್ಲಿ ಬಾಣಂತಿ ತನ್ನ ಕೂಸನ್ನು ತೊಡೆಯ ಮೇಲೆ ಹಾಕಿಕೊಂಡಿರುತ್ತಾಳೆ. ಮಾಡಿದ

ಎಡೆಯನ್ನು ಹೊರಸಿನಕಾಲಿಗೆ ನಾಲ್ಕು ಮೂಲೆಯಲ್ಲಿ ಮುಟುಗಿ ಮಾಡಿ ಇಡುತ್ತಾರೆ. ಪೂಜೆಯಾದ ನಂತರ ಸೂಲಗಿತ್ತಿ ಜೋಳವನ್ನು ಉಡಿಯಲ್ಲಿ ಕಟ್ಟಿಕೊಂಡು ಹೋಗುವಾಗ ಮನೆಯ ಒಳಗಿಂದ ಹೊರಗಿನ ತನಕ ಜೋಳವನ್ನು ಉದುರಿಸಿಕೊಳ್ಳುತ್ತಾ ಹೋಗುತ್ತಾಳೆ. ಆಕೆಯ ಹಿಂದೆ ಒಬ್ಬರು ನೀರು ಹಾಕುತ್ತಾ ಹೋಗುತ್ತಾರೆ. ಬ್ರಹ್ಮ ಆ ಕೂಸಿಗೆ ಹಣೆ ಬರಹವನ್ನು ಅಂದು ಬರೆಯುತ್ತಾನೆಂಬ ನಂಬಿಕೆ ಇದೆ. ಯಾರಾದರೂ ಎದ್ದು ಗಲಾಟೆ ಮಾಡಿದರೆ ಅಥವಾ ಮಾತನಾಡಿದರೆ ಬ್ರಹ್ಮ ಅರ್ಧ ಹಣೆಬರಹ ಬರೆದನೆಂಬ ನಂಬಿಕೆ ಇದೆ. ಇದಕ್ಕೂ ಮೊದಲು ಹಡೆದ ಬಾಣಂತಿ ಹತ್ತಿರ ದೀಪವನ್ನು ಹಚ್ಚಿಟ್ಟಿರುತ್ತಾರೆ. ಹಚ್ಚಿರುವ ದೀಪ ಆರಿದರೆ ಬ್ರಹ್ಮ ಹಣೆಬರಹವನ್ನು ಬರೆದನೆಂಬ ನಂಬಿಕೆ ಇವರಲ್ಲಿದೆ. ಕೂಸಿನ ಕಣ್ಣಿನ ರೆಪ್ಪೆಗೆ ಹಚ್ಚಿದ ಕಾಡಿಗೆ(ಕಪ್ಪು)ಯನ್ನು ತೆಗೆದುಕೊಂಡು ಬ್ರಹ್ಮ ಹಣೆಬರಹವನ್ನು ಬರೆಯುತ್ತಾನೆಂಬ ನಂಬಿಕೆಯೂ ಇದೆ. ಆ ಕೂಸಿನ ಜವಳವನ್ನು ಮನೆ ದೇವರ ಗುಡಿಯಲ್ಲಿ ಇಳಿಸುತ್ತಾರೆ. ಆ ಮಗುವಿಗೆ ಕಿವಿ ಚುಚ್ಚುವ ಕಾರ್ಯವನ್ನು ಮಗು ಹುಟ್ಟಿದ ಐದು ತಿಂಗಳಲ್ಲಿ ನಡೆಸುತ್ತಾರೆ.[೬] ಮಗುವಿನ ತಂದೆಯ ಮನೆಯಲ್ಲಿ ನಾಮಕರಣ ನಡೆಯುತ್ತದೆ. ನಾಮಕರಣ ದಿನದಂದು ತೊಟ್ಟಿಲನ್ನು ತವರುಮನೆಯಿಂದ ತರುತ್ತಾರೆ. ಮಗುವಿನ ತಂದೆಯು ತೊಟ್ಟಿಲಿಗೆ ಪೂಜೆ ಮಾಡಿ ಕೆಳಗೆ ಇಳಿಸುತ್ತಾನೆ. ತೊಟ್ಟಿಲನ್ನು ಹೊತ್ತುಕೊಂಡು ಬಂದ ಅಳಿಯನಿಗೆ ಹೊಸ ಬಟ್ಟೆಯನ್ನು ಕೊಡುತ್ತಾರೆ. ಮುತ್ತೈದೆ ಸ್ತ್ರೀಯರು ತೊಟ್ಟಿಲನ್ನು ಕಟ್ಟಿ ಮಗುವನ್ನು ಮಲಗಿಸಿ ಜೋಗುಳ ಪದವನ್ನು ಹಾಡುತ್ತಾರೆ. ತೊಟ್ಟಿಲ ಕೆಳಗೆ ತೆಂಗಿನ ಕಾಯಿಯನ್ನು ಒಡೆದು ಪೂಜೆ ಮಾಡುತ್ತಾರೆ. ಮಗುವಿನ ತಂದೆಯ ಕಡೆಯವರು ಮಗುವಿಗೆ ನಾಮಕರಣದ ಹೆಸರನ್ನು ಸೂಚಿಸುತ್ತಾರೆ. ಮಗುವಿನ ತಂದೆಯ ಅಕ್ಕ ಆ ಮಗುವಿನ ಹೆಸರನ್ನು ಇಡುತ್ತಾಳೆ. ಈ ಹೆಸರುಗಳು ಸಾಮಾನ್ಯವಾಗಿ ಬೇಡಜನಾಂಗದ ಸಾಂಸ್ಕೃತಿಕವೀರರು, ಮನೆಯ ಕುಲದೇವತೆ ಅಥವಾ ಕುಲದೇವರು, ಪುರಾಣ ಪುರುಷರು, ಮನೆಯ ಹಿರಿಯರ ಹೆಸರುಗಳು ಆಗಿರುತ್ತವೆ.

**ಋತುಮತಿ ಆಚರಣೆ**

ಬೇಡ ಜನಾಂಗದ ಹೆಣ್ಣುಮಕ್ಕಳು ಋತುಮತಿಯಾದರೆ ಮನೆಯ ಮುಂದೆ ಹೊಂಗೆ ಸೊಪ್ಪು ಮತ್ತು ಬೇವಿನಸೊಪ್ಪುಗಳಿಂದ ಮಾಡಿದ ಒಂದು ಚಿಕ್ಕದಾದ ಗುಡಿಸಲನ್ನು ಕಟ್ಟಿ ಅದರಲ್ಲಿ ಹತ್ತು ದಿನಗಳ ಕಾಲ ಕೂರಿಸುತ್ತಾರೆ. ಈ ಸಮಯವನ್ನು ಸೂತಕವೆಂದು ಕರೆಯಲಾಗುತ್ತದೆ. ಮಕ್ಕಳೊಂದಿಗೆ ಆಟವಾಡುವುದಕ್ಕೆ ಅವಕಾಶ ಮಾಡಿಕೊಟ್ಟು ಮಕ್ಕಳನ್ನು ಪಡೆಯುವ ಬಯಕೆಯನ್ನು ಉಂಟುಮಾಡಲಾಗುತ್ತದೆ. ಸಂಬಂಧಿಕರು ಅವಳಿಗೆ ಬೇಕಾದ ಆಹಾರ ಪದಾರ್ಥಗಳು, ಸಿಹಿ ಪದಾರ್ಥಗಳನ್ನು ತಂದು ಕೊಡುತ್ತಾರೆ. ಪ್ರತಿದಿನ ಮುತ್ತೈದೆಯರು ಆಕೆಗೆ ಸ್ನಾನವನ್ನು ಮಾಡಿಸುತ್ತಾರೆ. ಹುಡುಗಿಯು ಋತುಮತಿಯಾದ ಹದಿನಾರು ದಿನಗಳ ಕಾಲ ಪ್ರತ್ಯೇಕವಾಗಿ ಇರಲಿಕ್ಕೆ ವ್ಯವಸ್ಥೆ ಮಾಡಲಾಗುತ್ತದೆ. ಈ ದಿನಗಳಲ್ಲಿ ಸೂತಕ ಇರುತ್ತದೆ ಎಂದು ಹುಡುಗಿಯ ಬಂದುಬಾಂಧವರು ಯಾವುದೇ ಶುಭಕಾರ್ಯಗಳಲ್ಲಿ ಪಾಲ್ಗೊಳ್ಳುವುದಿಲ್ಲ. ದೇವಸ್ಥಾನಗಳಿಗೂ ಹೋಗುವುದಿಲ್ಲ. ಋತುಮತಿಯಾದ ಹೆಣ್ಣನ್ನು ದೊಡ್ಡವಳಾದಳು ಎಂದು ಸಂಬಂಧಿಕರು, ಕುಟುಂಬಸ್ಥರು ಕರೆಯುತ್ತಾರೆ. ಹೆಣ್ಣು ಹೆತ್ತ

ತಂದೆ ತಾಯಿಗಳಿಗೆ ತಮ್ಮ ಮಗಳು ಋತುಮತಿಯಾದರೆ ಮದುವೆಯಾಗಲು ಅರ್ಹಳಾದಳು ಎಂದು ತಿಳಿದು ಸಂತೋಷಪಡುತ್ತಾರೆ. ಈ ವಿಷಯವನ್ನು ತಮ್ಮ ಕುಲಸ್ಥರೆಲ್ಲರಿಗೂ ತಿಳಿಸುತ್ತಾರೆ. ಕುಲಸ್ಥರೆಲ್ಲರೂ ಬಂದು ಋತುಮತಿಯಾದ ಹುಡುಗಿಯನ್ನು ಮಾತನಾಡಿಸುತ್ತಾರೆ ಮತ್ತು ಸಂತೋಷವನ್ನು ಹಂಚಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಅರಿಷಿಣ, ಕುಂಕುಮ, ಅಡಿಕೆ ಮತ್ತು ವೀಳ್ಯದ ಎಲೆಯನ್ನು ಕುಲಸ್ಥರಿಗೆ ಕೊಡುತ್ತಾರೆ. ಮುತ್ತೈದೆಯರು ಕಳಸವನ್ನು ಬೆಳಗುತ್ತಾರೆ. ಸೋಬಾನ ಗಿತ್ತಿಯರು ಸೋಬಾನೆಪದಗಳನ್ನು ಹೇಳುತ್ತಾರೆ. ಹುಡುಗಿಯು ಋತುಮತಿಯಾದ ದಿನದಂದು ಮುತ್ತೈದೆ ಸ್ತ್ರೀಯರು ಎಣ್ಣೆಯನ್ನು ಹಚ್ಚಿ ಹರಿಷಿಣದ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಸೀರೆಯನ್ನು ಉಡಿಸುತ್ತಾರೆ. ದ್ರಾಕ್ಷಿ, ಕೊಬ್ಬರಿ, ಕಡಲೆ, ಉತ್ತುತ್ತಿ, ಹೂವು, ಹಣ್ಣು ಮುಂತಾದವುಗಳಿಂದ ಉಡಿ ತುಂಬುತ್ತಾರೆ. ಹದಿನಾರನೇ ದಿನದಂದು ಕುಲ ಬಾಂಧವರನ್ನು ಕರೆದು ಸಿಹಿ ಊಟವನ್ನು ಹಾಕಲಾಗುತ್ತದೆ. ಋತುಮತಿಯ ಆಚರಣೆಯು ಋತುಮತಿಯಾದ ಹೆಣ್ಣಿನ ಕಡೆಯವರಿಗೆ, ಸಂಬಂಧಿಕರಿಗೆ ಸಂಭ್ರಮದ ಆಚರಣೆಯಾಗಿದೆ. ಈ ಆಚರಣೆಯ ಮೂಲಕ ತಮ್ಮ ಹುಡುಗಿಯು ಮದುವೆಗೆ ಸಿದ್ಧಳಾಗಿದ್ದಾಳೆಂದು ಸೂಚಿಸುವ ಸಂದರ್ಭವಾಗಿರುತ್ತದೆ.

**ಸಾವು (ಮರಣ) ಆಚರಣೆ** : ಬೇಡ ಜನಾಂಗದಲ್ಲಿ ಯಾರಾದರೂ ಮರಣ(ಸಾವು) ಹೊಂದಿದರೆ ಅವರನ್ನು ಸೂಕ್ತ ವಿಧಿವಿಧಾನಗಳ ಮರಣ ಸಂಸ್ಕಾರದ ಮೂಲಕ ಸೂಕ್ತ ಗೌರವಗಳೊಂದಿಗೆ ಮಣ್ಣಿನಲ್ಲಿ ಹೂಳುತ್ತಾರೆ. ಮನೆಯ ಹಿರಿಯರು ಮರಣ ಹೊಂದಿದಾಗ ಸಂಬಂಧಿಕರಿಗೆಲ್ಲಾ ತಿಳಿಸಲಾಗುತ್ತದೆ. ಕುಲಬಾಂಧವರೆಲ್ಲಾ ಸಾವಿನ ಮನೆಗೆ ಆಗಮಿಸಿ ಸತ್ತ ವ್ಯಕ್ತಿಯ ಮುಖದರ್ಶನವನ್ನು ಮಾಡುತ್ತಾರೆ. ಬೇಡ ವ್ಯಕ್ತಿಯು ಮರಣ ಹೊಂದಿದಾಗ ಆ ದೇಹವನ್ನು ಹೆಣ ಎಂದು ಕರೆಯಲಾಗುತ್ತದೆ. ಮನೆಯ ಒಳಗಡೆ ಮರಣ ಹೊಂದಿದರೆ, ಮನೆಯ ಹೊರಗಡೆ ತಂದು ಇಡಲಾಗುತ್ತದೆ. ಹೆಣಕ್ಕೆ ಸ್ನಾನವನ್ನು ಮಾಡಿಸಿ ಹೊಸಬಟ್ಟೆಯನ್ನು ಹಾಕುತ್ತಾರೆ. ಮೂಗಿಗೆ ಹತ್ತಿಯನ್ನು ಇಟ್ಟು ಹಣೆಗೆ ವಿಭೂತಿಯನ್ನು ಹಚ್ಚುತ್ತಾರೆ. ಹೂವಿನ ಹಾರವನ್ನು ಹಾಕಿ ಸಂಬಂಧಿಕರೆಲ್ಲರೂ ಪೂಜಿಸುತ್ತಾರೆ. ಮನೆಯ ಮುಂದೆ ಬೆಂಕಿಯನ್ನು ಹಾಕಲಾಗಿರುತ್ತದೆ. ಇದರಿಂದ ಇಂತಹ ಮನೆಯಲ್ಲಿ ಸಾವು ಸಂಭವಿಸಿದೆ ಎಂದು ಕುಲಬಾಂಧವರೆಲ್ಲರಿಗೂ ತಿಳಿಯುತ್ತದೆ. ಯಾವುದೇ ಮನೆಯಲ್ಲಿ ಸಾವು ಸಂಭವಿಸಿದರೂ ಕುಲಸ್ಥರೆಲ್ಲರೂ ಕನಿಷ್ಟ ಮನೆಗೆ ಒಬ್ಬರಂತೂ ಸಾವು ಸಂಭವಿಸಿದ ಮನೆಗೆ ಬರುತ್ತಾರೆ. ಹೆಣವನ್ನು ಮಣ್ಣು ಮಾಡುವ (ಹೂಳುವ) ಕಾರ್ಯದಲ್ಲಿ ಭಾಗವಹಿಸಿ ಪ್ರತಿಯೊಬ್ಬರೂ ಸೂಕ್ತ ಕರ್ತವ್ಯವನ್ನು ನಿರ್ವಹಿಸುತ್ತಾರೆ.

ಬೇಡ ಸಮುದಾಯದ ವ್ಯಕ್ತಿಯು ಮರಣ ಹೊಂದಿದಾಗ ದೇಹವನ್ನು ತಲೆಯ ಭಾಗ ದಕ್ಷಿಣಕ್ಕೆ ಬರುವಂತೆ ಹಾಗೂ ಕಾಲುಗಳು ಉತ್ತರಕ್ಕೆ ಬರುವಂತೆ ಮೇಲ್ಮುಖವಾಗಿ ಮಲಗಿಸುತ್ತಾರೆ. ತಲೆಯ ಸಮೀಪದಲ್ಲಿ ದೀಪವನ್ನು ಹಚ್ಚಿಡುತ್ತಾರೆ. ಮನೆಯ ಮುಂದೆ ಸ್ವಲ್ಪ ಕಟ್ಟಿಗೆಯನ್ನು ಇಟ್ಟು ಬೆಂಕಿಯನ್ನು ಹಾಕುತ್ತಾರೆ. ಆ ಬೆಂಕಿಯಲ್ಲಿ ಮಡಕೆಯೊಳಗೆ ಸ್ವಲ್ಪ ಅಕ್ಕಿಯನ್ನು ಹಾಕಿ ಬೇಯಿಸುತ್ತಾರೆ.

ವ್ಯಕ್ತಿಯು ಸತ್ತ ಸುದ್ಧಿಯನ್ನು ಕೇಳಿ ತಿಳಿದ ನೆಂಟರು, ಬೀಗರು, ಸಂಬಂಧಿಕರೆಲ್ಲರೂ ಶವಸಂಸ್ಕಾರದ ಕಾರ್ಯಕ್ಕೆ ಬರುತ್ತಾರೆ. ಸತ್ತವ್ಯಕ್ತಿಯು ಕುಷ್ಠರೋಗಿ, ಗರ್ಭಿಣಿ ಹೆಂಗಸಾಗಿದ್ದರೆ ಸುಡುತ್ತಾರೆ. ಒಂದು ವೇಳೆ ವ್ಯಕ್ತಿಯು ಸಾಯುವ ಸ್ಥಿತಿಯಲ್ಲಿದ್ದರೆ ಸಂಬಂಧಿಕರು ಬಂದು ಅಂತಹ ವ್ಯಕ್ತಿಯ ಬಾಯಿಯಲ್ಲಿ ನೀರು ಅಥವಾ ಹಾಲು ಹಾಕುತ್ತಾರೆ. ಸತ್ತ ವ್ಯಕ್ತಿಯ ಶವವನ್ನು ಶವಸಂಸ್ಕಾರ ಮಾಡಲು. ಹೆಣವನ್ನು ಹೊತ್ತುಕೊಂಡು ಹೋಗಲು ಸಿದಿಗೆ(ಚಟ್ಟ)ಯನ್ನು ಕಟ್ಟುತ್ತಾರೆ. ಸಿದಿಗೆಯನ್ನು ತಯಾರಿಸಲು ಕಳ್ಳಿಗಿಡಗಳನ್ನು ಬಳಸುತ್ತಾರೆ. ಸಿದಿಗೆಯ ಮೇಲೆ ಮರಣ ಹೊಂದಿದ ವ್ಯಕ್ತಿಯ ಕಂಬಳಿ ಅಥವಾ ಬಟ್ಟೆಯನ್ನು ಹಾಕಿ ಶವವನ್ನು ಮಲಗಿಸುತ್ತಾರೆ. ಮನೆಯ ಮುಂದಿನ ಬೆಂಕಿಯಲ್ಲಿ ತಯಾರಿಸಿದ ಬೆಂದ ಅನ್ನವನ್ನು ಮಗನು, ನೀರಿನ ಮಡಕೆಯನ್ನು ಮೊಮ್ಮಗನು ಹಿಡಿದುಕೊಂಡು ಶವಯಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಶವವನ್ನು ಸ್ವಲ್ಪದೂರ ಹೊತ್ತುಕೊಂಡ ಹೋದ ನಂತರ ಸ್ಮಶಾನದ ಸಮೀಪದಲ್ಲಿ ಅಥವಾ ಶವವನ್ನು ಹೂಳುವ ಜಾಗದ ಸಮೀಪದಲ್ಲಿ ಇಳಿಸಿ ಹೆಣದ ಬಾಯಿಗೆ ಶವಯಾತ್ರೆಯಲ್ಲಿ ಪಾಲ್ಗೊಂಡವರು ನೀರನ್ನು ಹಾಕುತ್ತಾರೆ. ಮತ್ತು ಹಣದ ನಾಣ್ಯಗಳನ್ನು ಬಾಯಿಯಲ್ಲಿ ಹಾಕುತ್ತಾರೆ. ಈ ಕ್ರಿಯೆಯನ್ನು 'ನಡುಗಡ' ಎನ್ನುತ್ತಾರೆ. ಶವವನ್ನು ಹೆಣದ ಗುಂಡಿಯ ಹತ್ತಿರ ತಂದು ಗುಂಡಿಯಲ್ಲಿ ಮಲಗಿಸುತ್ತಾರೆ. ಮೂರು ಹಿಡಿ ಮಣ್ಣನ್ನು ಹಾಕುತ್ತಾರೆ. ಎಲ್ಲರೂ ಮಣ್ಣನ್ನು ಹಾಕಿದ ನಂತರ ಮಣ್ಣನ್ನು ಮುಚ್ಚುತ್ತಾರೆ. ಮರಣ ಹೊಂದಿದ ವ್ಯಕ್ತಿಯ ಹಿರಿಯ ಮಗನಾದವನು ಒಂದು ಮಡಕೆಯಲ್ಲಿ ತುಂಬಿದ ನೀರನ್ನು ಹೊತ್ತುಕೊಂಡು ಸಮಾಧಿಯ ಸುತ್ತಾ ಮೂರು ಸುತ್ತನ್ನು ತಿರುಗುತ್ತಾನೆ. ನಂತರ ಶಾಸ್ತ್ರಸಂಬಂಧವನ್ನು ತಿಳಿದ ಹಿರಿಯ ವ್ಯಕ್ತಿಯು ಕುಡುಗೋಲನ್ನು ಹಿಡಿದುಕೊಂಡು ಮಡಕೆಗೆ ತೂತು ಮಾಡುತ್ತಾನೆ. ಮಡಕೆಯ ನೀರು ಸಮಾಧಿಯ ಸುತ್ತಲೂ ಬೀಳುವಂತೆ ಸುತ್ತುತ್ತಾ ಮಡಕೆಯನ್ನು ಕೆಳಗೆ ಹಾಕಲಾಗುತ್ತದೆ. ನಂತರ ಶವಸಂಸ್ಕಾರದಲ್ಲಿ ಪಾಲ್ಗೊಂಡವರೆಲ್ಲರೂ ಸತ್ತ ವ್ಯಕ್ತಿಯ ಮನೆಯಲ್ಲಿ ಇಟ್ಟಿರುವ ದೀಪಕ್ಕೆ ನಮಸ್ಕರಿಸಿ ತಮ್ಮ ತಮ್ಮ ಮನೆಗಳಿಗೆ ತೆರಳುತ್ತಾರೆ. ಮರಣ ಹೊಂದಿದ ವ್ಯಕ್ತಿಯ ಮನೆಯಲ್ಲಿ ಶವವನ್ನು ಶವಸಂಸ್ಕಾರ ಮಾಡುವವರೆಗೂ ಅಡುಗೆಯನ್ನು ಮಾಡುವುದಿಲ್ಲ. ಹೆಣವನ್ನು ಮನೆಯ ಹೊರಗಡೆ ಇಡುತ್ತಾರೆ. ಶವದ ಮುಖವನ್ನು ತೊಳೆದು, ಸ್ನಾನವನ್ನು ಮಾಡಿಸಿ ಹೊಸದಾದ ಬಿಳಿಯ ಬಟ್ಟೆಯನ್ನು ಶವಕ್ಕೆ ಸುತ್ತುತ್ತಾರೆ. ಅರಿಷಿಣ, ಕುಂಕುಮ, ವಿಭೂತಿಯನ್ನು ಹಚ್ಚಿ ಊದಿನಕಡ್ಡಿ, ಗಂಧದ ಕಡ್ಡಿಯನ್ನು ಬೆಳಗುತ್ತಾರೆ. ಹೂವಿನ ಹಾರವನ್ನು ಹಾಕುತ್ತಾರೆ. ಶವಕ್ಕೆ ಸಂಬಂಧಿಕರೆಲ್ಲರೂ ಪೂಜೆಯನ್ನು ಸಲ್ಲಿಸುತ್ತಾರೆ. ಸ್ಮಶಾನಕ್ಕೆ ಹೋಗಿ ಶವಸಂಸ್ಕಾರ ಮಾಡಿ ಬರುವ ಎಲ್ಲರಿಗೂ ಉಪ್ಪುನೀರನ್ನು ಕೊಡುತ್ತಾರೆ. ಉಪ್ಪುನೀರಿನಿಂದ ಬಾಯಿಯನ್ನು ಮುಕ್ಕಳಿಸಿದ ಮೇಲೆ ಮತ್ತೊಮ್ಮೆ ನೀರಿನಿಂದ ಬಾಯಿಯನ್ನು ಮುಕ್ಕಳಿಸಿ ತೊಳೆದು ಕೊಳ್ಳುತ್ತಾರೆ. ಈ ಸಂಪ್ರದಾಯಕ್ಕೆ 'ವಿಷಯ ಬಾಯಿಯನ್ನು ತೊಳೆದುಕೊಳ್ಳುವುದು' ಎನ್ನುತ್ತಾರೆ. ಮೂರುದಿನಗಳ ನಂತರ ಸತ್ತ ವ್ಯಕ್ತಿಯ ಮನೆಯಲ್ಲಿ ಒಬ್ಬನು ತಲೆಮುಡಿಯನ್ನು ಕೊಡಬೇಕಾಗುತ್ತದೆ. ಅಂದರೆ ತಲೆಯನ್ನು ಕ್ಷೌರಿಕರಿಂದ ಬೋಳಿಸಿಕೊಳ್ಳುತ್ತಾನೆ. ಸಮಾಧಿಯ ಮೇಲೆ ನವಣೆ ಧಾನ್ಯವನ್ನು ಹಾಕುತ್ತಾರೆ. ನವಣೆ ಧಾನ್ಯವನ್ನು ಹಾಕುವುದರಿಂದ ಮರಣಹೊಂದಿದ ವ್ಯಕ್ತಿಯು ದೆವ್ವವಾಗುವುದಿಲ್ಲ ಎನ್ನುವ ನಂಬಿಕೆಯನ್ನು ಹೊಂದಿದ್ದಾರೆ.

ಮರಣವನ್ನು ಹೊಂದಿದ ವ್ಯಕ್ತಿಯ ಶವಸಂಸ್ಕಾರದ ಮೂರನೇ ದಿನದಲ್ಲಿ ಮೂರು ದಿನಗಳ ಪೂಜೆಯನ್ನು ಮಾಡುತ್ತಾರೆ. ಮೂರನೆ ದಿನದಂದು ಮನೆಯನ್ನೆಲ್ಲಾ ತೊಳೆದು ಸ್ವಚ್ಛ ಮಾಡುತ್ತಾರೆ. ಈ ಸಂದರ್ಭದಲ್ಲಿ ಸಂಸ್ಕಾರ ಪೂಜೆಯನ್ನು ಮಾಡುವ ವ್ಯಕ್ತಿಯು ತಲೆಮುಡಿಯನ್ನು ಕೊಡುತ್ತಾರೆ. ಸಮಾಧಿಯ ಮೇಲಿನ ಹಳೆಯ ಹೂಗಳನ್ನು ತೆಗೆಯುತ್ತಾರೆ. ಅರಿಶಿಣ, ಕುಂಕುಮವನ್ನು ಹಚ್ಚಿ, ಹೂವು, ಹಾರಗಳನ್ನು ಸಮಾಧಿಗೆ ಹಾಕುತ್ತಾರೆ. ತೆಂಗಿನ ಕಾಯಿಗಳನ್ನು ಒಡೆದು, ಧೂಪವನ್ನು ಹಾಕಿ, ದೀಪವನ್ನು ಹಚ್ಚುತ್ತಾರೆ. ಸಂಬಂಧಿಕರೆಲ್ಲರೂ ಸಮಾಧಿಗೆ ನಮಸ್ಕರಿಸುತ್ತಾರೆ. ಸಮಾಧಿಯ ಮೂರು ಮೂಲೆಗೆ ಸಿಹಿ ಅಡುಗೆ ಪದಾರ್ಥಗಳನ್ನು ಇಡುತ್ತಾರೆ. ಈ ಮೂರು ಸಿಹಿ ಅಡುಗೆ ಪದಾರ್ಥಗಳನ್ನು ಮರಣ ಹೊಂದಿದ ವ್ಯಕ್ತಿಯು ಕಾಗೆಯ ರೂಪದಲ್ಲಿ ಬಂದು ತಿನ್ನುತ್ತಾನೆ ಎನ್ನುವ ನಂಬಿಕೆ ಇದೆ. ಈ ಎಡೆಯನ್ನು ಕಾಗೆ ಮುಟ್ಟಿದ ನಂತರ ಸಂಬಂಧಿಕರೆಲ್ಲರೂ ಮನೆಗೆ ಹೋಗುತ್ತಾರೆ. ಸಂಬಂಧಿಕರು ಮತ್ತು ಕೇರಿಯ ಕುಲಸ್ಥರೆಲ್ಲರನ್ನೂ ಊಟ ಮಾಡುವುದಕ್ಕೆ ಕರೆಯುತ್ತಾರೆ. ಈ ಶಾಸ್ತ್ರವನ್ನು 'ಮೂರು ಕೂಳು ಶಾಸ್ತ್ರ' ವೆಂದು ಕರೆಯಲಾಗುತ್ತದೆ. ಒಂಭತ್ತನೆಯ ದಿನದಂದು ಸತ್ತವ್ಯಕ್ತಿಗೆ ಕುರಿಯನ್ನು ಬಲಿಕೊಡುತ್ತಾರೆ. ಮಾಂಸದ ಊಟವನ್ನು ಸಂಬಂಧಿಕರೆಲ್ಲರೂ ಸೇರಿ ಊಟ ಮಾಡುತ್ತಾರೆ.

ಗಂಡನು ಮರಣವನ್ನೊಂದಿದ ಒಂಭತ್ತನೇ ದಿನದಂದು ಹೆಂಡತಿಯ ಮುತ್ತೈದೆತನವನ್ನು ತೆಗೆಯಲಾಗುತ್ತದೆ. ವಿಧವೆಯರು ಸೇರಿ ವಿಧವೆಯಾದ ಹೆಣ್ಣಿನ, ಕೈ ಬಳೆಗಳನ್ನು ಒಡೆಯುತ್ತಾರೆ. ಕಿವಿಯ ಓಲೆ, ತಾಳಿ, ಮೂಗುತಿ, ಅರಿಶಿಣ, ಕುಂಕುಮ, ಹೂಗಳು ಇತ್ಯಾದಿಯನ್ನು ತೆಗೆಯಲಾಗುತ್ತದೆ. ವಿಧವೆಯ ತಲೆಯನ್ನು ಬೋಳಿಸುವುದಿಲ್ಲ. ಈ ಕಾರ್ಯವನ್ನು ಮುತ್ತೈದೆ ಸ್ತ್ರೀಯರು ನೋಡುವುದಿಲ್ಲ. ವಿಧವೆಗೆ ಹೊಸ ಬಟ್ಟೆಯನ್ನು ಉಡಿಸುತ್ತಾರೆ. ನಂತರದ ದಿನಗಳಲ್ಲಿ ವಿಧವೆಯಿಂದ ಯಾವುದೇ ರೀತಿಯ ಶುಭಕಾರ್ಯವನ್ನು ಮಾಡಿಸುವುದಿಲ್ಲ. ಹದಿನಾರನೆಯ ದಿನದಂದು ದೇವರ ಸಾಂಪ್ರದಾಯಿಕ ಕಾರ್ಯವನ್ನು ಮಾಡುತ್ತಾರೆ. ಹದಿನಾರನೆಯ ದಿನದ ವರೆಗೂ ಯಾವುದೇ ಶುಭಕಾರ್ಯವನ್ನು ಮಾಡುವುದಿಲ್ಲ. ಹದಿನಾರನೆಯ ದಿನದಂದು ದೇವಸ್ಥಾನಗಳಿಗೆ ಹೋಗುತ್ತಾರೆ. ದೇವಸ್ಥಾನದ ಬಾವಿಯ ಹತ್ತಿರ ದೇವರ ವಸ್ತುಗಳನ್ನು ಸ್ವಚ್ಛಗೊಳಿಸುತ್ತಾರೆ. ಮರಣ ಹೊಂದಿದ ವ್ಯಕ್ತಿಯ ಸಂಬಂಧಿಕನ ತಲೆಯ ಮೇಲೆ ತುಂಬಿದ ಕೊಡವನ್ನು ಹೊತ್ತುಕೊಂಡು ಬರಲಾಗುತ್ತದೆ. ಅವನ ಎರಡು ಕೈಗಳಿಗೆ ಹೂವಿನ ಹಾರವನ್ನು ಕಟ್ಟುತ್ತಾರೆ. ಆತನ ಕೊರಳಿಗೆ ಹೂವಿನ ಹಾರವನ್ನು ಹಾಕುತ್ತಾರೆ. ದಾಸಯ್ಯನು ಜಾಗಟೆಯನ್ನು ಬಾರಿಸಿಕೊಂಡು, ಶಂಖವನ್ನು ಊದುತ್ತಾನೆ. ದಾಸಯ್ಯನು ಮುಂದೆ ನಡೆದಂತೆ, ಅವನ ಹಿಂದೆ ಸಂಬಂಧಿಕರೆಲ್ಲರೂ ಬರುತ್ತಾರೆ. ತುಂಬಿದ ಕೊಡವನ್ನು ಹೊತ್ತುಕೊಂಡು ಬಂದ ವ್ಯಕ್ತಿಯು ದೇವರ ಮನೆಯಲ್ಲಿ ಊಟವನ್ನು ಮಾಡುತ್ತಾನೆ. ಸಿಹಿ ಅಡುಗೆ ಪದಾರ್ಥಗಳನ್ನು ಮಾಡಿ ಸಂಬಂಧಿಕರೆಲ್ಲರಿಗೂ ಊಟವನ್ನು ಹಾಕುತ್ತಾರೆ.

**ಹಬ್ಬದ ಆಚರಣೆಗಳು**

ಬೇಡ ಬುಡಕಟ್ಟು ಸಮುದಾಯದವರು ತಮ್ಮ ತಮ್ಮ ಕುಲದೇವರುಗಳ ಹಬ್ಬಗಳನ್ನು ಮಾಡುವುದರ ಜೊತೆಗೆ ಇತರೇ ಜನಾಂಗದವರು ಆಚರಿಸುವ ಯುಗಾದಿ, ದೀಪಾವಳಿ, ವಿನಾಯಕ ಚೌತಿ, ಶಿವರಾತ್ರಿ, ರಾಮನವಮಿ ಇತ್ಯಾದಿ ಹಬ್ಬಗಳನ್ನು ಆಚರಿಸುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಬೇಡ ಬುಡಕಟ್ಟು ಬುಡಕಟ್ಟು ಸಮುದಾಯದಲ್ಲಿ ಊರುಬೇಡರು ಮತ್ತು ಮ್ಯಾಸಬೇಡರು ಎನ್ನುವ ಪಂಗಡಗಳಿವೆ.ಈ ಎರಡು ಪಂಗಡಗಳು ಆಚರಿಸುವ ಹಬ್ಬಗಳನ್ನು ಸಮಗ್ರತೆಯ ದೃಷ್ಟಿಯಿಂದ ವಿಶ್ಲೇಷಣೆ ಮಾಡಲಾಗಿದೆ. ಸಾಮಾನ್ಯವಾಗಿ ಇವರು ಆಚರಿಸುವ ಎಲ್ಲಾ ಹಬ್ಬಗಳನ್ನು ಬಹಳ ಸಂಭ್ರಮದಿಂದ ಆಚರಣೆ ಮಾಡುತ್ತಾರೆ. ಹಬ್ಬಗಳಲ್ಲಿ ಸಿಹಿ ಅಡುಗೆ ಪದಾರ್ಥಗಳನ್ನು ಮತ್ತು ಮಾಂಸಾಹಾರ ಪದಾರ್ಥಗಳನ್ನು ಸಮಯ, ಸಂದರ್ಭಕ್ಕೆ ತಕ್ಕಂತೆ ಮಾಡಿ ಸೇವಿಸುತ್ತಾರೆ. ಹಬ್ಬ ಹರಿದಿನಗಳಲ್ಲಿ ಹೊಸಬಟ್ಟೆಗಳನ್ನು ಧರಿಸುತ್ತಾರೆ. ತಮ್ಮ ಕುಲದೇವರು ಮತ್ತು ಕುಲದೇವತೆಗಳ ಆರಾಧನೆಯಲ್ಲಿ ಹೆಚ್ಚು ಭಕ್ತಿ-ಭಾವದಿಂದ ಭಾಗವಹಿಸುತ್ತಾರೆ. ಇವರು ಆಚರಿಸುವ ಹಬ್ಬಗಳು ಕಾಲ-ಕಾಲಕ್ಕೆ ತಕ್ಕಂತೆ, ಸಮಯ-ಸಂದರ್ಭಕ್ಕೆ ತಕ್ಕಂತೆ ಇರುತ್ತವೆ. ಹಬ್ಬಗಳ ಆಚರಣೆಯಿಂದ ತಮ್ಮ ಕುಲದೇವರುಗಳನ್ನು ಮತ್ತು ಕುಲದೇವತೆಗಳನ್ನು ಸಂತೃಪ್ತಿ ಪಡಿಸಬಹುದು ಎಂದು ಭಾವಿಸುತ್ತಾರೆ. ತಮ್ಮ ಕುಲದೇವರು, ಕುಲದೇವತೆಗಳನ್ನು ಪೂಜಿಸಿದರೆ ತಮಗೆ ಒಳ್ಳೆಯದಾಗುತ್ತದೆ. ತಮ್ಮ ವಂಶಕ್ಕೆ, ಮಕ್ಕಳಿಗೆ ಒಳ್ಳೆಯದಾಗುತ್ತದೆ ಎಂದು ಭಾವಿಸುತ್ತಾರೆ. ಉಪವಾಸ ವ್ರತಗಳನ್ನು ಮಾಡುವುದರ ಮೂಲಕ ಪೂಜೆಯನ್ನು ಸಲ್ಲಿಸುತ್ತಾರೆ. ಮಡಿ-ಮೈಲಿಗೆ ವಿಚಾರಗಳಲ್ಲಿ ಕಟ್ಟುನಿಟ್ಟಿನ ಆಚರಣೆಗಳನ್ನು ಮಾಡುತ್ತಾರೆ. ದೇವರು ಮತ್ತು ದೈವದ ಬಗ್ಗೆ ಅಪಾರ ನಂಬಿಕೆಗಳನ್ನು ಹೊಂದಿದ್ದಾರೆ.

**ಯುಗಾದಿ ಹಬ್ಬ**

ಯುಗಾಗಿ ಹಬ್ಬವು ಹಿಂದೂಗಳಿಗೆ ಪವಿತ್ರ ಹಬ್ಬವಾಗಿದೆ. ಹಾಗೆಯೇ ಬೇಡ ಬುಡಕಟ್ಟು ಸಮುದಾಯದವರು ಯುಗಾದಿ ಹಬ್ಬವನ್ನು ಬಹಳ ಸಂಭ್ರಮದಿಂದ ಆಚರಣೆ ಮಾಡುತ್ತಾರೆ. ಯುಗಾದಿ ಹಬ್ಬಕ್ಕೆ ಮೊದಲೇ ಕುಟುಂಬದ ಸದಸ್ಯರಿಗೆ ಹೊಸಬಟ್ಟೆಗಳನ್ನು ಖರೀದಿಸುತ್ತಾರೆ. ಮನೆಯ ಹಿರಿಯರಿಗೆ ಮತ್ತು ಚಿಕ್ಕಮಕ್ಕಳಿಗೆ ತುಂಬಾ ಸಂತೋಷ ಮತ್ತು ಸಂಭ್ರಮವನ್ನು ಉಂಟುಮಾಡುವ ಹಬ್ಬವಾಗಿದೆ. ಯುಗಾದಿ ಹಬ್ಬಕ್ಕೆ ಮೊದಲೇ ಸಂಡಿಗೆ, ಹಪ್ಪಳ, ಉಪ್ಪಿನಕಾಯಿ ಇತ್ಯಾದಿ ಪದಾರ್ಥಗಳನ್ನು ತಯಾರಿಸಿಕೊಳ್ಳುತ್ತಾರೆ. ಯುಗಾದಿ ಹಬ್ಬದ ದಿನದಂದು ಕುಟುಂಬದ ಸದಸ್ಯರೆಲ್ಲರೂ ದೇಹಕ್ಕೆ ಎಣ್ಣೆಯನ್ನು ಹಚ್ಚಿಕೊಳ್ಳುತ್ತಾರೆ. ಬಿಸಿನೀರಿಗೆ ಬೇವಿನ ಎಲೆಗಳು ಮತ್ತು ಹೂವುಗಳನ್ನು ಹಾಕಿ ಕಾಯಿಸುತ್ತಾರೆ. ನಂತರ ವಿಶೇಷವಾದ ಅಭ್ಯಂಜನ ಸ್ನಾನವನ್ನು ಮಾಡುತ್ತಾರೆ. ಹೊಸಬಟ್ಟೆಯನ್ನು ಧರಿಸಿಕೊಂಡು ತಮ್ಮ ಕುಲದೇವರಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಬೇವು-ಬೆಲ್ಲವನ್ನು ಸೇವಿಸುತ್ತಾರೆ. ಜೀವನದಲ್ಲಿ ಕಷ್ಟ ಮತ್ತು ಸುಖಗಳನ್ನು ಸಮಾನವಾಗಿ ಸ್ವೀಕರಿಸಬೇಕೆಂಬ ತಿಳುವಳಿಕೆ ಬೇವು-ಬೆಲ್ಲದ ಸೇವನೆಯಲ್ಲಿದೆ. ಬೇವು-ಬೆಲ್ಲದ ಮಿಶ್ರಣವನ್ನು ತಯಾರಿಸಲು ಬೇವಿನ ಹೂವು, ಕಲ್ಲುಸಕ್ಕರೆ,

ಕಡಲೇಪುಡಿ, ಕೊಬ್ಬರಿ, ಗೋಡಂಬಿ, ದ್ರಾಕ್ಷಿ, ಉತ್ತುತ್ತಿ ಇತ್ಯಾದಿಗಳನ್ನು ಬಳಸುತ್ತಾರೆ. ಯುಗಾದಿ ಹಬ್ಬದ ದಿನದಂದು ವಿಶೇಷವಾಗಿ ಹೋಳಿಗೆಯನ್ನು ಹಾಗೂ ಕರಿಗಡಬು ಸಿಹಿ ಅಡುಗೆಗಳನ್ನು ಮಾಡುತ್ತಾರೆ. ತಮ್ಮ ಹಿರಿಯರ ಸಮಾಧಿಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ನೈವೇದ್ಯವನ್ನು ಅರ್ಪಿಸುತ್ತಾರೆ. ಸಿಹಿ ಅಡುಗೆ ಪದಾರ್ಥಗಳ ಸೇವನೆ ಮಾಡುತ್ತಾರೆ. ಮನೆಗಳಿಗೆ ಮಾವು ಮತ್ತು ಬೇವಿನ ಸೊಪ್ಪಿನ ತಳಿರು ತೋರಣಗಳನ್ನು ಕಟ್ಟುತ್ತಾರೆ. ಮನೆಗಳನ್ನು ಸುಣ್ಣ ಬಣ್ಣಗಳಿಂದ ಅಲಂಕರಿಸಿರುತ್ತಾರೆ. ಯುಗಾದಿ ಹಬ್ಬದ ನಂತರ ಎರಡನೆಯ ಅಥವಾ ಮೂರನೇ ದಿನ ಮಾಂಸಾಹಾರದ ಅಡುಗೆಗಳನ್ನು ಮಾಡಿ ಮಾಂಸಾಹಾರವನ್ನು ಸೇವಿಸುತ್ತಾರೆ. ಈ ಹಿಂದೆ ಬೇಡರು ಯುಗಾದಿಯ ಹಬ್ಬಕ್ಕಾಗಿ ಬೇಟೆಗೆ ಹೋಗುತ್ತಿದ್ದರು. ಬೇಟೆಗೆ ಹೋಗುವುದನ್ನೇ ಒಂದು ಸಂಭ್ರಮದ ಆಚರಣೆಯೆಂಬಂತೆ ಮಾಡುತ್ತಿದ್ದರು. ಬೇಟೆಯನ್ನು ತಂದು ಊರಲ್ಲಿ ಮೆರವಣಿಗೆ ಮಾಡಿ ಸಂತೋಷ, ಸಂಭ್ರಮದಿಂದ ಹಬ್ಬವನ್ನು ಆಚರಿಸುತ್ತಿದ್ದರು. ಆದರೆ ಬೇಟೆಯಾಡುವುದನ್ನು ಭಾಗಶಃ ನಿಲ್ಲಿಸಲಾಗಿದೆ. ಇದಕ್ಕೆ ಬದಲಾಗಿ ಕುರಿ, ಮೇಕೆ, ಕೋಳಿಗಳನ್ನು ಮಾಂಸಾಹಾರಕ್ಕೆ ಬಳಸಿಕೊಳ್ಳುತ್ತಿದ್ದಾರೆ. ಯುಗಾದಿ ಹಬ್ಬದ ಸಂದರ್ಭಗಳಲ್ಲಿ ಜೂಜು ಆಟವನ್ನು ಆಡುತ್ತಾರೆ. ಜೂಜು ಆಟಕ್ಕೆ ಕಾನೂನಿನ ನಿಬಂಧನೆಗಳಿರುವುದರಿಂದ ಜೂಜಾಟವೂ ಕೂಡ ಕಡಿಮೆಯಾಗುತ್ತಿದೆ.

**ದೀಪಾವಳಿ ಹಬ್ಬ**

ಬೇಡರು ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ದೀಪಾವಳಿ ಹಬ್ಬವನ್ನು ಭಾರತ, ಪ್ರಪಂಚದಾದ್ಯಂತ ಹಿಂದೂಗಳು ಆಚರಿಸುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿನ ಬೇಡರೂ ಕೂಡ ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ದೀಪಾವಳಿ ಹಬ್ಬವು ಬೆಳಕಿನ ಹಬ್ಬ, ದೀಪಗಳ ಹಬ್ಬವೆಂದು ಪ್ರಸಿದ್ಧಿ ಪಡೆದಿದೆ. ದೀಪಾವಳಿ ಹಬ್ಬವು, ನರಕ ಚತುರ್ದಶಿ, ಅಮವಾಸ್ಯೆ, ಬಲಿಪಾಡ್ಯಮಿ ಎಂದು ಮೂರು ದಿನಗಳ ಹಬ್ಬವನ್ನು ಆಚರಿಸುತ್ತಾರೆ. ದೀಪಾವಳಿ ಹಬ್ಬದಂದು ಸ್ನಾನವನ್ನು ಮಾಡಿ ಹೊಸಬಟ್ಟೆಗಳನ್ನು ಧರಿಸುತ್ತಾರೆ. ಸಿಹಿ ಅಡುಗೆ ಪದಾರ್ಥಗಳಾದ ಹೋಳಿಗೆ, ಕರಿಗಡಬು, ಶಾವಿಗೆ, ಪಾಯಸ ಇತ್ಯಾದಿ ಪದಾರ್ಥಗಳನ್ನು ತಯಾರಿಸುತ್ತಾರೆ. ತಮ್ಮ ಮನೆಗಳ ಮುಂದೆ ಸಂಜೆಯ ಸಮಯದಲ್ಲಿ ದೀಪಗಳನ್ನು ಹಚ್ಚುತ್ತಾರೆ. ತಮ್ಮ ಊರಿನಲ್ಲಿರುವ ದೇವಸ್ಥಾನಗಳಿಗೆ ಪೂಜೆ ಸಲ್ಲಿಸುತ್ತಾರೆ. ತಮ್ಮ ಕುಲದೇವತೆ ಮತ್ತು ಕುಲದೇವರುಗಳಿಗೂ ಪೂಜೆಯನ್ನು ಸಲ್ಲಿಸುತ್ತಾರೆ. ದೀಪಾವಳಿ ಹಬ್ಬದಂದು ಪಟಾಕಿಗಳನ್ನು ಹಚ್ಚಿ ಸಂಭ್ರಮ ಪಡುತ್ತಾರೆ. ಮಕ್ಕಳಿಗಂತೂ ದೀಪಾವಳಿ ಹಬ್ಬವು ಸಂಭ್ರಮ, ಸಂತೋಷದ ಹಬ್ಬವಾಗಿದೆ.

**ದಸರಾ ಹಬ್ಬ**

ಭಾರತದ ಹಿಂದೂ ಪರಂಪರೆಯಲ್ಲಿ ದಸರಾಹಬ್ಬಕ್ಕೆ ವಿಶೇಷವಾದ ಸ್ಥಾನಮಾವಿದೆ. ಬೇಡ ಬುಡಕಟ್ಟು ಸಮುದಾಯವು ದಸರಾ ಹಬ್ಬವನ್ನು ವಿಶೇಷವಾಗಿ ಆಚರಿಸಿಕೊಂಡು ಬಂದಿದೆ. ಚಿತ್ರದುರ್ಗದ ಪಾಳೆಯಗಾರರು ತಮ್ಮ ಆಳ್ವಿಕೆಯ ಕಾಲದಲ್ಲಿ ದಸರಾ ಹಬ್ಬವನ್ನು ತುಂಬಾ ಸಂತೋಷ, ಸಂಭ್ರಮದಿಂದ

ಆಚರಿಸುತ್ತಿದ್ದರೆಂದು ತಿಳಿದುಬರುತ್ತದೆ. ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿದ್ದ ಚಿತ್ರದುರ್ಗ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪಿಯಲ್ಲಿ ಆಚರಿಸುತ್ತಿದ್ದ ದಸರಾ ಹಬ್ಬದಂತೆಯೇ ಚಿತ್ರದುರ್ಗ ರಾಜರು ಕೋಟೆಗಳಲ್ಲೂ ಆಚರಿಸುತ್ತಿದ್ದರು. ಆ ಪರಂಪರೆ ಮುಂದುವರೆದುಕೊಂಡು ಬಂದಿದೆ. ಕರ್ನಾಟಕದಲ್ಲಿ ರಾಜ್ಯ ಸರ್ಕಾರದ ಮುಂದಾಳತ್ವದಲ್ಲಿ ಮೈಸೂರು ನಗರದಲ್ಲಿ ದಸರಾ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಪ್ರತೀವರ್ಷವೂ ಆಚರಿಸುವ ದಸರಾ ಹಬ್ಬವು ವಿಶ್ವವಿಖ್ಯಾತವಾಗಿದೆ. ಬೇಡ ಬುಡಕಟ್ಟು ಸಮುದಾಯವೂ ಕೂಡ ದಸರಾ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತದೆ. ಮೈಸೂರಿನ ಚಾಮುಂಡೇಶ್ವರಿದೇವಿಯನ್ನು ದಸರಾ ಹಬ್ಬದಲ್ಲಿ ವಿಶೇಷವಾಗಿ ಪೂಜಿಸುವಂತೆಯೇ ಬೇಡರು ದಸರಾ ಹಬ್ಬದಂದು ತಮ್ಮ ತಮ್ಮ ಕುಲದೇವತೆಯನ್ನು ಪೂಜಿಸುತ್ತಾರೆ. ಹುಲಿಗೆಮ್ಮ, ಕೆಂಗಮ್ಮ, ದುರುಗಮ್ಮ, ಚೌಡೇಶ್ವರಿ, ಚಾಮುಂಡೇಶ್ವರಿ ಇತ್ಯಾದಿ ದೇವತೆಗಳನ್ನು ಪೂಜಿಸುತ್ತಾರೆ. ಈ ಹಬ್ಬವನ್ನು ಬನ್ನಿಹಬ್ಬವೆಂದೂ ಕರೆಯುತ್ತಾರೆ. ಮನೆಗಳಲ್ಲಿರುವ ಆಯುಧಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಈ ಹಬ್ಬವನ್ನು ಆಯುಧ ಪೂಜೆಯ ಹಬ್ಬವೆಂದೂ ಕರೆಯುತ್ತಾರೆ. ಅಲ್ಲದೆ, ತಮ್ಮ ಮನೆಗಳಲ್ಲಿರುವ ವಾಹನಗಳನ್ನು ಸ್ವಚ್ಛಗೊಳಿಸಿ, ಅಲಂಕಾರವನ್ನು ಮಾಡಿ ಪೂಜೆಯನ್ನು ಮಾಡುತ್ತಾರೆ.





### ಶಿವರಾತ್ರಿ ಹಬ್ಬ

ಶಿವರಾತ್ರಿ ಹಬ್ಬವು ಕೂಡ ಬೇಡ ಬುಡಕಟ್ಟು ಸಮುದಾಯದವರಿಗೆ ವಿಶೇಷವಾದ ಹಬ್ಬವಾಗಿದೆ. ಶಿವರಾತ್ರಿ ಹಬ್ಬದಂದು ಈ ಸಮುದಾಯದವರಲ್ಲಿ ಉಪವಾಸವನ್ನು ಆಚರಿಸುತ್ತಾರೆ. ಶಿವರಾತ್ರಿಯ ದಿನದಂದು ರಾತ್ರಿ ಶಿವ ಪಾರ್ವತಿ ದೇವರ ಜಾಗರಣೆ, ಧ್ಯಾನ, ಪ್ರಾರ್ಥನೆಗಳನ್ನು ಮಾಡುತ್ತಾರೆ. ಶಿವರಾತ್ರಿ ಹಬ್ಬವು ಶಿವನನ್ನು ಪ್ರಾರ್ಥಿಸುವ ವಿಶೇಷ ಹಬ್ಬವೆಂದು ಆಚರಿಸುತ್ತಾರೆ. ರಾತ್ರಿಯ ಪ್ರಾರ್ಥನೆ ಮತ್ತು ಜಾಗರಣೆಯ ಸಂದರ್ಭದಲ್ಲಿ ಬೆಲ್ಲದ ಪಾನಕ, ಮಂಡಕ್ಕಿ, ಅವಲಕ್ಕಿಯ ಪ್ರಸಾದವನ್ನು ಭಕ್ತರಿಗೆ ಹಂಚಲಾಗುತ್ತದೆ. ಶಿವನ ಎಲ್ಲಾ ದೇವಾಲಯಗಳಲ್ಲೂ ಶಿವರಾತ್ರಿ ದಿನದಂದು ವಿಶೇಷವಾದ ಪೂಜೆಗಳು ನಡೆಯುತ್ತವೆ. ದೇವರಿಗೆ ನೈವೇದ್ಯ, ಪ್ರಸಾದವನ್ನು ಇಡುವುದು, ದೇವರನ್ನು ಅಲಂಕರಿಸಿ ಪೂಜೆಸಲ್ಲಿಸುವುದು ರಾತ್ರಿಪೂರ್ತಿ ನಡೆಯುತ್ತಿರುತ್ತವೆ. ಶಿವನನ್ನು ನೀಲಕಂಠೇಶ್ವರ, ಮಾರ್ಕಂಡೇಯ, ಮಲ್ಲಿಕಾರ್ಜುನ, ಮಹಾಲಿಂಗೇಶ್ವರ, ಪರಮೇಶ್ವರ ಇತ್ಯಾದಿ ದೇವರುಗಳ ರೂಪದಲ್ಲಿ ಪೂಜಿಸಲಾಗುತ್ತದೆ. ಶಿವರಾತ್ರಿಯ ನಂತರದ ದಿನದಂದು ಹೋಳಿಗೆ, ಕರಿಗಡಬು, ಪಾಯಸ, ಶಾವಿಗೆ ಇತ್ಯಾದಿ ಸಿಹಿ ಅಡುಗೆ ಪದಾರ್ಥಗಳನ್ನು ಮಾಡಿ ಊಟ ಮಾಡುತ್ತಾರೆ. ಕೆಲವರು ಸಿಹಿ ಅಡುಗೆ ಪದಾರ್ಥಗಳನ್ನು ಮಾಡಿ ಬಂಧು ಬಳಗದವರಿಗೆ, ಅಥವಾ ಸಾರ್ವಜನಿಕರಿಗೆ ದೇವರ ಪ್ರಸಾದದ ರೂಪದಲ್ಲಿ ಊಟವನ್ನು ಹಾಕಲಾಗುತ್ತದೆ. ಈ ರೀತಿ ಅನ್ನದಾನ ಮಾಡುವುದರಿಂದ ಪುಣ್ಯ ಪ್ರಾಪ್ತಿಯಾಗುತ್ತದೆ. ಎನ್ನುವ ನಂಬಿಕೆ ಈ ಸಮುದಾಯದಲ್ಲಿದೆ.

**ಗೌರಿ ಮತ್ತು ಗಣೇಶನ ಹಬ್ಬ**

ಭಾರತದಲ್ಲಿ ಗೌರಿ ಮತ್ತು ಗಣೇಶನ ಹಬ್ಬವನ್ನು ತುಂಬಾ ಸಂಭ್ರಮದಿಂದ ಆಚರಿಸಲಾಗುತ್ತದೆ. ಬೇಡ ಬುಡಕಟ್ಟು ಸಮುದಾಯವೂ ಕೂಡ ಗೌರಿ ಮತ್ತು ಗಣೇಶನ ಹಬ್ಬವನ್ನು ಆಚರಿಸುತ್ತದೆ. ಬೇಡ ಸಮುದಾಯದ ಯುವಕರು ಗೌರಿ ಮತ್ತು ಗಣೇಶನ ಹಬ್ಬವನ್ನು ಸಂತೋಷ, ಸಂಭ್ರಮ, ಉತ್ಸಾಹದಿಂದ ಆಚರಿಸುತ್ತಾರೆ. ಬೇಡ ನಾಯಕರ ಕೇರಿಗಳಲ್ಲಿ, ಅವರ ಬೀದಿಗಳಲ್ಲಿ ಗಣೇಶನನ್ನು ಕೂರಿಸಿ ಮೂರು ದಿನಗಳು, ಒಂಬತ್ತು ದಿನಗಳು, ಹನ್ನೊಂದು ದಿನಗಳು, ಈ ರೀತಿಯ ಬೆಸದಿನಗಳನ್ನು ಆಯ್ಕೆ ಮಾಡಿಕೊಂಡು ಪೂಜಿಸುತ್ತಾರೆ. ಗಣೇಶನ ಜೊತೆಗೆ ಗೌರಿಯನ್ನು ಕೂರಿಸಿ ಪೂಜಿಸುತ್ತಾರೆ. ಬೇಡ ಸಮುದಾಯದವರು ಕೆಲವೊಮ್ಮೆ ತಮ್ಮ ಪ್ರತಿಯೊಂದು ಕೇರಿಗಳಲ್ಲಿಯೂ, ಬೀದಿಗಳಲ್ಲಿಯೂ ಗಣೇಶನ ಮೂರ್ತಿಯನ್ನು ಕೂರಿಸಿ ಪೂಜಿಸಿ ವಿಸರ್ಜಿಸುತ್ತಾರೆ. ಗಣೇಶನನ್ನು ಕೂರಿಸುವುದಕ್ಕಿಂತ ಮುಂಚೆ ಮೆರವಣಿಗೆಯಲ್ಲಿ ಕರೆತರಲಾಗುತ್ತದೆ. ಗಣೇಶನನ್ನು ಕೂರಿಸಿದ ನಂತರ ತಮ್ಮ ಮನೆಗಳಲ್ಲಿ ಸಿಹಿ ಅಡುಗೆ ಪದಾರ್ಥಗಳನ್ನು ಮಾಡುತ್ತಾರೆ. ವಿಶೇಷವಾಗಿ ಗಣೇಶನಿಗೆ ಕಡುಬು ಮಾಡಿ ನೈವೇದ್ಯ ಮಾಡುತ್ತಾರೆ. ಹೋಳಿಗೆ, ಪಾಯಸ, ಶಾವಿಗೆ ಇತ್ಯಾದಿ ಸಿಹಿಪದಾರ್ಥದ ಅಡುಗೆಗಳನ್ನೂ ಕೂಡ ಮಾಡುತ್ತಾರೆ. ಗಣೇಶನನ್ನು ಕೂರಿಸಲು ಚಪ್ಪರದ ಅಥವಾ ಸಿಮೆಂಟ್, ತಗಡುಗಳ ಶೀಟುಗಳಿಂದ ಮಂಟಪವನ್ನು ಮಾಡಿ ಆ ಮಂಟಪದಲ್ಲಿ ಕೂರಿಸಿ ಪ್ರತಿದಿನವೂ ಪೂಜೆ ಮಾಡುತ್ತಾರೆ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಾಡುತ್ತಾರೆ. ವಿಶೇಷವಾಗಿ ಈ ಹಬ್ಬವಂತೂ ಯುವಕರಿಗೆ ಉತ್ಸಾಹವನ್ನು ನೀಡುತ್ತದೆ. ಗಣೇಶನನ್ನು ವಿಸರ್ಜಿಸುವ ಸಂದರ್ಭವೂ ಕೂಡ ಸಂತೋಷ, ಸಂಭ್ರಮದಿಂದ ಕೂಡಿರುತ್ತದೆ. ಹತ್ತಿರದ ಕೆರೆ ಅಥವಾ ನದಿಗಳಲ್ಲಿ ಗೌರಿ, ಗಣೇಶನ ಮೂರ್ತಿಗಳನ್ನು ವಿಸರ್ಜಿಸಲಾಗುತ್ತದೆ.

**ನಾಗರ ಪಂಚಮಿ**

ನಾಗರ ಪಂಚಮಿ ಹಬ್ಬವು ಬೇಡ ಬುಡಕಟ್ಟು ಸಮುದಾಯದವರಿಗೆ ಪವಿತ್ರವಾದ ಹಬ್ಬವಾಗಿದೆ. ಶ್ರಾವಣ ಮಾಸದಲ್ಲಿ ಆಚರಿಸುವ ಈ ಹಬ್ಬವನ್ನು ನಾಗರ ಕಲ್ಲುಗಳಿಗೆ, ಹಾವುಗಳ ಹುತ್ತಗಳಿಗೆ ಪೂಜೆಯನ್ನು ಸಲ್ಲಿಸುವುದರ ಮೂಲಕ ಆಚರಿಸುತ್ತಾರೆ. ಈ ಹಬ್ಬದಲ್ಲಿ ಗಂಡನ ಮನೆಯಲ್ಲಿನ ಹೆಣ್ಣುಮಕ್ಕಳನ್ನು ತವರು ಮನೆಗೆ ಕರೆಯಲಾಗುತ್ತದೆ. ತವರು ಮನೆಗೆ ಬಂದ ಹೆಣ್ಣುಮಕ್ಕಳು ಸಂಭ್ರಮ, ಸಂತೋಷದಿಂದ ಈ ಹಬ್ಬವನ್ನು ಆಚರಿಸುತ್ತಾರೆ. ನಾಗರ ಕಲ್ಲುಗಳಿಗೆ ಅಥವಾ ಹುತ್ತಗಳಿಗೆ ನೀರು, ಹಾಲು, ತುಪ್ಪ ತಂಬಿಟ್ಟು, ವೀಳ್ಯ, ಹಣ್ಣು ಹೂವುಗಳು, ಅಗರಬತ್ತಿ, ಕರ್ಪೂರ, ಹತ್ತಿ ಹಾರ ಇತ್ಯಾದಿ ಪದಾರ್ಥಗಳನ್ನು ನೈವೇದ್ಯಮಾಡಿ ಪೂಜಿಸಲಾಗುತ್ತದೆ. ನಾಗರಪಂಚಮಿಯಂದು ಮನೆಗಳಲ್ಲಿ ಸಂತೋಷ, ಸಡಗರದ ವಾತಾವರಣವಿರುತ್ತದೆ. ಸಿಹಿ ಅಡುಗೆ ಪದಾರ್ಥಗಳನ್ನು ಮಾಡಿ ಕುಟುಂಬದವರೆಲ್ಲಾ ಊಟ ಮಾಡುತ್ತಾರೆ.

**ಕಾರ ಹುಣ್ಣಿಮೆ ಹಬ್ಬ**

ಕಾರಹುಣ್ಣಿಮೆ ಹಬ್ಬ ಬೇಡ ಸಮುದಾಯದವರಿಗೆ ಸಂತೋಷ ಸಡಗರದ ಹಬ್ಬವಾಗಿದೆ. ಕಾರಹುಣ್ಣಿಮೆ ಹಬ್ಬವನ್ನು ಎತ್ತುಗಳ ಹಬ್ಬವೆಂದೂ ಕರೆಯುತ್ತಾರೆ. ಎತ್ತುಗಳಿಗೆ ಸ್ನಾನಮಾಡಿಸಿ,

ಸಿಂಗರಿಸಿ, ಪೂಜಿಸುತ್ತಾರೆ. ಬೇಡರ ಕೃಷಿಗೆ ಎತ್ತುಗಳೇ ಆಧಾರವಾದವುಗಳು. ಆದ್ದರಿಂದ ಹಸು ಮತ್ತು ಎತ್ತುಗಳನ್ನು ಪವಿತ್ರಭಾವನೆಯಿಂದ ಕಾಣಲಾಗುತ್ತದೆ. ಕೃಷಿ ಉಪಕರಣಗಳನ್ನೂ ಕೂಡ ಸ್ವಚ್ಛಗೊಳಿಸಿ ಪೂಜಿಸಲಾಗುತ್ತದೆ. ಸಂಜೆಯ ಸಮಯದಲ್ಲಿ ಊರಿನ ಒಂದು ನಿರ್ದಿಷ್ಟ ಸ್ಥಳದಲ್ಲಿ ಮೆರವಣಿಗೆಯನ್ನು ಮಾಡಲಾಗುತ್ತದೆ. ಒಂದು ನಿರ್ದಿಷ್ಟ ಜಾಗದಿಂದ ಎತ್ತುಗಳನ್ನು ಓಡಿಸಿಕೊಂಡು ಹೋಗುತ್ತಾರೆ. ಈ ರೀತಿ ಮಾಡುವುದನ್ನು 'ಕರಿ ಹರಿಸುವುದು' ಎನ್ನುತ್ತಾರೆ. ಮನೆಗಳಲ್ಲಿ ಸಿಹಿ ಅಡುಗೆ ಪದಾರ್ಥಗಳನ್ನು ಮಾಡಿ, ಎತ್ತುಗಳಿಗೆ ಮತ್ತು ಹಸುಗಳಿಗೆ ನೈವೇದ್ಯಮಾಡಿ ತಿನ್ನಿಸುತ್ತಾರೆ. ಮನೆಯಲ್ಲಿ ಕುಟುಂಬದ ಸದಸ್ಯರು ಸಿಹಿ ಅಡುಗೆ ಪದಾರ್ಥಗಳನ್ನು ಊಟ ಮಾಡುತ್ತಾರೆ. ಎತ್ತುಗಳು ಮತ್ತು ಹಸುಗಳಿಗೆ ಗಂಟೆಗಳಿಂದ ಮತ್ತು ವಿಶೇಷ ವಸ್ತ್ರಗಳಿಂದ ಅಲಂಕಾರ ಮಾಡಲಾಗಿರುತ್ತದೆ. ತನಗಾಗಿ ದುಡಿಯುವ ಹಸು, ಎತ್ತುಗಳ ಬಗ್ಗೆ ರೈತರಿಗೆ ಪವಿತ್ರ ಭಾವನೆ ಇರುತ್ತದೆ.

**ಗೌರಮ್ಮನ ಹಬ್ಬ**

ಗೌರಮ್ಮನ ಹಬ್ಬವನ್ನು ಗೌರಿ ಮಕ್ಕಳ ಹಬ್ಬವೆಂದೂ ಕರೆಯುತ್ತಾರೆ. ಗೌರಮ್ಮನ ಹಬ್ಬದ ದಿನದಂದು ಮನೆಯನ್ನು ಸ್ವಚ್ಛಗೊಳಿಸಿ ಜೇಡಿಮಣ್ಣಿನಿಂದ ಅಥವಾ ಸಿದ್ಧಗೊಳಿಸಿದ ಗೌರಮ್ಮನ ಮೂರ್ತಿಯನ್ನು ಮನೆಯ ಅಂಗಳದಲ್ಲಿ ಅಥವಾ ಮನೆಯ ಮಧ್ಯಭಾಗದಲ್ಲಿಟ್ಟು ಪೂಜಿಸಲಾಗುತ್ತದೆ. ಈ ಹಬ್ಬವು ಹೆಣ್ಣುಮಕ್ಕಳಿಗೆ ತುಂಬಾ ಸಂತೋಷ ಸಂಭ್ರಮವನ್ನುಂಟು ಮಾಡುವ ಹಬ್ಬವಾಗಿದೆ. 'ಪಂಚಪಾಂಡವರು' ಮತ್ತು 'ಕುಂತಿ' ಯ ಪೌರಾಣಿಕ ಹಿನ್ನೆಲೆಯನ್ನು ಈ ಹಬ್ಬವು ಹೊಂದಿದೆ. 'ಕುಂತಿ' ಯ ಪ್ರತಿರೂಪವೇ ಗೌರಮ್ಮನೆಂದು ಭಾವಿಸಿ ಪೂಜಿಸಲಾಗುತ್ತದೆ. ಗೌರಮ್ಮನಿಗೆ ಅರಿಶಿಣ, ಕುಂಕುಮವನ್ನು ಇಟ್ಟು, ಸೀರೆಯನ್ನು ಉಡಿಸಿ, ಆರತಿಯನ್ನು ಎತ್ತಿ ಪೂಜಿಸಲಾಗುತ್ತದೆ. ಸಿಹಿ ಅಡುಗೆ ಪದಾರ್ಥಗಳನ್ನು ಗೌರಮ್ಮನಿಗೆ ನೈವೇದ್ಯವನ್ನಾಗಿ ಅರ್ಪಿಸಲಾಗುತ್ತದೆ. ಹೂವು, ಹಣ್ಣುಗಳನ್ನು ಇಡಲಾಗಿರುತ್ತದೆ. ಗೌರಮ್ಮನ ಹಬ್ಬದ ದಿನದಂದು ವಿವಾಹವಾಗದ ಹೆಣ್ಣುಮಕ್ಕಳು ಮತ್ತು ವಿವಾಹವಾಗಿರುವ ಸ್ತ್ರೀಯರು ಹೊಸ ಹೊಸ ಬಟ್ಟೆಗಳನ್ನು ಧರಿಸಿ ಗೌರಮ್ಮನಿಗೆ ಪೂಜೆ ಸಲ್ಲಿಸುವುದರ ಮೂಲಕ ಸಂತೋಷ ಮತ್ತು ಸಂಭ್ರಮ ಪಡುತ್ತಾರೆ.

**ಹಿರಿಯರ ಪೂಜೆ**

ಬೇಡ ಬುಡಕಟ್ಟು ಸಮುದಾಯದಲ್ಲಿ ಹಿರಿಯರ ಪೂಜೆಗೆ ವಿಶೇಷ ಪ್ರಾಧಾನ್ಯತೆ ಇದೆ. ಕಾರಣವೇನೆಂದರೆ, ಬೇಡಸಮುದಾಯದವರು ಮೂಲತಃವಾಗಿ ಬೆಟ್ಟ ಗುಡ್ಡಗಳಲ್ಲಿ ವಾಸಮಾಡಿದ ಪ್ರಾಚೀನತೆಯ ಇತಿಹಾಸವನ್ನು ಹೊಂದಿದ್ದಾರೆ. ಇವರಿಗೆ ದೇವರು, ದೈವದಲ್ಲಿ ಅಪಾರ ನಂಬಿಕೆಯಿದೆ. ತಮ್ಮ ಎಲ್ಲಾ ಒಳಿತು ಕೆಡುಕುಗಳಿಗೆ ದೇವರೆ ಕಾರಣವೆಂದು ನಂಬಿದ್ದಾರೆ. ತಮ್ಮ ಕುಟುಂಬದ ಹಿರಿಯರು ಮರಣ ಹೊಂದಿದಾಗ ಅವರ ಆತ್ಮಕ್ಕೆ ಶಾಂತಿ ಸಿಗಲೆಂದು ವಿವಿಧ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಾರೆ. ಹಿರಿಯರ ಪೂಜೆಯನ್ನು ದಸರಾ ಹಬ್ಬದ ಸಂದರ್ಭದಲ್ಲಿ ಮಾಡುತ್ತಾರೆ. ಮನೆಯನ್ನು ಸುಣ್ಣ ಬಣ್ಣಗಳಿಂದ ಸ್ವಚ್ಛಗೊಳಿಸುತ್ತಾರೆ. ಹಿರಿಯರ ಸಮಾಧಿಗಳಿಗೆ ಪೂಜೆಯನ್ನು

ಸಲ್ಲಿಸಲು ಹೊಸ ಬಟ್ಟೆಗಳನ್ನು ತರುತ್ತಾರೆ. ಹಿರಿಯರ ಸಮಾಧಿಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ನೈವೇದ್ಯವನ್ನು ಇಡುತ್ತಾರೆ. ಆಯುಧಗಳಾದ ಮಚ್ಚು, ಕೊಡಲಿ, ಭರ್ಚಿ, ಕತ್ತಿ, ಕುಡುಗೋಲು ಇತ್ಯಾದಿ ಆಯುಧಗಳನ್ನು ಇಡುತ್ತಾರೆ. ಆಯುಧಗಳ ಪಕ್ಕದಲ್ಲಿ ಬಾಳೆ, ಕಬ್ಬುಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಹೋಳಿಗೆ ನೈವೇದ್ಯ ಅಥವಾ ಸಿಹಿ ಅಡುಗೆ ಪದಾರ್ಥಗಳ ಎಡೆಯನ್ನು ಹಾಕಲಾಗುತ್ತದೆ. ಹಿರಿಯರ ಹಬ್ಬದ ದಿನದಂದು ಹಿರಿಯರು ಬಂದು ನೈವೇದ್ಯವನ್ನು ಸ್ವೀಕರಿಸುತ್ತಾರೆ ಎನ್ನುವ ನಂಬಿಕೆಯು ಈ ಸಮುದಾಯದಲ್ಲಿದೆ. ಮನೆಯ ಮಕ್ಕಳು ಕುಟುಂಬದ ಸದಸ್ಯರೆಲ್ಲರೂ ಹಿರಿಯರ ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಹಿರಿಯರ ಭಾವಚಿತ್ರಗಳಿಗೂ ಕೂಡ ಪೂಜೆಯನ್ನು ಸಲ್ಲಿಸಲಾಗುತ್ತದೆ.

ಮ್ಯಾಸಬೇಡರ ದೇವತೆಗಳ ಸಂಖ್ಯೆ ಪ್ರಮುಖವಾಗಿ ಹನ್ನೆರಡು. ಈ ಹನ್ನೆರಡೂ ದೇವತೆಗಳನ್ನು ಇವರು ಪೆಟ್ಟಿಗೆ ದೇವತೆಗಳೆಂದು ಕರೆಯುತ್ತಾರೆ. ಈ ಪೆಟ್ಟಿಗೆಗಳು ಒಂದು ಅಡಿ ಉದ್ದ, ಅರ್ಧ ಅಡಿ ಅಗಲವಾಗಿದ್ದು ಅವುಗಳಲ್ಲಿ ಎರಡೆರಡು ಸಾಲಿಗ್ರಾಮಗಳಿರುತ್ತವೆ. ಮ್ಯಾಸಬೇಡರು ಈಗೀಗ ಹಟ್ಟಿಗಳಲ್ಲಿ ನೆಲೆನಿಂತು ವಾಸಮಾಡುವರಾಗಿದ್ದಾರೆ. ಆದರೆ ಅವರು ಪಶುಪಾಲಕರಾಗಿದ್ದ ಕಾಲಕ್ಕೆ ಅಡವಿಗಳಲ್ಲಿ ಪಶುಮಂದೆಗಾಗಿ ಹುಲ್ಲು ನೀರು ಹುಡುಕಿಕೊಂಡು ಒಂದು ಕಡೆಯಿಂದ ಇನ್ನೊಂದು ಕಡೆಗೆ ನಿರಂತರವಾಗಿ ಸುತ್ತುತ್ತಲೇ ಇದ್ದರು. ಹಾಗೆ ಅಲೆದಾಡುವಾಗ ದೇವರ ಪೆಟ್ಟಿಗೆಯನ್ನಲ್ಲದೆ, ತಾವು ವಾಸ ಮಾಡುತ್ತಿದ್ದಂತಹ ಸಣ್ಣ ಪ್ರಮಾಣದ ಗುಡಿಸಲನ್ನೂ ಹೊತ್ತುಕೊಂಡು ಹೋಗುತ್ತಿದ್ದುದಾಗಿ ಅವರ ಬುಡಕಟ್ಟು ಸಮುದಾಯದ ಹಿರಿಯ ವ್ಯಕ್ತಿಗಳು ತಿಳಿಸುತ್ತಾರೆ. ಇದರಿಂದಾಗಿಯೇ ಬೇಡರು ಸಂಚಾರಕ್ಕೆ ಅನುಕೂಲವಾಗಲೆಂದು ಪೆಟ್ಟಿಗೆ ದೇವರುಗಳನ್ನು ಮಾಡಿಕೊಂಡರು.

**ಮ್ಯಾಸಬೇಡರ ಹನ್ನೆರಡು ದೇವತೆಗಳು ಹೀಗಿವೆ**

೧. ಮಾಕನಡುಕು ಓಬಳದೇವರು, ಮಾಕನಡುಕು, ಕೂಡ್ಲಿಗಿ ತಾಲ್ಲೂಕು ಬಳ್ಳಾರಿ ಜಿಲ್ಲೆ
೨. ಗೆದ್ದಗಟ್ಟೆ ಓಬಳದೇವರು, ಗೆದ್ದಲಗಟ್ಟೆ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ
೩. ನಲ್ಲಜರುಗು ಓಬಳದೇವರು, ರುದ್ರಮ್ಮನಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೪. ಗಾದ್ರಿ ಪಾಲನಾಯಕ ದೇವರು, ಬೊಮ್ಮಗೊಂಡನ ಕೆರೆ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೫. ಸೂರಲಿಂಗೇಶ್ವರ ದೇವರು, ಕಾಮಗೇತನಹಳ್ಳಿ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ
೬. ರಾಜಲದೇವರು, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೭. ಬೋರೇದೇವರು, ಬೋರೆದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೮. ಬೋಸೇ ದೇವರು, ಬೋಸೆದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೯. ಚಿಂತಲಗುಟ್ಟ ಬೋರುವ, ಚಿಂತಲಗಟ್ಟ, ಚಿತ್ರದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೧೦. ಬಂಜಗೆರೆ ಓಬಳದೇವರು, ತಳಕು, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

೧೧. ಕುರಿಹಟ್ಟಿ ಬೊಮ್ಮದೇವರು, ಕುರಿಹಟ್ಟಿ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ

೧೨. ದಡ್ಡಿ ಸೂರನಾಯಕ, ಹಿರೇಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿ ಮೂರು ದೇವತೆಗಳ ನೆಲೆ ಇದ್ದರೆ. ಒಂಭತ್ತು ದೇವತೆಗಳ ನೆಲೆ ಚಿತ್ರದುರ್ಗ ಜಿಲ್ಲೆಯೊಳಗೆ ಬರುತ್ತವೆ. ಕೂಡ್ಲಿಗಿ ತಾಲ್ಲೂಕಿನ ಮ್ಯಾಸನಾಯಕ ದೇವತೆಗಳ ಆ ನೆಲೆಗಳೂ ಕೂಡ ತುಂಬಾ ದೂರವೇನೂ ಇರುವುದಿಲ್ಲ. ಮಾಕನಡಕು, ಗೆದ್ದಲಗಟ್ಟಿ, ಕುರಿಹಟ್ಟಿ ಇವೆಲ್ಲಾ ಚಳ್ಳಕೆರೆ ತಾಲ್ಲೂಕಿನ ಎಲ್ಲೆಯಲ್ಲೇ ಬರುತ್ತೇವೆ. ಹೀಗಾಗಿ ಮ್ಯಾಸಬೇಡರ ದೇವತೆಗಳೆಲ್ಲ ಜಗಳೂರು, ಚಳ್ಳಕೆರೆ, ಮೊಳಕಾಲ್ಮೂರು ಪ್ರದೇಶಗಳಲ್ಲಿಯೇ ನೆಲೆಸಿದಂತಾಯಿತು. ಈ ದೇವತೆಗಳಲ್ಲಿ ಕೆಲವು ಮ್ಯಾಸಮಂಡಲಿಯೊಳಗೇ ಹುಟ್ಟಬಂದ ಪ್ರಾಚೀನ ವೀರರಾದರೆ ಇನ್ನೂ ಕೆಲವು ಶಿಷ್ಟದೇವತೆಗಳ ಗ್ರಾಮೀಣ ರೂಪ. ವೈಷ್ಣವ ದೇವತೆಗಳಿಗಿಂತ ಶೈವ ದೇವತೆಗಳೇ ಹೆಚ್ಚಿವೆ. ಈ ಮೊದಲೇ ಗಮನಿಸಿದಂತೆ ಕರ್ನಾಟಕದ ಅನೇಕ ಬುಡಕಟ್ಟು ಜನಾಂಗದ ಮೇಲೆ ಮೊದಲು ಪ್ರಭಾವ ಬೀರಿರುವುದು ಶೈವಧರ್ಮ ವೈಷ್ಣವ ಧರ್ಮವೇನಿದ್ದರೂ ತದನಂತರ ಕಾಲಿಟ್ಟಿದೆ.[೬] ಮ್ಯಾಸನಾಯಕರ ಸಾಂಸ್ಕೃತಿಕ ವೀರರು ಗಾದ್ರಿಪಾಲನಾಯಕ ಮತ್ತು ದಡ್ಡಿಸೂರನಾಯಕ. ಜಗಳೂರು ತಾಲ್ಲೂಕು ಕಾಮಗೇತನಹಳ್ಳಿಯ ಸೂರನಾಯಕನಿಗೆ ಸೂರಲಿಂಗೇಶ್ವರ ಎನ್ನುತ್ತಾರೆ. ಕಾರಣವೇನೆಂದರೆ ಕಾಮಗೇತನಹಳ್ಳಿ ಮ್ಯಾಸಬೇಡರ ಮೇಲೆ ಕೊಟ್ಟೂರು ಉಜ್ಜಯಿನಿ ಮಠದ ಪ್ರಭಾವ ಆಗಿರುವುದಾಗಿದೆ. ಊರಿನ ಜನರ ಒಪ್ಪಿಗೆಯಲ್ಲಿ ಸೂರನಾಯಕ ದೇವರಿಗೆ ಲಿಂಗದೀಕ್ಷೆಯನ್ನು ಮಾಡಿ ಸೂರಲಿಂಗೇಶ್ವರ ದೇವರೆಂದು ಕರೆಯುತ್ತಾರೆ. ಹೀಗಾಗಿ ಕಾಮಗೇತನಹಟ್ಟಿ ಬೇಡನಾಯಕರಿಗೆ ಶಿವರಾತ್ರಿಹಬ್ಬ ಮುಖ್ಯವಾಗಿದೆ. ಸೂರನಾಯಕನು ಮ್ಯಾಸಬೇಡರ ವೀರನಾದರೂ ಪ್ರಾಣಿಬಲಿಯನ್ನು ಕೊಡುವುದಿಲ್ಲ ಮೊಳಕಾಲ್ಮೂರು ತಾಲ್ಲೂಕಿನ ಕಂಪಳದೇವರ ಹಟ್ಟಿಯಲ್ಲಿ ಕಂಪಳರಂಗ ದೇವರ ಜಾತ್ರೆ ನಡೆಯುತ್ತದೆ. ಹೊಸಕೆರೆಯ ಮಿಂಚೇರಿ ಅರಣ್ಯದ ಭಾಗದಲ್ಲಿ ಗಾದ್ರಿಪಾಲನಾಯಕನ ಜಾತ್ರೆ ನಡೆಯುತ್ತದೆ. ಚಳ್ಳಕೆರೆಯ ಹತ್ತಿರ ನನ್ನಿವಾಳದಲ್ಲೂ ಜಾತ್ರೆಯು ನಡೆಯುತ್ತದೆ.

### ೨.೬. ಒಳಾಡಳಿತ ವ್ಯವಸ್ಥೆ

ಬೇಡ ಬುಡಕಟ್ಟು ಸಮುದಾಯದವರು ಇತರೇ ಬುಡಕಟ್ಟು ಸಮುದಾಯಗಳಂತೆ ತಮ್ಮದೇ ಆದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿದ್ದಾರೆ. ಈ ಬೇಡ ಸಮುದಾಯವು ತಮ್ಮದೇ ಆದ ನೀತಿ ನಿಯಮಗಳನ್ನು, ಕಟ್ಟು ಕಟ್ಟಳೆಗಳನ್ನು ಹೊಂದಿದೆ. ಸಮುದಾಯದಲ್ಲಿ ಉಂಟಾಗುವ ಯಾವುದೇ ರೀತಿಯ ವ್ಯಾಜ್ಯ, ಜಗಳ, ವೈಷಮ್ಯದ ವಿಷಯಗಳಲ್ಲಿ ಉಂಟಾಗುವ ನ್ಯಾಯದ ತೀರ್ಮಾನಗಳನ್ನು ಕಟ್ಟೆಮನೆ ವ್ಯವಸ್ಥೆಯ ಮೂಲಕ ನ್ಯಾಯ ಪಂಚಾಯಿತಿಯನ್ನು ಮಾಡಿ ಬಗೆಹರಿಸುತ್ತಾರೆ. ಸಮುದಾಯದ ಹಿರಿಯರಿಗೆ ವಿಶೇಷವಾದ ಗೌರವವಿರುತ್ತದೆ. ಇತ್ತೀಚಿನ ದಿನಗಳಲ್ಲಿ ಈ ಸಮುದಾಯದವರು ಕೋರ್ಟು, ಕಛೇರಿಗಳಲ್ಲಿ ವ್ಯಾಜ್ಯಗಳನ್ನು ಹೂಡಿ ನ್ಯಾಯಕ್ಕಾಗಿ ಅಲೆದಾಡುವುದು ಕಂಡುಬರುತ್ತಿದೆ. ಆದಾಗ್ಯೂ ಬೇಡ ಸಮುದಾಯದಲ್ಲಿ ಕಟ್ಟೆಮನೆ ನ್ಯಾಯ ತೀರ್ಮಾನಗಳಿಗೆ ವಿಶೇಷವಾದ ಮಹತ್ವವಿದೆ.

ಕಟ್ಟೆಮನೆ ನ್ಯಾಯ ತೀರ್ಮಾನಗಳು ತಮ್ಮ ಸಮುದಾಯದ ವ್ಯಾಪ್ತಿಯಲ್ಲೇ ಸಿಗುವುದರಿಂದ ಅನಾವಶ್ಯಕವಾಗಿ ಕೋರ್ಟು, ಕಛೇರಿಗಳಿಗೆ ಅಲೆಯುವುದು ತಪ್ಪುತ್ತದೆ. ವಿವಾಹ, ಮದುವೆ, ಕುಟುಂಬ, ಸಂಸಾರ, ಆಸ್ತಿಯ ವಿಷಯಗಳು, ಅಣ್ಣ ತಮ್ಮಂದಿರ ನಡುವಿನ ಭಿನ್ನಾಬಿಪ್ರಾಯಗಳು, ಸಮುದಾಯದಲ್ಲಿನ ವ್ಯಕ್ತಿಗಳ ನಡುವಿನ ವರ್ತನೆಗಳು, ಹಬ್ಬ ಹರಿದಿನಗಳಿಗೆ ಸಂಬಂಧಿಸಿದ ವಿಷಯಗಳನ್ನು ತೀರ್ಮಾನಿಸುವ ಅಧಿಕಾರವನ್ನು ಸಮುದಾಯದ ಹಿರಿಯರನ್ನು ಒಳಗೊಂಡ ಕಟ್ಟೆಮನೆ ಪಂಚಾಯಿತಿಗಳು ಹೊಂದಿರುತ್ತವೆ. ತಮ್ಮ ಸಮುದಾಯದಲ್ಲಿ ಉಂಟಾಗುವ ಯಾವುದೇ ರೀತಿಯ ವ್ಯಾಜ್ಯಗಳನ್ನು ತಮ್ಮಲ್ಲೇ ಬಗೆಹರಿಸಿಕೊಂಡರೆ ತಮ್ಮ ಸಮುದಾಯದ ಮಾನ, ಮರ್ಯಾದೆಗಳು ತಮ್ಮಲ್ಲೇ ಉಳಿಯುತ್ತವೆ. ಇದರಿಂದ ತಾವು ಒಗ್ಗಟ್ಟಾಗಿ ಬದುಕಬಹುದು ಎನ್ನುವ ವಿಶಾಲ ಮನೋಭಾವ ಈ ಸಮುದಾಯದಲ್ಲಿದೆ. ಸಹಜವಾಗಿಯೇ ಸಂಸಾರದ ವಿಷಯಗಳಲ್ಲಿ, ವಿವಾಹ ಪೂರ್ವ, ವಿವಾಹ ನಂತರದ ಸಂದರ್ಭಗಳಲ್ಲಿ ವೈಮನಸ್ಸುಗಳು ಉಂಟಾಗುತ್ತವೆ. ಇಂತಹ ವೈಷಮ್ಯಗಳನ್ನು ಕಟ್ಟೆಮನೆ ಪಂಚಾಯಿತಿಗಳು ಬಗೆಹರಿಸುತ್ತವೆ. ಸಮುದಾಯದ ಯಜಮಾನರುಗಳಿಗೆ ಸಮುದಾಯದ ಎಲ್ಲರೂ ಗೌರವ ನೀಡುತ್ತಾರೆ. ಅವರು ಹೇಳುವ ಬುದ್ಧಿಮಾತುಗಳನ್ನು ಸ್ವೀಕರಿಸುತ್ತಾರೆ. ತಮ್ಮ ನಡುವೆ ನಡೆದಿರಬಹುದಾದ ವ್ಯಾಜ್ಯಗಳನ್ನು ಸಮುದಾಯದಿಂದ ಹೊರಗೆ ತೆಗೆದುಕೊಂಡು ಹೋದರೆ ತಮ್ಮ ಮರ್ಯಾದೆ ಹೋಗುತ್ತದೆಂದು ಭಾವಿಸುತ್ತಾರೆ. ಕೆಲವೊಮ್ಮೆ ಬುಡಕಟ್ಟು ಸಮುದಾಯದ ಯಜಮಾನರುಗಳು ಹೇಳುವ ನ್ಯಾಯ ತೀರ್ಮಾನವೇ ಅಂತಿಮವಾಗಿರುತ್ತದೆ. ಈ ರೀತಿಯ ನ್ಯಾಯವ್ಯವಸ್ಥೆಯು ಬೇಡ ಬುಡಕಟ್ಟು ಸಮುದಾಯದ ಒಗ್ಗಟ್ಟನ್ನು ಕಾಪಾಡಿಕೊಂಡು ಬಂದಿದೆ. ಸಾಧ್ಯವಾದಷ್ಟು ಮಟ್ಟಿಗೆ ಅನಾವಶ್ಯಕವಾಗಿ ಜಗಳಗಳು ಉಂಟಾಗುವುದಿಲ್ಲ. ಸಮುದಾಯದ ಯಜಮಾನರಿಗೆ ಬೇಡ ಬುಡಕಟ್ಟು ಸಮುದಾಯದವರು ಭಯಮಿಶ್ರಿತ ಗೌರವವನ್ನು ಕೊಡುತ್ತಾರೆ. ಆದ್ದರಿಂದ ಬೇಡ ಬುಡಕಟ್ಟು ಸಮುದಾಯದಲ್ಲಿ ಒಗ್ಗಟ್ಟು ಕಂಡುಬರುತ್ತದೆ.

ಬೇಡ ಸಮುದಾಯದಲ್ಲಿ ಕುಟುಂಬಗಳಲ್ಲಿನ ಹಿರಿಯರಿಗೆ ಕುಟುಂಬದ ಸದಸ್ಯರು ಗೌರವವನ್ನು ಕೊಡುತ್ತಾರೆ. ಕುಟುಂಬದ ಹಿರಿಯರು ತಮ್ಮ ಮಕ್ಕಳು, ಮೊಮ್ಮಕ್ಕಳನ್ನು ಪ್ರೀತಿ, ವಾತ್ಸಲ್ಯ, ಮಮತೆಗಳಿಂದ ಕಾಣುತ್ತಾರೆ. ಕುಟುಂಬದ ಸದಸ್ಯರು ಪರಸ್ಪರ ಪ್ರೀತಿ, ವಿಶ್ವಾಸ, ಮಮತೆ, ಗೌರವಗಳನ್ನು ಹೊಂದಿರುತ್ತಾರೆ. ಪರಸ್ಪರ ಕುಟುಂಬಗಳ ಸದಸ್ಯರುಗಳನ್ನು ಚಿಕ್ಕಪ್ಪ-ದೊಡ್ಡಪ್ಪ, ಅಣ್ಣ-ತಮ್ಮ, ಅಕ್ಕ-ತಂಗಿ, ಅಜ್ಜ-ಅಜ್ಜಿ, ತಾತ-ಅಜ್ಜಿ ಈ ರೀತಿಯಲ್ಲಿ ಮಾತನಾಡಿಸುತ್ತಾರೆ. ಸಣ್ಣಪುಟ್ಟ ವ್ಯಾಜ್ಯಗಳನ್ನು ಸಂಬಂಧಪಟ್ಟ ಕೇರಿಗಳ ಯಜಮಾನರೇ ಬಗೆಹರಿಸುತ್ತಾರೆ. ದೊಡ್ಡವ್ಯಾಜ್ಯಗಳು ಉಂಟಾದರೆ ಕಟ್ಟೆಮನೆ ನ್ಯಾಯ ಪಂಚಾಯಿತಿಗಳು ನ್ಯಾಯತೀರ್ಮಾನ ಮಾಡುತ್ತವೆ. ಈ ಕಟ್ಟೆಮನೆಗಳು ಸಾಮಾನ್ಯವಾಗಿ ಎಂಟರಿಂದ ಹತ್ತು ಹಳ್ಳಿಗಳಿಗೆ ಒಂದರಂತೆ ಇರುತ್ತವೆ. ಕೆಲವೊಮ್ಮೆ ಎಂಟು-ಹತ್ತು ಕೇರಿಗಳಿಗೆ ಒಂದರಂತೆಯೂ ಕಟ್ಟೆಮನೆಗಳು ಇರುತ್ತವೆ. ಕಟ್ಟೆಮನೆಗಳು ಸಾಮಾನ್ಯವಾಗಿ ಇವರ ದೇವಸ್ಥಾನಗಳ ಮುಂಭಾಗದಲ್ಲಿ ಇರುತ್ತವೆ. ಒಂದು ದೊಡ್ಡ ಜಗುಲಿಯು ನಿರ್ಮಾಣವಾಗಿರುತ್ತದೆ. ದೊಡ್ಡ ಜಗುಲಿಯ ಅಕ್ಕ ಪಕ್ಕ ಅಥವಾ ಮಧ್ಯಭಾಗದಲ್ಲಿ ಮರಗಳು ಇರುತ್ತವೆ. ಬೇಡ ಬುಡಕಟ್ಟು ಸಮುದಾಯದವರು ಅಪಾರ

ದೈವಭಕ್ತರಾಗಿರುತ್ತಾರೆ. ದೇವರು ಮತ್ತು ದೈವಕ್ಕೆ ಭಯ, ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಸೂರ್ಯ ಮತ್ತು ಚಂದ್ರ ದೇವರುಗಳ ಬಗ್ಗೆ ಅಪಾರ ನಂಬಿಕೆಯನ್ನು ಹೊಂದಿದ್ದಾರೆ. ತಮ್ಮ ಕುಲದೇವತೆಗಳ ಮುಂದೆ ಯಾರು ಕೂಡ ಸುಳ್ಳನ್ನು ಹೇಳುವುದಿಲ್ಲ. ಒಂದು ವೇಳೆ ಸುಳ್ಳು ಹೇಳಿದರೆ ದೇವರಿಂದ ಶಿಕ್ಷೆಗೊಳಗಾಗುತ್ತೇವೆ ದೇವರು ಕ್ಷಮಿಸುವುದಿಲ್ಲ ಎಂದು ನಂಬಿಕೆಯನ್ನು ಹೊಂದಿರುತ್ತಾರೆ. ಸುಳ್ಳನ್ನು ಹೇಳುವುದರಿಂದ ತಮ್ಮ ಕುಲ ನಾಶವಾಗುತ್ತದೆ ಎಂದು ನಂಬುತ್ತಾರೆ. ಕಟ್ಟೆಮನೆ ನ್ಯಾಯ ಪಂಚಾಯಿತಿಗಳು ನೀಡುವ ನ್ಯಾಯ ತೀರ್ಮಾನಗಳು ಆಧುನಿಕ ಕೋರ್ಟ್‌ಗಳ ನ್ಯಾಯ ತೀರ್ಮಾನಗಳಿಗಿಂತಲೂ ಶೀಘ್ರವಾಗಿ, ಪರಿಣಾಮಕಾರಿಯಾಗಿ ಇರುತ್ತವೆ. ಕೃಷ್ಣಮೂರ್ತಿ ಹನೂರು ಅವರು ತಮ್ಮ ಮ್ಯಾಸಬೇಡರು ಪುಸ್ತಕದಲ್ಲಿ ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡನಾಯಕರಿಗೆ ಸೇರಿದ ಹನ್ನೆರಡು ಕಟ್ಟೆಮನೆಗಳನ್ನು ಪಟ್ಟಿ ಮಾಡಿದ್ದಾರೆ.

೧. ಗೋನೂರು – ಚಿತ್ರದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೨. ಕಾಮಗೇತನಹಳ್ಳಿ – ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ
೩. ಹಿರೇಹಳ್ಳಿ – ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೪. ಅಡವಿಮಾರೇನಹಳ್ಳಿ – ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೫. ಓಬೇನಹಳ್ಳಿ – ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೬. ಮಲುವರಳ್ಳಿ – ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೭. ಕೋನಸಾಗರ – ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೮. ತಾಳೀಕೆರೆ – ಮಡಕಶಿರಾ ತಾಲ್ಲೂಕು, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ
೯. ಮುತ್ತಿಗಾರಳ್ಳಿ – ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೧೦. ನಾಯಕನಹಟ್ಟಿ – ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೧೧. ಹಿರೇಮಲ್ಲನಹೊಳೆ – ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ
೧೨. ನನ್ನಿವಾಳ – ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

ಚಿತ್ರದುರ್ಗ ಜಿಲ್ಲೆಯು ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿದ್ದರಿಂದ, ಚಿತ್ರದುರ್ಗ ಸಂಸ್ಥಾನವನ್ನು ಬೇಡ ಬುಡಕಟ್ಟು ಸಮುದಾಯದವರೇ ಆಳಿದ್ದರಿಂದಾಗಿ ಕಟ್ಟೆಮನೆಗಳು ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ. ಪಾಳೆಯಗಾರರೂ ಕೂಡ ತಮ್ಮ ಸಂಸ್ಥಾನಗಳಲ್ಲಿ ನ್ಯಾಯ ತೀರ್ಮಾನಗಳನ್ನು ಕೊಡುತ್ತಿದ್ದರು. ನ್ಯಾಯ, ನೀತಿ, ಧರ್ಮಮಾರ್ಗಕ್ಕೆ, ವಿಶೇಷವಾದ ಪ್ರಾಧಾನ್ಯತೆಯನ್ನು ನೀಡುತ್ತಿದ್ದರು. ಹಾಗೂ ಅನ್ಯಾಯ, ಅನೀತಿ, ಅಧರ್ಮ ಮಾರ್ಗಕ್ಕೆ ಸೂಕ್ತ ದಂಡನೆ ಮತ್ತು ಶಿಕ್ಷೆಯನ್ನು ನೀಡುತ್ತಿದ್ದರೆಂದು ಬೇಡ ಸಮುದಾಯದ ಮಾಹಿತಿದಾರರು ತಿಳಿಸುತ್ತಾರೆ. ರಾಜರುಗಳು ನೀಡಿದ ಆಡಳಿತವು ಶ್ರೇಷ್ಠವಾದದ್ದೆಂದು ತಿಳಿದು ಬರುತ್ತದೆ. ಮದಕರಿನಾಯಕನ ಆಡಳಿತ ಕಾಲದಲ್ಲಿ ನ್ಯಾಯತೀರ್ಮಾನಗಳು

ಪರಿಣಾಮಕಾರಿಯಾಗಿ ಇರುತ್ತಿದ್ದವು ಎಂದು ತಿಳಿದುಬರುತ್ತದೆ. ಕಟ್ಟೆಮನೆ ನ್ಯಾಯ ಪಂಚಾಯಿತಿಗಳೂ ಕೂಡ ಪಾರದರ್ಶಕ ಮತ್ತು ನ್ಯಾಯಯುತವಾಗಿರುತ್ತವೆ. ದೇವರ ಹೆಸರಿನಲ್ಲಿ ಪ್ರಮಾಣಗಳನ್ನು ಮಾಡಿಸಲಾಗುತ್ತದೆ. ಈಗ ಉಳಿದುಕೊಂಡು ಬಂದಿರುವ ಕಟ್ಟೆಮನೆಗಳ ವ್ಯಾಪ್ತಿಯಲ್ಲಿ ಪಾಳೆಯ ಪಟ್ಟುಗಳು ಇದ್ದವು ಎನ್ನುವುದನ್ನು ಬೇಡ ಸಮುದಾಯದ ಮಾಹಿತಿದಾರರು ತಿಳಿಸುತ್ತಾರೆ. ಗೋನೂರು ಕಟ್ಟೆಮನೆಯ ವ್ಯಾಪ್ತಿಯಲ್ಲಿ ಕೂನಬೇವು, ಹೊಸಮಾಳಿಗೆ, ಮಲ್ಲಾಪುರ, ಸಾಸಲಹಟ್ಟಿ, ಮುತ್ತೈನಹಟ್ಟಿ, ಹಾಯಕಲ್ಲು, ಬೆಳಘಟ್ಟ, ಚಿಂತಲಕಟ್ಟೆ ಮುಂತಾದ ಬೇಡರ ಹಟ್ಟಿಗಳು ಇವೆ. ನನ್ನಿವಾಳ ಕಟ್ಟೆಮನೆಯ ವ್ಯಾಪ್ತಿಯಲ್ಲಿ ಬೋರಪ್ಪನಹಟ್ಟಿ, ತೊಡಲಾರಹಟ್ಟಿ, ಬಂಗಾರದೇವರ ಹಟ್ಟಿ, ಪೆತ್ತಮ್ಮಾರ ಹಟ್ಟಿ, ಕರೆಕಾಟ್ಲಟ್ಟಿ, ಚಿತ್ತಯ್ಯನಹಟ್ಟಿ, ದೊರೆಗಳಹಟ್ಟಿ ಮುಂತಾದ ಹಟ್ಟಿಗಳು ಇವೆ. ನಾಯಕನಹಟ್ಟಿಯ ಕಟ್ಟೆಮನೆ ವ್ಯಾಪ್ತಿಯಲ್ಲಿ ರಾಮಸಾಗರ, ಮಹದೇವಪುರ, ಬೋಸೇದೇವರಹಟ್ಟಿ, ದೊಣಮಂಡ್ಲಹಟ್ಟಿ, ನಲಗೇತಲಹಟ್ಟಿ, ಗೌರಿಪುರ, ಮನಮೈನಹಟ್ಟಿ, ಓಬಯ್ಯನಹಟ್ಟಿ, ಕುದಾಪುರ, ಚನ್ನಬಸವಯ್ಯನಹಟ್ಟಿ, ಗೆಜ್ಜೆನಾನಹಳ್ಳಿ, ಜಾಗನೋರ ಹಟ್ಟಿ ಮುಂತಾದ ಹಟ್ಟಿಗಳು ಇವೆ. ಕಂಪಳದೇವರಹಟ್ಟಿಯ ಗುರುಸ್ಥಾನವು ಎಲ್ಲಾ ಕಟ್ಟೆಮನೆಗಳಿಗಿಂತ ಶ್ರೇಷ್ಠವಾದುದು ಆಗಿದೆ. ಕಟ್ಟೆಮನೆಗಳಲ್ಲಿ ಬಗೆಹರಿಯದೇ ಇರುವ ವ್ಯಾಜ್ಯಗಳು ಗುರುಸ್ಥಾನದಲ್ಲಿ ನಿರ್ಣಯಗೊಂಡು ತೀರ್ಮಾನವಾಗುತ್ತವೆ. ಕಂಪಳದೇವರಹಟ್ಟಿಯ ವ್ಯಾಪ್ತಿಯಲ್ಲಿ ಹಾನಗಲ್ಲು, ಕರಿನಾರಹಟ್ಟಿ, ಕೋನಸಾಗರ, ಕೊಂಡ್ಲಹಳ್ಳಿ, ಮೊಗಲಹಳ್ಳಿ, ವೂಡೆಗೊಳ, ಕಪ್ಪಡಬಂಡಹಟ್ಟಿ ಕೊಮ್ಮಲಪಟ್ಟಿ, ರಾಯಪುರ, ಕುಂಟೋಬಯ್ಯನ ಹಟ್ಟಿ, ಪೂಜಾರಹಳ್ಳಿ, ಸೂರಮ್ಮನಹಳ್ಳಿ, ಪರಿವಾನರದೇವರ ಹಟ್ಟಿ, ಮುಂತಾದ ಹಟ್ಟಿಗಳು ಇವೆ.

ಬೇಡ ಬುಡಕಟ್ಟು ಸಮುದಾಯದಲ್ಲಿ ಚಪ್ಪಲಿಯಲ್ಲಿ ಹೊಡೆದಾಡುವುದನ್ನು ಮಹಾ ಅಪರಾಧ ಎಂದು ಭಾವಿಸುತ್ತಾರೆ. ಚಪ್ಪಲಿಯಲ್ಲಿ ಹೊಡೆದವನು ಮತ್ತು ಹೊಡೆಸಿಕೊಂಡವನನ್ನು ಕುಲದಿಂದ ಹೊರಗೆ ಹಾಕಿ ದಂಡವನ್ನು ವಿಧಿಸುತ್ತಾರೆ. ಅಂತರ್‌ಜಾತಿ ವಿವಾಹವನ್ನು ಬೆಂಬಲಿಸುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಉನ್ನತ ಜಾತಿಯವರೊಂದಿಗೆ ಹೆಂಗಸಾಗಲಿ, ಗಂಡಸಾಗಲಿ ವಿವಾಹವಾದರೆ ದಂಡನೆಯಲ್ಲಿ ರಿಯಾಯಿತಿ ನೀಡುತ್ತಾರೆ. ಆದರೆ ಕೆಳಜಾತಿಯಲ್ಲಿ ವಿವಾಹವಾದರೆ ಕುಲದಿಂದ ಹೊರಗೆ ಹಾಕುತ್ತಾರೆ. ವಿಧವೆಯಾದ ಬೇಡ ಮಹಿಳೆಗೆ ಸೀರುಡಿಕೆಯ ಮೂಲಕ ಪುನರ್‌ವಿವಾಹ ಮಾಡಿಸುತ್ತಾರೆ. ಸೀರುಡಿಕೆಯ ಸಂಬಂಧದ ನಂತರ ಮಕ್ಕಳಾದರೆ ಅಂತಹ ಮಕ್ಕಳು ಸೀರುಡಿಕೆಯ ನಂತರ ಸಂಬಂಧದ ಮಕ್ಕಳನ್ನೇ ವಿವಾಹವಾಗಬೇಕಾಗುತ್ತದೆ. ಆದರೆ ಸೀರುಡಿಕೆಗಿಂತಲೂ ಮುಂಚೆಯೇ ಮಕ್ಕಳು ಜನಿಸಿದ್ದರೆ. ಅಂತಹ ಮಕ್ಕಳು ಕುಲಸ್ಥರ ರೀತಿಯಲ್ಲಿ ವಿವಾಹವಾಗಬಹುದಾಗಿರುತ್ತದೆ. ಸಾಂಪ್ರದಾಯಿಕವಾದ ವಿವಾಹಕ್ಕೆ ಪ್ರೋತ್ಸಾಹವನ್ನು ನೀಡುತ್ತಾರೆ. ಅಂತರಜಾತಿ ವಿವಾಹವಾದವರನ್ನು ಕುಲದಿಂದ ಬಹಿಷ್ಕಾರ ಹಾಕುತ್ತಾರೆ. ಬೇಡ ಸಮುದಾಯದಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಿದೆ. ಸಾಂಪ್ರದಾಯಿಕವಾಗಿ ತಂದೆಯ ಆಸ್ತಿಯು ಗಂಡು ಮಕ್ಕಳಿಗೆ ಹೋಗುತ್ತದೆ. ಹೆಣ್ಣು ಮಕ್ಕಳನ್ನು ಹೊಂದಿರುವ ಪೋಷಕರು ತಮ್ಮ ಮಕ್ಕಳ ವಿವಾಹಕ್ಕೆ ಗಂಡು ಹುಡುಕಿಕೊಂಡು ಹೋಗುವುದಿಲ್ಲ. ಗಂಡಿನ ಮನೆಯವರೇ ವಯಸ್ಕ ಹೆಣ್ಣುಮಕ್ಕಳಿರುವ ಮನೆಗೆ ಹೆಣ್ಣನ್ನು ನೋಡಲು, ಕೇಳಲು

ಬರಬೇಕಾಗುತ್ತದೆ. ದಂಪತಿಗಳಿಗೆ ಹುಟ್ಟಿದ ಮಕ್ಕಳು ತಂದೆಯ ಕುಲಕ್ಕೆ ಸೇರುತ್ತಾರೆ. ಇತ್ಯಾದಿಯಾಗಿ ಬೇಡ ಬುಡಕಟ್ಟು ಸಮುದಾಯದವರು ತಮ್ಮದೇ ಆದ ನೀತಿ ನಿಯಮಗಳನ್ನು ಹೊಂದಿದ್ದಾರೆ.

### ೨.೭. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

ಬೇಡ ಬುಡಕಟ್ಟು ಸಮುದಾಯವು ತನ್ನದೇ ಆದ ಜೀವನವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದೆ. ಬೇಡ ಸಮುದಾಯವು ಸಾಂಪ್ರದಾಯಿಕ ಕೌಟುಂಬಿಕ ವ್ಯವಸ್ಥೆಯನ್ನು ಹೊಂದಿದೆ. ಹಿಂದಿನ ಕಾಲದಿಂದಲೂ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಅನುಸರಿಸಿಕೊಂಡು ಬಂದಿದೆ. ಇತ್ತೀಚಿನ ಆಧುನಿಕ ಕಾಲದಲ್ಲಿ ವಿಭಕ್ತ ಕುಟುಂಬ ಪದ್ಧತಿಯನ್ನು ಹೆಚ್ಚಾಗಿ ಅನುಸರಿಸುತ್ತಿದೆ. ಕುಟುಂಬ ಪದ್ಧತಿಯ ಮೂಲಕ ತನ್ನ ಸಮುದಾಯದ ಅಸ್ತಿತ್ವವನ್ನು ಬೇಡಸಮುದಾಯ ಉಳಿಸಿಕೊಂಡು ಬಂದಿದೆ. ಸಾಮಾಜಿಕ ಜೀವನ ವ್ಯವಸ್ಥೆಯಲ್ಲಿ ತಮ್ಮದೇ ಆದ ಕೌಟುಂಬಿಕ ವ್ಯವಸ್ಥೆ, ಮನೆಯ ವ್ಯವಸ್ಥೆ, ಆಹಾರ ಪದ್ಧತಿ, ನ್ಯಾಯ ಪಂಚಾಯಿತಿ, ಉಡುಗೆ-ತೊಡುಗೆ, ವೈದ್ಯ ಪದ್ಧತಿ, ಮಹಿಳೆಯರು ಮತ್ತು ಪುರುಷರ ಸ್ಥಾನಮಾನ, ಸಾಮಾಜಿಕ ಜೀವನದಲ್ಲಿ ಸಂಘ-ಸಂಸ್ಥೆಗಳ ಪಾತ್ರ, ನೀತಿ-ನಿಯಮಗಳು, ವಿಧಿ-ನಿಷೇಧಗಳು, ಕಟ್ಟೆಮನೆ ನ್ಯಾಯಿಕ ವ್ಯವಸ್ಥೆ, ಕಲೆ ಮತ್ತು ಸಂಸ್ಕೃತಿ, ಕ್ರೀಡೆ ಮತ್ತು ಪ್ರದರ್ಶನ ಕಲೆಗಳು ಮುಂತಾದ ವ್ಯವಸ್ಥೆಗಳನ್ನು ಈ ಸಮುದಾಯವು ಹೊಂದಿದೆ.

**ಕೌಟುಂಬಿಕ ವ್ಯವಸ್ಥೆ** : ಭಾರತೀಯ ಸಮಾಜದಲ್ಲಿ ಕುಟುಂಬದ ವ್ಯವಸ್ಥೆಗೆ ಪ್ರಾಧಾನ್ಯತೆಯನ್ನು ನೀಡಲಾಗಿದೆ. ಮನುಷ್ಯನ ಸಾಮಾಜೀಕರಣ ಪ್ರಾರಂಭವಾಗುವುದು ಕೂಡ ಕುಟುಂಬದಿಂದಲೇ ಆಗುತ್ತದೆ. ಕುಟುಂಬದಲ್ಲಿ ತಂದೆ-ತಾಯಿಗಳು, ಪೋಷಕರು ನಿರ್ವಹಿಸುವ ಪಾತ್ರವು ವ್ಯಕ್ತಿಯ ವ್ಯಕ್ತಿತ್ವ ವಿಕಸನದಲ್ಲಿ ಮಹತ್ವರವಾದ ಪಾತ್ರವನ್ನು ವಹಿಸುತ್ತದೆ. ಮಗುವಿನ ವಿಕಾಸ ಮತ್ತು ಬೆಳವಣಿಗೆಯಲ್ಲಿ ತಂದೆ-ತಾಯಿಯ ಮತ್ತು ಕುಟುಂಬದ ಸದಸ್ಯರ ಪಾತ್ರ ಮುಖ್ಯವಾದುದು ಆಗಿದೆ. ಪ್ರತಿಯೊಂದು ಮಗುವಿನ ಹುಟ್ಟು ಪ್ರಾರಂಭವಾಗುವುದು ಕುಟುಂಬದಿಂದಲೇ ಆಗುತ್ತದೆ. ಹುಟ್ಟಿನಿಂದ ಮರಣದವರೆಗೆ ನಡೆಯುವ ಎಲ್ಲಾ ಸಂದರ್ಭಗಳಲ್ಲಿಯೂ ಕುಟುಂಬದ ಸದಸ್ಯರ ಪಾತ್ರ ಬಹುಮುಖ್ಯವಾಗುತ್ತದೆ. ಶಿಕ್ಷಣ, ಉದ್ಯೋಗ, ವಿವಾಹ, ಮರಣ ಸಂಸ್ಕಾರ, ಹಬ್ಬಹರಿದಿನಗಳು, ದೇವರ ಪೂಜೆ ಪುನಸ್ಕಾರಗಳು, ಧಾರ್ಮಿಕ ವಿಧಿ-ವಿಧಾನಗಳು, ಮನೆಯಲ್ಲಿ ಆಚರಿಸಲ್ಪಡುವ ವಿವಿಧ ರೀತಿಯ ಸಂಸ್ಕಾರಗಳಂತಹ ಸಂದರ್ಭಗಳಲ್ಲಿ ಕುಟುಂಬದ ಸದಸ್ಯರು ತಮ್ಮ ಪಾತ್ರವನ್ನು ನಿರ್ವಹಿಸುತ್ತಾರೆ. ಮನುಷ್ಯನ ಹುಟ್ಟಿನಿಂದ ಮರಣ ಸಂಸ್ಕಾರದವರೆಗೆ ಕುಟುಂಬದ ಸದಸ್ಯರು ಹಾಗೂ ಸಮುದಾಯದ ಸದಸ್ಯರು ತಮ್ಮ ಪಾತ್ರವನ್ನು ನಿರ್ವಹಿಸುತ್ತಾರೆ. ಬೇಡ ಸಮುದಾಯದವರು ಬಹಳ ಪ್ರಾಚೀನ ಕಾಲದಿಂದಲೂ ಅವಿಭಕ್ತ ಕುಟುಂಬ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದೆ. ಚಿತ್ರದುರ್ಗ ಜಿಲ್ಲೆಯ ಪ್ರದೇಶ ವ್ಯಾಪ್ತಿಯಲ್ಲಿ ಇಂತಹ ಅವಿಭಕ್ತ ಕುಟುಂಬಗಳು ಈಗಲೂ ಇವೆ. ಆದರೆ ಅವುಗಳ ಸಂಖ್ಯೆಗಳು ಕಡಿಮೆಯಾಗುತ್ತಿವೆ. ನಗರಗಳು ಬೆಳೆದಂತೆ, ತಮ್ಮ ಶಿಕ್ಷಣ, ಉದ್ಯೋಗ, ವಿವಾಹ ಮುಂತಾದ ಅಗತ್ಯತೆಗಳಿಂದಾಗಿ. ಅವಿಭಕ್ತ ಕುಟುಂಬದಲ್ಲಿ ವಾಸಿಸುತ್ತಿದ್ದವರು ವಿಭಕ್ತ ಕುಟುಂಬಗಳಾಗಿ ವಾಸ

ಮಾಡತೊಡಗಿದ್ದಾರೆ. ಅಲ್ಲದೇ ಯುವಕರ ಮನೋಭಾವನೆಗಳೂ ಕೂಡ ಬದಲಾಗುತ್ತಿವೆ. ಹೆಚ್ಚು ಸ್ವಾತಂತ್ರ್ಯವನ್ನು ಬಯಸುವ ಯುವಕ ಯುವತಿಯರು ಸಹಜವಾಗಿಯೇ ಅವಿಭಕ್ತ ಕುಟುಂಬಗಳನ್ನು ತೊರೆದು ವಿಭಕ್ತ ಕುಟುಂಬಗಳಲ್ಲಿ ವಾಸ ಮಾಡುತ್ತಿದ್ದಾರೆ.

ಇವರು ಪಿತೃಪ್ರಧಾನ ಕೌಟುಂಬಿಕ ವ್ಯವಸ್ಥೆಯನ್ನು ಹೊಂದಿದ್ದಾರೆ. ಕುಟುಂಬದಲ್ಲಿ ಹಿರಿಯವ್ಯಕ್ತಿಗೆ ವಿಶೇಷ ಪ್ರಾಧಾನ್ಯತೆ ಇರುತ್ತದೆ. ಹಿರಿಯ ವ್ಯಕ್ತಿಯೇ ಯಜಮಾನನಾಗಿರುತ್ತಾನೆ ಕುಟುಂಬದ ಹಿತರಕ್ಷಣೆಗಾಗಿ, ಕುಟುಂಬದ ಸದಸ್ಯರ ಏಳಿಗೆಗಾಗಿ ಯಜಮಾನನು ಸದಾ ಶ್ರಮವಹಿಸುತ್ತಾನೆ. ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಂದರ್ಭಗಳಲ್ಲಿ ಯಜಮಾನನ ನಿರ್ಧಾರವೇ ಅಂತಿಮವಾಗಿರುತ್ತದೆ. ಯಜಮಾನನು ನಿರಂಕುಶ ಅಧಿಕಾರವನ್ನು ಚಲಾಯಿಸುವುದಿಲ್ಲ. ಕುಟುಂಬದ ಎಲ್ಲಾ ಸದಸ್ಯರ ಮಾತಿಗೂ ಮನ್ನಣೆ ಇರುತ್ತದೆ. ವಿವಾಹದ ಸಂದರ್ಭಗಳಲ್ಲಿ ಮನೆಯ ಯಜಮಾನನ ಒಪ್ಪಿಗೆ ಅಗತ್ಯವಾಗಿರುತ್ತದೆ. ಕುಟುಂಬದಲ್ಲಿ ಉದ್ಭವಿಸುವ ಕೌಟುಂಬಿಕ ಸಮಸ್ಯೆಗಳನ್ನು ಮನೆಯ ಯಜಮಾನನೇ ಬಗೆಹರಿಸುತ್ತಾನೆ. ಮನೆಯಲ್ಲಿ ಇರುವ ಅಜ್ಜ–ಅಜ್ಜಿ, ಅಣ್ಣ–ತಮ್ಮ, ಅಕ್ಕ–ತಂಗಿ, ಅಪ್ಪ–ಅಮ್ಮ, ಈ ರೀತಿಯ ಸಂಬಂಧಗಳು, ಮಕ್ಕಳು, ಮೊಮ್ಮಕ್ಕಳು ಇವರ ನಡುವಿನ ಅನ್ಯೋನ್ಯತೆಯು ಒಳ್ಳೆಯ ಕುಟುಂಬ ವ್ಯವಸ್ಥೆಯಲ್ಲಿ ಕಾಣುತ್ತೇವೆ. ಕುಟುಂಬದಲ್ಲಿ ಹೆಣ್ಣಿನ ಪಾತ್ರವೂ ಕೂಡ ಪ್ರಮುಖವಾದದು. ಕುಟುಂಬದ ಯಜಮಾನನ ರೀತಿಯಲ್ಲಿಯೇ ಯಜಮಾನಿಯ ಪಾತ್ರವೂ ಮುಖ್ಯವಾದುದು. ಯಜಮಾನನ ನಂತರದ ಸ್ಥಾನದಲ್ಲಿ ಯಜಮಾನಿಗೆ ಅಧಿಕಾರವಿರುತ್ತದೆ. ಕೌಟುಂಬಿಕ ಜೀವನದಲ್ಲಿ ಜನನ, ತೊಟ್ಟಿಲು ಕಾರ್ಯ, ವಿವಾಹ, ಸೀಮಂತ ಕಾರ್ಯಗಳಲ್ಲಿ ಯಜಮಾನನ ಜೊತೆಗೆ ಯಜಮಾನಿಯು ಸಹಕಾರ ನೀಡುತ್ತಾಳೆ. ಗ್ರಾಮೀಣ ಭಾಗದ ಹಳ್ಳಿಗಳಲ್ಲಿ ಅಥವಾ ಹಟ್ಟಿಗಳಲ್ಲಿ ಕೆಲವು ಕಡೆ ಅವಿಭಕ್ತ ಕುಟುಂಬಗಳು ಕಂಡುಬರುತ್ತವೆ. ನಗರ ಪ್ರದೇಶಗಳಲ್ಲಿ ಬಹುತೇಕವಾಗಿ ವಿಭಕ್ತ ಕುಟುಂಬಗಳು ಕಂಡುಬರುತ್ತವೆ.

ಮನೆಗಳ ನಿರ್ಮಾಣ ಮತ್ತು ಗೃಹ ಪ್ರವೇಶಗಳಂತಹ ಸಂದರ್ಭಗಳಲ್ಲಿ ತಮ್ಮ ಕುಲದೇವತೆ ಅಥವಾ ಕುಲದೇವರುಗಳ ಪೂಜೆಯನ್ನು ಮಾಡುತ್ತಾರೆ. ಗೃಹಪ್ರವೇಶ ಮಾಡುವಾಗ ಹಸುವಿನ ಪೂಜೆಯನ್ನು ಮಾಡುತ್ತಾರೆ. ಹಸುವನ್ನು ಮನೆಯ ಒಳಗಡೆ ಕರೆದುಕೊಂಡು ಬರುತ್ತಾರೆ. ಒಲೆಯ ಪೂಜೆಯನ್ನು ಮಾಡುತ್ತಾರೆ. ಹಾಲನ್ನು ಉಕ್ಕಿಸುವ ಶಾಸ್ತ್ರವನ್ನು ಮಾಡುತ್ತಾರೆ. ಕುಲಬಾಂಧವರು, ಸ್ನೇಹಿತರನ್ನು ಆಹ್ವಾನಿಸಿ ಸಾಂಪ್ರದಾಯಿಕ ಊಟವನ್ನು ಹಾಕುತ್ತಾರೆ. ಅಮವಾಸ್ಯೆ, ಹುಣ್ಣಿಮೆಗಳಂದು ಮನೆಗಳಲ್ಲಿ ಮತ್ತು ದೇವಸ್ಥಾನಗಳಲ್ಲಿ ವಿಶೇಷ ಪೂಜೆಯನ್ನು ಮಾಡುತ್ತಾರೆ. ಮನೆದೇವರ ಪೂಜೆಗಾಗಿ ಅರಿಶಿಣ, ಕುಂಕುಮ, ನಿಂಬೇಹಣ್ಣು, ಕರ್ಪೂರ, ತೆಂಗಿನಕಾಯಿಗಳನ್ನು ಉಪಯೋಗಿಸುತ್ತಾರೆ. ಸತ್ಯನಾರಾಯಣ ಪೂಜೆ, ಹನುಮಂತ ಚಾಲಿಸ ಪಠಣ, ಕುಲದೇವತೆಗಳ ಕಥೆಗಳ ಪಠಣವನ್ನು ಮಾಡುತ್ತಾರೆ. ಬೇಡರ ಮನೆಗಳಿಗೆ ಸಂಬಂಧಿಸಿದಂತೆ ಕೆಲವು ನಂಬಿಕೆಗಳು ಮತ್ತು ವಿಧಿ ನಿಷೇಧಗಳಿವೆ.

೧. ದೇವಸ್ಥಾನದ ಎದುರಿನಲ್ಲಿ ಮನೆಯನ್ನು ಕಟ್ಟುವುದಿಲ್ಲ.

೨. ಮನೆಯ ಹೊಸ್ತಿಲು ಬೇವಿನ ಮರದಿಂದ ಮಾಡಬಾರದು

೩. ಮನೆಯಲ್ಲಿ ಒಲೆಯನ್ನು ಹೊತ್ತಿಸುವಾಗ ಪೂಜೆಯನ್ನು ಮಾಡಬೇಕು.

೪. ಮನೆಯಲ್ಲಿ ಮೂರು ಒಲೆಗಳು ಇರಬಾರದು.

೫. ದೇವಸ್ಥಾನಕ್ಕೆ ಹೋಗಿ ಮನೆಯೊಳಗೆ ಕಾಲು ತೊಳೆದುಕೊಂಡು ಬರಬಾರದು.

೬. ಮನೆಯ ಒಳಗೆ ಚಪ್ಪಲಿಯನ್ನು ಧರಿಸಿಕೊಂಡು ಹೋಗುವುದಿಲ್ಲ.

೭. ಬೇವಿನ ಕಟ್ಟಿಗೆಯಿಂದ ಅಡುಗೆಯನ್ನು ಮಾಡಬಾರದು.

೮. ಮನೆಯ ಎದುರಿನಲ್ಲಿ ಕೂದಲು ಕತ್ತರಿಸುವ ಅಂಗಡಿ ಇರುವಂತಿಲ್ಲ.

೯. ಮನೆಯ ಎದುರಿನಲ್ಲಿ ಹಾಳುಬಿದ್ದಗೋಡೆ ಇರುವಂತಿಲ್ಲ.

೧೦. ಮನೆಯ ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು.

೧೧. ಮನೆಯಲ್ಲಿನ ಒಲೆಯನ್ನು ಒದೆಯುವಂತಿಲ್ಲ

೧೨. ಉತ್ತರ ದಿಕ್ಕಿಗೆ ತಲೆಹಾಕಿ ಮಲಗಬಾರದು.

೧೩. ರಾತ್ರಿಯ ಸಂದರ್ಭದಲ್ಲಿ ಮನೆಯ ಕಸಗುಡಿಸಿ ಮನೆಯಿಂದ ಹೊರಗೆ ಹಾಕುವಂತಿಲ್ಲ.

೧೪. ಮನೆಯ ಬಾಗಿಲಿನ ಚಿಲಕದ ಶಬ್ಧವನ್ನು ಮಾಡುವಂತಿಲ್ಲ.

೧೫. ಒಲೆಯು ಚೆನ್ನಾಗಿ ಉರಿದಾಗ ನೆಂಟರು ಬರುತ್ತಾರೆ ಎನ್ನುವ ನಂಬಿಕೆ ಇರುವುದು.

೧೬. ಒಲೆಯ ಮುಂದೆ ಉಗುಳುವಂತಿಲ್ಲ.

೧೭. ದೇವಸ್ಥಾನದ ಎದುರಿಗೆ ಮನೆಯನ್ನು ಕಟ್ಟುವಂತಿಲ್ಲ.

೧೮. ಮನೆಯಲ್ಲಿ ಬೆಕ್ಕುಗಳು ಜಗಳವಾಡಬಾರದು ಎನ್ನುವ ನಂಬಿಕೆ ಇದೆ.

೧೯. ಅಡುಗೆ ಮಾಡಿದಾಗ ಅನ್ನವನ್ನು ಮೊದಲು ಒಲೆಗೆ ಹಾಕಬೇಕು ಎನ್ನುವ ನಂಬಿಕೆ ಇದೆ.

೨೦. ಮನೆಯ ಒಳಗಡೆ ಹಲ್ಲಿಗಳು ಪದೇ ಪದೇ ಲೊಚಗುಡುತ್ತಿರಬಾರದು ಎನ್ನುವ ನಂಬಿಕೆ ಇವೆ.

**ನ್ಯಾಯ ಪಂಚಾಯಿತಿ ವ್ಯವಸ್ಥೆ**

ಪ್ರತಿಯೊಂದು ಬುಡಕಟ್ಟು ಜನಾಂಗದಲ್ಲಿ ಇರುವಂತೆಯೇ ಬೇಡ ಸಮುದಾಯದವರೂ ಕೂಡ ತಮ್ಮ ಜೀವನ ವಿಧಾನದಲ್ಲಿ ನ್ಯಾಯ ಪಂಚಾಯಿತಿ ವ್ಯವಸ್ಥೆಯನ್ನು ಹೊಂದಿದ್ದಾರೆ. ಈ ನ್ಯಾಯ ಪಂಚಾಯಿತಿಗಳು ಸಮುದಾಯದ ಒಗ್ಗಟ್ಟನ್ನು ಪ್ರದರ್ಶಿಸುತ್ತವೆ. ಸಮುದಾಯದ ಕೇರಿಗಳಲ್ಲಿ ಅಥವಾ ಹಟ್ಟಿಗಳಲ್ಲಿ ಉಂಟಾಗುವ ಭಿನ್ನಾಭಿಪ್ರಾಯಗಳು, ವೈಷಮ್ಯಗಳು, ಜಗಳಗಳನ್ನು ಸಮುದಾಯದ ಯಜಮಾನರು ಬಗೆಹರಿಸುತ್ತಾರೆ. ಪಂಚಾಯಿತಿ ಕಟ್ಟೆಗಳನ್ನು ರಚಿಸಿಕೊಂಡಿರುತ್ತಾರೆ. ಪಂಚಾಯಿತಿ ಕಟ್ಟೆಯ ಯಜಮಾನರು ನೀಡುವ ತೀರ್ಪನ್ನು ಎಲ್ಲರೂ ಗೌರವಿಸುತ್ತಾರೆ. ಕುಟುಂಬದಲ್ಲಿ ಉಂಟಾಗುವ ಯಾವುದೇ ಸಮಸ್ಯೆಗಳು, ಸಮುದಾಯದಲ್ಲಿ ಉಂಟಾಗುವ ಯಾವುದೇ ಸಮಸ್ಯೆಗಳನ್ನು ಕೂಲಂಕುಶವಾಗಿ

ಪರಿಶೀಲಿಸಿ ಪಂಚಾಯಿತಿ ಕಟ್ಟೆಯ ಮೂಲಕ ಯಜಮಾನರು ಸೂಕ್ತ ನ್ಯಾಯ ನಿರ್ಣಯವನ್ನು ನೀಡುತ್ತಾರೆ. ಈ ನ್ಯಾಯ ನಿರ್ಣಯವು ಕೆಲವು ಸಂದರ್ಭಗಳಲ್ಲಿ ದಂಡನೆ ಮತ್ತು ಶಿಕ್ಷೆಯನ್ನು ಒಳಗೊಂಡಿರುತ್ತದೆ. ಪಂಚಾಯಿತಿ ಕಟ್ಟೆಯ ಯಜಮಾನರು ನೀಡುವ ತೀರ್ಪನ್ನು ಎಲ್ಲರೂ ಗೌರವಿಸುತ್ತಾರೆ.

**ವೃತ್ತಿ ಮತ್ತು ಆಹಾರ ಪದ್ಧತಿ**

ಬೇಡ ಜನಾಂಗದವರು ಪ್ರಾಚೀನಕಾಲದಿಂದಲೂ ಬೇಟೆಯ ವೃತ್ತಿಯನ್ನು ಮಾಡುತ್ತಾ ಬಂದಿದ್ದಾರೆಂದು ತಿಳಿದುಬರುತ್ತದೆ. ರಾಜರ ಸಂಸ್ಥಾನಗಳಲ್ಲಿನ ಸೈನ್ಯದಲ್ಲಿ ಸೈನಿಕರಾಗಿ, ಸೈನ್ಯದ ದಂಡನಾಯಕರಾಗಿ, ರಾಜರಾಗಿ ಆಳ್ವಿಕೆ ಮಾಡಿದ್ದಾರೆ. ಚಿತ್ರದುರ್ಗದಲ್ಲಿನ ಏಳುಸುತ್ತಿನ ಕೋಟೆಯನ್ನು ಒಳಗೊಂಡಿದ್ದ ಚಿತ್ರದುರ್ಗದ ರಾಜ ಸಂಸ್ಥಾನದಲ್ಲಿ ಬೇಡರೇ ರಾಜರಾಗಿದ್ದರು. ಇವರ ಸೈನ್ಯದಲ್ಲಿ ಬಹುತೇಕ ಬೇಡ ಜನಾಂಗದವರೇ ಇದ್ದು ಪ್ರಬಲ ಬೇಡ ಪಡೆಯ ಸೈನ್ಯವನ್ನು ಹೊಂದಿದ್ದರು. ತಳವಾರಿಕೆ ವೃತ್ತಿಯನ್ನೂ ಮಾಡುತ್ತಾ ಬಂದಿದ್ದಾರೆ. ಇತಿಹಾಸದ ಸ್ಥಿತ್ಯಂತರಗಳಿಂದಾಗಿ, ರಾಜಸಂಸ್ಥಾನಗಳ ಅವನತಿಯಿಂದಾಗಿ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಕೊಳ್ಳುವ ಅನಿವಾರ್ಯತೆಯು ಬೇಡ ಜನಾಂಗಕ್ಕೆ ಬಂದಿತು. ನಂತರ ಪಶುಪಾಲನೆ, ವ್ಯವಸಾಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸ್ವಾತಂತ್ರ್ಯ ನಂತರದ ಭಾರತದಲ್ಲಿ ಈ ಭಾಗದ ಬೇಡರು ಶಿಕ್ಷಣವನ್ನು ಪಡೆದು ಸರ್ಕಾರಿ, ಖಾಸಗಿ, ಮತ್ತು ಇತರೇ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇತ್ತೀಚಿನ ದಿನಗಳಲ್ಲಿ ಶಿಕ್ಷಣವನ್ನು ಪಡೆದು ಬೇರೆ ಬೇರೆ ಉದ್ಯೋಗಗಳನ್ನು ಮಾಡುತ್ತಿರುವುದು ಕಂಡುಬಂದಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ಅಧಿಕಾರಿಗಳಾಗಿದ್ದಾರೆ. ಭಾರತೀಯ ಸೈನ್ಯದಲ್ಲಿ ಸೈನಿಕರಾಗಿದ್ದಾರೆ. ವೈದ್ಯರು, ಪೋಲಿಸ್ ಅಧಿಕಾರಿಗಳು, ಶಿಕ್ಷಕರು, ವಕೀಲರು, ಇಂಜಿನಿಯರುಗಳು, ಚಾಲಕರು, ಕಂಡಕ್ಟರುಗಳು, ಆಟೋ ಡ್ರೈವರ್‌ಗಳು, ಅಂಗಡಿಗಳ ಮಾಲಿಕರು, ನೌಕರರು, ಕಾಂಟ್ರಾಕ್ಟರುಗಳು, ಬಿಲ್ಡರುಗಳು ಇತ್ಯಾದಿಯಾಗಿ ಅನೇಕ ವೃತ್ತಿಗಳನ್ನು ಮಾಡುತ್ತಿದ್ದಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಮಳೆಯ ಪ್ರಮಾಣ ಕಡಿಮೆ ಇರುವುದರಿಂದ ಇವರು ಬೆಳೆಯುವ ಬೆಳೆಗಳು ಬಹುತೇಕವಾಗಿ ಮಳೆಯ ಆಶ್ರಯವನ್ನೇ ಹೊಂದಿವೆ. ಕೆಲವರು ಕೊಳವೆ ಬಾವಿಗಳನ್ನು ಹಾಕಿಸಿಕೊಂಡು ನೀರಾವರಿ ವ್ಯವಸಾಯವನ್ನು ಮಾಡುತ್ತಿದ್ದಾರೆ. ಇವರು ರಾಗಿ, ಜೋಳ, ಭತ್ತ, ತೊಗರಿ, ಹುರುಳಿ, ನವಣೆ, ಸಜ್ಜೆ, ಅಲಸಂದೆ, ಎಳ್ಳು, ಸಾಸಿವೆ, ಮೆಣಸಿನಕಾಯಿ, ಶೇಂಗಾ (ನೆಲಗಡಲೆಕಾಯಿ) ಹತ್ತಿ, ಈರೇಕಾಯಿ, ಅವರೇಕಾಯಿ, ಹಾಗಲಕಾಯಿ, ಕಬ್ಬು, ಅಡಿಕೆ, ತೆಂಗು, ಸೌತೇಕಾಯಿ, ಕುಂಬಳಕಾಯಿ, ಕಲ್ಲಂಗಡಿ, ಕರಬೂಜ ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಹನಿನೀರಾವರಿ ಪದ್ಧತಿಯನ್ನು ಕೂಡ ಕೆಲವು ಪ್ರದೇಶಗಳಲ್ಲಿ ಅಳವಡಿಸಿಕೊಂಡು ಹೂವು, ಹಣ್ಣು, ತರಕಾರಿಗಳನ್ನು ಬೆಳೆಯುತ್ತಾರೆ. ಹೈನುಗಾರಿಕೆ, ಕುರಿಸಾಕಾಣಿಕೆ, ಮೇಕೆಸಾಕಾಣಿಕೆಯನ್ನೂ ಮಾಡುತ್ತಾರೆ. ತಮ್ಮದಿನನಿತ್ಯದ ಆಹಾರಕ್ಕಾಗಿ ರಾಗಿ ಮುದ್ದೆ, ರಾಗಿಕೊಟ್ಟಿ, ಅನ್ನ, ಜೋಳದ ರೊಟ್ಟಿ, ಸೊಪ್ಪಿನ ಸಾರು, ತರಕಾರಿ

ಸಾರುಗಳನ್ನು ಬಳಸುತ್ತಾರೆ. ಅಲ್ಲದೇ, ಹಾಲು, ಮೊಸರು, ಮಜ್ಜಿಗೆ, ತುಪ್ಪ, ಬೆಣ್ಣೆ, ಮುಂತಾದವುಗಳನ್ನು ಬಳಸುತ್ತಾರೆ. ಶೇಂಗಾಚಟ್ನಿ, ಹುಚ್ಚೆಳ್ಳುಚಟ್ನಿ, ಸಜ್ಜೆರೊಟ್ಟಿ, ನವಣೆ, ಅನ್ನ, ಜೋಳದ ಮುದ್ದೆ, ಮೂಲಂಗಿ, ಕ್ಯಾರೇಟ್, ಹಾಗಲಕಾಯಿ, ಬದನೆಕಾಯಿ, ಕುಂಬಳಕಾಯಿ, ಹಸಿಮೆಣಸಿನ ಕಾಯಿ, ಅವರೆಕಾಳು, ಆಲೂಗೆಡ್ಡೆ, ಬೀಟ್‌ರೂಟ್, ಬೀನ್ಸ್, ಪಡವಲಕಾಯಿ, ಈರೇಕಾಯಿ, ನುಗ್ಗೇಕಾಯಿ, ನುಗ್ಗೇಸೊಪ್ಪು, ಮೆಂತ್ಯೆಸೊಪ್ಪು, ಪಾಲಕಸೊಪ್ಪ, ದಂಟಿನಸೊಪ್ಪು, ತಬಾಕಸಿ ಸೊಪ್ಪು, ಕೊತ್ತಂಬರಿ ಸೊಪ್ಪು ಮುಂತಾದ ತರಕಾರಿ ಮತ್ತು ಸೊಪ್ಪುಗಳನ್ನು ಸಾರನ್ನು ತಯಾರಿಸಲು ಬಳಸುತ್ತಾರೆ. ಕಲ್ಲಂಗಡಿ, ಸೇಬು, ಕಿತ್ತಳೆ, ಮೊಸಂಬಿ, ದ್ರಾಕ್ಷಿ, ಬಾಳೆ, ಕರಬೂಜ, ಪೇರಲೆ ಮುಂತಾದ ಹಣ್ಣುಗಳನ್ನು ಬಳಸುತ್ತಾರೆ. ಬೇಡ ಸಮುದಾಯದವರು ಸಸ್ಯಾಹಾರಕ್ಕಿಂತಲೂ ಮಾಂಸಾಹಾರವನ್ನು ಹೆಚ್ಚಾಗಿ ಇಷ್ಟಪಟ್ಟು ಸೇವಿಸುತ್ತಾರೆ. ಕುರಿ, ಕೋಳಿ, ಮೇಕೆಯ ಮಾಂಸಹಾರವನ್ನು ಹೆಚ್ಚಾಗಿ ಬಳಸುತ್ತಾರೆ. ಹಬ್ಬ ಹರಿದಿನಗಳಲ್ಲಿ ಸಿಹಿ ಅಡುಗೆಯ ನಂತರದ ದಿನಗಳಲ್ಲಿ ಕುರಿ, ಕೋಳಿ, ಮೇಕೆಯ ಮಾಂಸಾಹಾರವನ್ನು ತಿನ್ನುತ್ತಾರೆ. ಮಾಂಸದ ಆಹಾರವೆಂದರೆ ಬೇಡರಿಗೆ ಅಚ್ಚುಮೆಚ್ಚಿನ ಆಹಾರವಾಗಿದೆ. ಹಸಿಮೀನು ಮತ್ತು ಒಣಮೀನುಗಳ ಮಾಂಸಾಹಾರವನ್ನು ಸೇವಿಸುತ್ತಾರೆ. ಕೋಳಿಯ ಮೊಟ್ಟೆ ಮತ್ತು ಮೊಟ್ಟೆಯಿಂದ ಮಾಡಿದ ಆಹಾರ ಪದಾರ್ಥಗಳನ್ನು ಸೇವಿಸುತ್ತಾರೆ. ಹಬ್ಬಹರಿದಿನಗಳಲ್ಲಿ ಕರಿಗಡಬು, ಕಜ್ಜಾಯ, ಹೋಳಿಗೆ, ಶಾವಿಗೆ, ಪಾಯಸ, ಉಪ್ಪಿಟ್ಟು, ಕೇಸರಿಬಾತ್, ಇತ್ಯಾದಿ ಸಿಹಿ ಮತ್ತು ಖಾರದ ಅಡುಗೆಗಳನ್ನು ತಯಾರಿಸಿಕೊಂಡು ಸಂಭ್ರಮದಿಂದ ಸೇವಿಸುತ್ತಾರೆ.

**ಬಟ್ಟೆಯನ್ನು ಧರಿಸುವ ಪದ್ಧತಿ**

ಬೇಡ ಸಮುದಾಯದವರು ಸಾಂಪ್ರದಾಯಿಕವಾದ ಉಡುಗೆಯನ್ನು ತೊಡುತ್ತಾರೆ. ಮಾನವನ ವಿಕಾಸವು ಹಂತ ಹಂತವಾಗಿ ಆಗಿದೆ. ಭಾರತದ ಕೆಲವು ಬುಡಕಟ್ಟು ಸಮುದಾಯಗಳು ಬಟ್ಟೆಯನ್ನು ಧರಿಸುವುದಿಲ್ಲ ಎಂದು ಮಾನವಶಾಸ್ತ್ರಜ್ಞರು ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ. ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ ಇರುವ ಬುಡಕಟ್ಟು ಸಮುದಾಯಗಳು ಬಟ್ಟೆಯನ್ನು ಇಂದಿಗೂ ಧರಿಸುವುದಿಲ್ಲ. ಆದಿಮಾನವನು ಬಟ್ಟೆಯನ್ನು ಧರಿಸುತ್ತಿರಲಿಲ್ಲ. ಮನುಷ್ಯನು ಆಲೋಚನಾ ಕ್ರಮದಲ್ಲಿ ಬದಲಾವಣೆಯಾಗಿ ತಮ್ಮ ಗುಪ್ತ ಅಂಗಗಳನ್ನು ಎಲೆ, ತೊಗಟೆಗಳಿಂದ ಮರೆಮಾಡುತ್ತಾ ಮೈಮೇಲೆ ಸಂಪೂರ್ಣ ಬಟ್ಟೆ ತೊಡುವವರೆಗೆ ಮಾನವನ ವಸ್ತ್ರಕ್ಕೆ ಸಂಬಂಧಿಸಿದ ಆಲೋಚನಾ ಕ್ರಮಗಳು ಬದಲಾಗುತ್ತಾ ಬಂದಿವೆ. ಬೇಡ ಸಮುದಾಯದ ಗಂಡಸರು ಲುಂಗಿ, ಪಂಚೆ, ಶರಟು, ಜುಬ್ಬಾ, ಟವೆಲ್, ಶಾಲುಗಳನ್ನು ಧರಿಸುತ್ತಾರೆ. ಹೆಂಗಸರು ಸೀರೆ, ಕುಪ್ಪಸ, ಲಂಗ, ದಾವಣಿ ಮುಂತಾದ ಬಟ್ಟೆಗಳನ್ನು ಧರಿಸುತ್ತಾರೆ. ಮಕ್ಕಳು ನಿಕ್ಕರ್, ಬನಿಯನ್, ಶರಟು, ಜಾಕೀಟು, ಲಂಗ ಮುಂತಾದ ಬಟ್ಟೆಗಳನ್ನು ಧರಿಸುತ್ತಾರೆ. ಆಧುನಿಕ ಕಾಲಕ್ಕೆ ತಕ್ಕಂತೆ ಗಂಡಸರು ಶರಟು, ಪ್ಯಾಂಟ್, ಸೂಟು, ಬೂಟು, ಟೀಶರ್ಟ್ ಮುಂತಾದ ಬಟ್ಟೆಗಳನ್ನು ಧರಿಸುತ್ತಾರೆ. ಹೆಂಗಸರು, ನೈಟಿ, ಚೂಡಿದಾರ್, ಶರಟು, ಪ್ಯಾಂಟು, ಟೀಶರ್ಟ್‌ಗಳನ್ನು ಧರಿಸುತ್ತಾರೆ. ಅಲಂಕಾರ ಪ್ರಿಯರಾದ ಹೆಂಗಸರು ಕಿವಿಗೆ ಕಿವಿಯೋಲೆ, ಮೂಗುತಿ, ಕತ್ತಿನ ಸರ, ತಾಳಿ, ಬಳೆ, ಕಾಲ್ಗೆಜ್ಜೆ, ಗೆಜ್ಜೆಪಟ್ಟಿ, ತೋಳಬಂದಿ, ಕಾಲುಂಗುರ, ಡಾಬು, ಜಡೆಬಿಲ್ಲೆ, ಬೈತಲಮಣಿ,

ಕಾಸಿನ ಸರ, ಕಡಗ, ಗಾಜಿನಬಳೆ ಮುಂತಾದ ಆಭರಣಗಳನ್ನು ಧರಿಸುತ್ತಾರೆ. ಈ ಆಭರಣಗಳು ಬೆಳ್ಳಿ ಬಂಗಾರದಿಂದ ತಯಾರಿಸಲ್ಪಟ್ಟಿರುತ್ತವೆ. ಗಂಡಸರು ಸಂದರ್ಭಕ್ಕೆ ತಕ್ಕಂತೆ ಬಂಗಾರ ಮತ್ತು ಬೆಳ್ಳಿಯಿಂದ ಮಾಡಿದ ಆಭರಣಗಳನ್ನು ಧರಿಸುತ್ತಾರೆ. ಕತ್ತಿನ ಸರ, ಕಿವಿಯ ಓಲೆ, ಕೈಕಡಗ ಮುಂತಾದ ಆಭರಣಗಳನ್ನು ಧರಿಸುತ್ತಾರೆ. ಮದುವೆ, ನಾಮಕರಣ ಮುಂತಾದ ಶುಭ ಸಂದರ್ಭಗಳು, ಹಬ್ಬ ಹರಿದಿನಗಳಂತಹ ಸಮಯಗಳಲ್ಲಿ ಗಂಡಸರು ಮತ್ತು ಹೆಂಗಸರು ವಿವಿಧ ರೀತಿಯ ವಸ್ತ್ರಗಳನ್ನು ಧರಿಸುತ್ತಾರೆ ಯಜಮಾನರುಗಳು ಪೇಟವನ್ನು, ಕಚ್ಚೆಪಂಚೆಯನ್ನು ಧರಿಸುತ್ತಾರೆ. ಮನೆಯಿಂದ ಹೊರಹೋಗುವ ಸಂದರ್ಭದಲ್ಲಿ ಕಾಲಿಗೆ ಚಪ್ಪಲಿಯನ್ನು ಧರಿಸುತ್ತಾರೆ.

**ನಾಟಿ ವೈದ್ಯ ಪದ್ಧತಿ**

ಬೇಡ ಬುಡಕಟ್ಟು ಸಮುದಾಯದವರು ತಮ್ಮದೇ ಆದ ನಾಟಿ ವೈದ್ಯಪದ್ಧತಿಯನ್ನು ಬಳಕೆ ಮಾಡಿಕೊಳ್ಳುತ್ತಾರೆ. ಪ್ರತಿಯೊಂದು ಬುಡಕಟ್ಟು ಸಮುದಾಯದವರೂ ಕೂಡ ತಮ್ಮದೇ ಆದ ನಾಟಿ ವೈದ್ಯ ಪದ್ಧತಿಯನ್ನು ಅನುಸರಿಸುತ್ತಾರೆ. ಈ ವೈದ್ಯಪದ್ಧತಿಯು ಆಧುನಿಕ ವೈದ್ಯಪದ್ಧತಿಯಾದ ಆಲೋಪತಿ ವೈದ್ಯಪದ್ಧತಿಗಿಂತಲೂ ಶ್ರೇಷ್ಠವೆಂದು ಬಳಸುತ್ತಾರೆ.

**ಮಕ್ಕಳಿಗೆ ಕೆಮ್ಮು ಆದರೆ** : ಲವಂಗ ಮೆಣಸು, ಒಂದು ಎಲೆ ತುಂಬು ತೆಗೆದುಕೊಂಡು ಸಾಣೆಕಲ್ಲಿನ ಮೇಲೆ ತೇದು, ತಾಯಿಯ ಮೊಲೆಹಾಲಿನಲ್ಲಿ ಬೆರೆಸಿ ಕುಡಿಸಿದರೆ ಕೆಮ್ಮು ನಿಲ್ಲುತ್ತದೆ.

**ಕಿವಿನೋವು ನಿವಾರಣೆ** : ಕಿವಿ ಸೋರುತ್ತಿದ್ದರೆ, ಕಿವಿಯಲ್ಲಿ ನೋವು ಆಗುತ್ತಿದ್ದರೆ, ಬೆಳ್ಳುಳ್ಳಿ ಎಸಳಿನಿಂದ ತೆಗೆದ ರಸವನ್ನು ಕಿವಿಯಲ್ಲಿ ಹಾಕಿದರೆ ಕಿವಿನೋವು ವಾಸಿಯಾಗುತ್ತದೆ ಕಾಮಕಸ್ತೂರಿ ಗಿಡದ ಎಲೆಗಳ ರಸವನ್ನು ತೆಗೆದು ಕಿವಿಯಲ್ಲಿ ಹಾಕಿದರೆ ಕಿವಿನೋವು ವಾಸಿಯಾಗುತ್ತದೆ.

**ಜ್ವರ ಬಂದಾಗ** : ಬೇವಿನ ಎಲೆಯ ರಸವನ್ನು ಅಥವಾ ಬೇವಿನ ಎಲೆಯ ತೊಗಟೆಯಿಂದ ತೆಗೆದ ರಸವನ್ನು ಕಾಯಿಸಿ ಕುಡಿದರೆ ಜ್ವರ ವಾಸಿಯಾಗುತ್ತದೆ.

**ವಾಂತಿ ಉಂಟಾದಾಗ** : ಯಾಲಕ್ಕಿಯನ್ನು ಬಿಸಿಮಾಡಿ ಪುಡಿಮಾಡಿ ಜೇನುತುಪ್ಪದೊಂದಿಗೆ ನೆಕ್ಕಿದರೆ ವಾಂತಿ ಕಡಿಮೆಯಾಗುತ್ತದೆ.

**ಕಫ** : ಈರುಳ್ಳಿ, ಬೆಳ್ಳುಳ್ಳಿ, ತುಳಸಿ ಎಲೆಗಳನ್ನು ಕುಟ್ಟಿ ಸೇವಿಸಿದರೆ ಕಫ ನಿವಾರಣೆಯಾಗುತ್ತದೆ.

**ಗಾಯಗಳು ಉಂಟಾದರೆ** : ಬಿಳಗಣಿಜಿಲೆ ಗಿಡದ ಎಲೆಗಳನ್ನು ಕೊಬ್ಬರಿ ಎಣ್ಣೆಯಲ್ಲಿ ಕುದಿಸಿದ ಎಲೆಗಳನ್ನು ಗಾಯದ ಮೇಲೆ ಹಾಕಿ ಬಟ್ಟೆಯಿಂದ ಕಟ್ಟಿದರೆ ಗಾಯ ವಾಸಿಯಾಗುತ್ತದೆ.

**ತಲೆನೋವು** : ಬೆಳ್ಳುಳ್ಳಿ, ಅರಿಶಿಣ, ಕೊಬ್ಬರಿ ಎಣ್ಣೆಯನ್ನು ಬಳಸಿ ಹದವಾಗಿ ಕುಟ್ಟಿ ಹಣೆಗೆ ಹಚ್ಚಿಕೊಂಡರೆ ತಲೆನೋವು ವಾಸಿಯಾಗುತ್ತದೆ.

**ಕಣ್ಣು ನೋವು** : ಗೊಳಗೊಳಕಿ ಗಿಡದ ರಸವನ್ನು ನಾಲ್ಕು ದಿನ ಕಣ್ಣಿಗೆ ಹಾಕಿದರೆ ಕಣ್ಣುನೋವು ಪರಿಹಾರವಾಗುತ್ತದೆ.

## ೨.೮ ಭಾಷೆ ಮತ್ತು ಸಾಹಿತ್ಯ

ಚಿತ್ರದುರ್ಗ ಜಿಲ್ಲೆಯ ಬೇಡ ಬುಡಕಟ್ಟು ಸಮುದಾಯದವರು ಮಾತೃಭಾಷೆಯಾಗಿ ಕನ್ನಡವನ್ನು ಮಾತನಾಡುತ್ತಾರೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಕನ್ನಡ ಮಿಶ್ರಿತ ತೆಲುಗು ಭಾಷೆ ಮತ್ತು ಸಂಪೂರ್ಣವಾಗಿ ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ಹಿರಿಯೂರು ತಾಲ್ಲೂಕಿನ ಕೆಲವು ಪ್ರದೇಶಗಳಲ್ಲಿ ಕನ್ನಡ, ತೆಲುಗು, ತಮಿಳು ಭಾಷೆಗಳನ್ನು ಮಾತನಾಡುತ್ತಾರೆ. ಹಿಂದಿನ ಕಾಲದಿಂದಲೂ ಬೇಡರು ತಮ್ಮ ಬೇಸರವನ್ನು ಕಳೆಯಲು ಕಥೆಗಳನ್ನು, ಸೋಬಾನೆ ಪದಗಳನ್ನು, ಲಾವಣಿಗಳನ್ನು ಹೇಳಿಕೊಂಡು ಬಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ದೂರದರ್ಶನ, ಚಲನಚಿತ್ರಗಳ ಪ್ರಭಾವ ಯುವಕರ ಮೇಲೆ ಆಗಿದೆ. ಮೊಬೈಲ್ ಫೋನ್‌ಗಳ ಬಳಕೆಯಿಂದ ಪಾಶ್ಚಿಮಾತ್ಯ ಸಂಸ್ಕೃತಿಗೆ ಇಂದಿನ ಯುವಜನಾಂಗ ಹೊಂದಿಕೊಳ್ಳುತ್ತಿರುವುದರಿಂದ ಬೇಡ ಬುಡಕಟ್ಟು ಸಮುದಾಯದ ಸಾಹಿತ್ಯದ ಬಳಕೆ ಕಡಿಮೆಯಾಗುತ್ತಿದೆ. ಆದಾಗ್ಯೂ ಬೇಡ ಸಮುದಾಯದ ಹಿರಿಯರ ನೆನಪಿನಲ್ಲಿ ಅಮೂಲ್ಯವಾದ ಬುಡಕಟ್ಟಿನ ಸಾಹಿತ್ಯ ಈಗಲೂ ಇದೆ. ಈ ಸಾಹಿತ್ಯವನ್ನು ವಿದ್ವಾಂಸರುಗಳು ತಮ್ಮಕೃತಿಗಳಲ್ಲಿ ನಮೂದಿಸಿದ್ದಾರೆ. ಕೆಲವು ಲೇಖಕರು ಸಾಹಿತ್ಯವನ್ನು ಸಂಗ್ರಹಿಸಿ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಬೇಡ ಬುಡಕಟ್ಟು ಸಾಹಿತ್ಯದ ಬಗ್ಗೆ ಹೆಚ್ಚಿನ ಸಂಶೋಧನೆಗಳು ಆಗಬೇಕಾದ ಅಗತ್ಯವಿದೆ. ಚಿತ್ರದುರ್ಗದ ಪ್ರದೇಶದಲ್ಲಿ ಗಾದ್ರಿಪಾಲನಾಯಕ, ಪಾಪನಾಯಕ, ಸಿರಿಯಣ್ಣ, ಯರ‍್ರಪ್ಪ, ಪಾತಪ್ಪ, ಚಿತ್ರಲಿಂಗ, ಕೆಂಚವ್ವ, ಕಾಮವ್ವ ಮುಂತಾದ ಸಾಂಸ್ಕೃತಿಕ ವೀರರ ಮೇಲೆ ಕಥನಗೀತೆಗಳು, ಕಥಾನಕಗಳು, ಸತಿಯರ ಮೇಲಿನ ಗೀತೆಗಳು, ಕಾವ್ಯಗಳು ಪ್ರಚಲಿತದಲ್ಲಿವೆ. ಪ್ರತಿಯೊಂದು ಕಥನಗೀತೆಯೂ ನೂರರಿಂದ ಮುನ್ನೂರು ತ್ರಿಪದಿಗಳವರೆಗೆ ವಿಸ್ತಾರವಾಗಿರುತ್ತವೆ.

**ಸತಿಗೀತೆ**

ಅರುಗೀದ ವಲದಾಗ ಸುರಹೊನ್ನೆ ಮಳೆಯಾಗ
ಅರುದೇ ಬರುತಾನೆ ಅವರಣ್ಣ ಕಾಟಣ್ಣ
ಅರವತ್ತು ಕೊಟ್ಟೇನು ನಿಲು ತಂಗಿ
ಅರವತ್ತು ಕೊಟ್ಟಾರೆ ತುರುಬೀನ ಬೆಲಿಯಿಲ್ಲ
ದುರುಗಾವಾಳೋರ ಮಗದೂರ ವೋಗಲುವಾಳ
ತಡೆಯಾದೆ ಕಿಚ್ಚ ಕೊಡಿರಣ್ಣ

ನಿಂಬೀಯ ಹಣ್ಣ ಅಂಬಾರ ಕೀಡಾಡುತ
ಬಂದೀಯ ತೋಳ ತಿರುವೂತ ಮುತ್ತಣ್ಣನ
ರೆಂಬೆ ಕೊಂಡಾಕ ನೆಡೆದಾಳ
ಪುರುಸಾನಿಲ್ಲ ದೋಳ ಸರಸಾವ ನೋಡೀರೆ
ಅರಿಷಿಣ ಬಾವಿಯವಳಮನೆ ಮುಂದೆ ಕಾಟವ್ವ
ಪುರುಸಾನಿದ್ದಾರೆಷ್ಟು ಮೆರೆದೀಯೆ

ತಾಳೀಯ ಸರವರಿದು ತಾಯಿಯ ಕೈಗೆ ಕೊಟ್ಟು
ತಾಯಮ್ಮ ನೀನು ಅಳದೀರೆ ವಡ್ಡಗೆರೆ
ಗಾಜೀನ ಕೊಂಡ ನಮಗಾದಾವು

ಮುತ್ತೀನ ಸರವರಿದು ಅತ್ತೆ ಕೈಗೆ ಕೊಟ್ಟು
ಅತ್ತೆಮ್ಮ ನೀನು ಅಳದೀರೆ ವಡ್ಡಗೆರೆ
ಕಿಚ್ಚೀನ ಕೊಂಡ ನಮಗಾದವು

**ಕಥನಗೀತೆ**

ಗದ್ಯಾಗೆ ಬೆಳೆಯೋದು ದೊಡ್ಡ ಗೋಣಿ ಸೊಪ್ಪು
ಅದ್ವಾನದ ಕೊಂಪೆ ಕೋಣಸಾಗರ
ಹಾಡು ಹಗಲಲ್ಲೇ ಅಸುಮಗನ ತಲೆ ತಗುದಾರು
ಉಳ್ಳಾಗಡ್ಡಿಯ ಸೀರೆ ಬೆಳ್ಳಿಕುಪ್ಪಸದ ಹೆಣ್ಣು
ತಟವಾಣಿ ಗೌರವ್ವ ಅಸುಮಗನ ಕೊಂದಾಳು
ಮುಗ್ಗೀದ ಜ್ವಾಳದ ರೊಟ್ಟಿ ಉಳ್ಳಾಗಡ್ಡಿ ಪಚಡೀಯ
ಲಜ್ಜೆ ಗೆಟ್ಟೋರು ತಳವಾರರು
ಗೌಡನ ತಲೆಯಾ ತಗುದಾರು

ಕೆಳಗೇರಿ ಕ್ಯಾದೀಗೆ ಮ್ಯಾಗೇರಿ ಮಲ್ಲೀಗೆ
ನಡುಗೇರಿ ಸಾಲೆ ಸಂಪಂಗಿ ಅಲ್ಲಿರುವ
ಅಣ್ಣಾ ಪಾಪಣ್ಣಗೆ ಕೈಗೂಡಿ ಬರುತಾವೆ

ಬೇಡರು ಚಿತ್ರದುರ್ಗ ಜಿಲ್ಲೆಯ ಸೂರನಹಳ್ಳಿಯ ದೊಡ್ಡ ಸೂರನಾಯಕ, ಓಬಳಪ್ಪ, ಕಂಪಳರಂಗ, ತಿಪ್ಪೇಸ್ವಾಮಿ, ಕಲ್ಲೇಶ್ವರ ಮುಂತಾದ ದೇವರು ಮತ್ತು ದೇವತೆಗಳ ಮೇಲೆ ಸ್ತುತಿಗೀತೆಗಳನ್ನು ಹೆಂಗಸರು ಹಾಡುತ್ತಾರೆ. ಈ ಸ್ತುತಿಗೀತೆಗಳಲ್ಲಿ ದೇವರು ಜಲಧಿಗೆ ಹೋಗುವುದು. ಜಲಧಿಯಿಂದ ಮೆರವಣಿಗೆಯೊಂದಿಗೆ ಊರಿನ ಬೀದಿಗಳಲ್ಲಿ ಹೋಗುವುದು ನಂತರ ದೇವಸ್ಥಾನಕ್ಕೆ ಬಂದು ಗರ್ಭಗುಡಿಯನ್ನು ಸೇರುತ್ತದೆ. ಈ ಸಂದರ್ಭಗಳನ್ನು ಸ್ತುತಿಗೀತೆಗಳು ಅಥವಾ ಸ್ತುತಿ ಪದಗಳು ವಿವರಿಸುತ್ತವೆ.

**ನಲಗೇತಲಹಟ್ಟಿಯ ದೇವರು ಚನ್ನಕಾಸಯ್ಯನ ಸ್ತುತಿಗೀತೆ**

ಅಟ್ಟೀಯ ಹಿಂದಾಲ ಚಟ್ಟನ್ನ ಹೊಂಬಾಳೆ
ಮತ್ಯಾರು ಹೋಗಿ ಕಡಿಸ್ಯಾರೆ। ಕಾರೇಲೋರು
ಹೆಚ್ಚಿದೊಕ್ಕಾಲು ಕಡಿಸ್ಯಾರೆ
ಆಯವುಳ್ಳ ತ್ವಾಟಕ ಸಯವುಳ್ಳ ಏಣಿನಾಕಿ
ಗಂಜೀ ಯಚ್ಚಡವ ಮಡಲೊಡ್ಡಿ। ಬೋರಯ್ಯ
ಅಣ್ಣಯ್ಯಗೂವ ಕೊಯ್ದಾನೆ
ಎಲ್ಲಿಂದ ತಂದೂವು ವಲ್ಲಾನೆ ಚೆನ್ನಯ್ಯ
ಅಲ್ಲೇ ನಿಡುಗಲ್ಲು ಅಳಗೀನ। ಕಾಲ್ಯದೂವು
ಮುತ್ತೀನ ಸರವೆಂದೇ ಮುಡಿದಾನೆ
ಅಪ್ಪೇನ ಚನ್ನಯ್ಯ ಗಂಗೇ ಗೋಗಲುವಾಗ
ಗಂಭೀರ ಕಾಣೆ ಮಡಿವಾಳ। ಚನ್ನಯ್ಗೆ
ಗಂಜೀಯ ಸ್ಯಾಲೆ ನಡೆಮುಡಿ

ಚಿತ್ರದುರ್ಗದ ಪಾಳೆಯಗಾರನಾದ ಹಿರೇಮದಕರಿನಾಯಕನು ಮಾಯಕೊಂಡ ಯುದ್ಧದಲ್ಲಿ ಮಡಿದ ಸಂದರ್ಭವನ್ನು ಹೇಳುವ ವೀರಗೀತೆ ಈ ರೀತಿ ಇದೆ.

ಮಾಯಕೊಂಡದಾಗೆ ಮಾಗುಡಿ ಬಯಲಾಗೆ
ರಣಭೂಮಿಗೆ ಆನೆ ನಡೆಸಿದರು।
ರನ್ನದ ಕೋಲು।
ಸಿತ್ತೆಮಳೆ ಸುರಿದಂಗೆ ಹತ್ತಿ ಬಂದಾವು ಬಾಣ
ಸೂರಿದನ ರವೆಯ ಕಾಣದೆ। ರನ್ನದ ಕೋಲು
ಬಾಣಬತ್ತಳಿಕೆಯೆಲ್ಲ ಕೈಬಿಟ್ಟು ಹೋದಾಗ
ತಗೊಳ್ಳೋ ಸಂಕ ಕತ್ತೀಯಾ। ರನ್ನದ ಕೋಲು
ಮಾಯಕೊಂಡದಾಗೆ ಮಾಗುಡಿ ಬಯಲಾಗೆ
ರಣ ಭೂಮ್ಯಾಗೆ ಸಮಾಧಿ ಮಾಡಿದಾರೋ। ರನ್ನದ ಕೋಲು

ಚಿತ್ರದುರ್ಗ ಸಂಸ್ಥಾನದ ಕೊನೆಯ ಪಾಳೆಯಗಾರ, ಅಪ್ರತಿಮ ಪರಾಕ್ರಮಿಯಾಗಿದ್ದ ರಾಜಾವೀರ ಮದಕರಿನಾಯಕ ಮತ್ತು ಹೈದರಾಲಿಯ ಮಧ್ಯದ ಯುದ್ಧದಲ್ಲಿ ಮದಕರಿನಾಯಕ ಸೋಲುತ್ತಾನೆ. ಈ ಪಾಳೆಯಗಾರನ ಮೇಲೆ ಅನೇಕ ವೀರಗೀತೆಗಳು ಇವೆ. ಚಿತ್ರದುರ್ಗದ ಪ್ರಮುಖ ದೇವರು, ದೇವತೆಗಳಾದ ಉಚ್ಚಂಗಿ ಎಲ್ಲಮ್ಮ, ಏಕಾನಾಥೇಶ್ವರಿ, ಸಂಪಿಗೆ ಸಿದ್ದೇಶ್ವರ, ನೀಲಕಂಠೇಶ್ವರ, ಮುರುಘರಾಜೇಂದ್ರ ಸ್ವಾಮಿಗಳ ಮೇಲೆ ಅನೇಕ ಸ್ತುತಿಗೀತೆಗಳು ಮತ್ತು ಭಕ್ತಿಗೀತೆಗಳಿವೆ. ಬೇಡರ ಮದುವೆ, ಸೀಮಂತ, ಜನನ, ಋತುಮತಿಯಂತಹ ಸಂದರ್ಭಗಳಲ್ಲಿ ಬೇಡ ಮಹಿಳೆಯರು ಸೋಬಾನೆ ಪದಗಳನ್ನು ಹಾಡುತ್ತಾರೆ.

**ಸೋಬಾನೆ ಪದಗಳು**

೧

ಪಟ್ಟೇದನ್ನ ಸೀರೆ ಮೆಲುಜರುಗು
ಉಡುವಾಗ ಅವರಕ್ಕ ಕಂಡಾಳೆ
ನಿಜಗೆಂಪು ಸೋಬಾನವೇ।
ಅವರಕ್ಕಾ ಕಂಡಾಳೆ ನಿಜಗೆಂಪು
ತಂಗಿ ನೀನು ಪಟ್ಟೆ ಸಾಲುಗಳ
ಇಳಿಯಮ್ಮ ಸೋಬಾನವೇ।
ತಮ್ಮಾನೆ ಹಿಡಿದಿದ್ದ ತನಿಯಣ್ಣು
ದಾಳಿಂಬರದ ಹಣ್ಣೊಡೆದ ಮೇಲೆ
ಸಡಿಲಾವೆ ಸೋಬಾನವೇ।
ಹಾಲೇನೆ ಕಾಸ್ಯಾಳೆ ನಿಲುವಿಗಿಟ್ಯಾಳೆ
ಆಡಿಬಂದ ತಮ್ಮಗೆ ಉಣಲಿಟ್ಟೆ
ಉಣಲಿಟ್ಟೆ ಸೋಬಾನವೇ।
ಆಡಿಬಂದ ತಮ್ಮಗೆ ಉಣಲಿಟ್ಟೆ
ತಾನೆ ಬಂದು ಯತಿವಾರಣವಂತಿ
ಮೈನೆರೆತು ಸೋಬಾನವೇ।

೨

ನಾಡೀಗೆ ದೊಡ್ಡೋರಮಗಳು ಲಸುಮಮ್ಮ
ನೀರಿಲ್ಲ ತಾಗ ನೀರಾಗಿ ಬಂದು
ನೀರಾಗಿ ಬಂದು ಸೋಬಾನವೇ।
ಎರಕಂಡಾ ಮಗಳೀಗೆ ತಂದುಕೊಡಿರಿ
ಜವಳೀಯಾ ಪೆಂಡೇದಾಗೊಂದು
ವಸ್ತ್ರವು ಸೋಬಾನವೇ।
ಅತ್ತೇಯಾ ಮಗನು ತಿಮ್ಮಣ್ಣಾಗೆ
ಉಪ್ಪರಿಗೆ ಮುಂದೆ ಮೆರುವಣಿಗೆ
ಮೆರುವಣಿಗೆ ಸೋಬಾನವೇ।
ಕಾಡುಗತ್ತಲಾಗೆ ಚಂದುರನ ಬೆಳಕೀಲಿ
ಮಾಡುವರ್‍ಯಾರೆ ಒಸಗೀಯ
ಒಸಗೀಯ ಸೋಬಾನವೇ।
ಮಣಿಯರಳ ಪಾರ್ವತಿದೇವಿ
ಮುನಿಗಳು ಬಂದೈದಾರೆ ಮಣೆಯಾಕಿ
ಮುತ್ತು ನೀಡೀರೆ ಸೋಬಾನವೇ।
ಬಾಗಿಲ ಮೇಲೆರಡು ಅರಗಿಣಿ
ಸುರಗಿಣಿ ಸೋಬಾನದ ನುಡಿಯ
ನುಡಿದಾವೆ ಸೋಬಾನವೇ।
ಅರಿಷಿಣ ಹಚ್ಚೀರಿ ವೀರಗೊಮಾರಗೆ
ದೇವಿ ತೇರೊಡೆದ ಮಗನೀಗೆ
ಮಗನೀಗೆ ಸೋಬಾನವೇ।
ವಿಭೂತಿ ಹಚ್ಚೀರಿ ಇಂದ್ರಗೊಮಾರಗೆ
ಚಂದ್ರಮತಿ ಹಡೆದ ಮಗನೀಗೆ
ಮಗನೀಗೆ ಸೋಬಾನವೇ।

೩

ಮುದ್ದೀನ ಮೊಮ್ಮಗನ ಅಸೆಯಾನೇರಿ ಬೊಮ್ಮಣ್ಣ
ಹೊಸಮುತ್ತಿನ ಚಳೆಯಾ ಕೊಡಿರಣ್ಣ
ಕೊಡಿರಣ್ಣ ಸೋಬಾನವೇ।
ಆಸೇಲಿ ಐವರು ಬನ್ನಿ ಈಸೇಲಿ ಐವರು ಬನ್ನಿ
ಜಾತಿಹೊನ್ನುಗಳಾ ನಡುವಿಟ್ಟು
ನಡುವಿಟ್ಟು ಸೋಬಾನವೇ।

೪

ಅಂಕಾದ ಕೆರಿಯಾಗೆ ಬಂಕಾದ ಗೂಡಾರೊಯ್ದು
ಅಲ್ಲೇ ನಿಮ್ಮಳಿಯ ಬರುತಾನೆ
ಬರುತಾನೆ ಸೋಬಾನವೇ।
ಅಲ್ಲೇನೆ ನಿಮ್ಮಳಿಯಾ ಬರುತಾನೆ
ಮಾರಕ್ಕ ಮಲ್ಲೀಗೆ ಮುಡಿಸೆ
ಮಗಳೀಗೆ ಸೋಬಾನವೇ।

ಮಲ್ಲೀಗೆ ಮುಡಿಸೇನು ಒಡಲಕ್ಕಿ ಹಾಕೇನು
ಎನ್ನಿಂದೆ ಮಗಳೆ ಎರವಾದೆ
ಎರವಾದೆ ಮಗಳೆ ಸೋಬಾನವೇ।
ತುಪ್ಪ ಅನ್ನ ಅಕ್ಕಿ ಸಲುವೀದೆ ಮಗಳೆ
ಅಡುಗೆ ಮನೆಗೆರವಾದೆ
ಎರವಾದೆ ಸೋಬಾನವೇ।
ಕಾಸು ನಿಮ್ಮದಾಯ್ತು ಕೂಸು ನಿಮ್ಮದಾಯ್ತು
ಕಾಸೀನ ಬರಣಿ ಬರಿದಾಯ್ತು
ಬರಿದಾಯ್ತು ಸೋಬಾನವೇ।
ಹೊನ್ನು ನಿಮದಾಯ್ತು ಹೆಣ್ಣು ನಿಮದಾಯ್ತು
ಹೊನ್ನೀನ ಬರಣಿ ಬರಿದಾಯ್ತು
ಬರಿದಾಯ್ತು ಸೋಬಾನವೇ।
ಹೊನ್ನೀನ ಬರಣಿ ಬರಿದಾಯ್ತು ಮಾರಕ್ಕ
ಹೆಣ್ಣಿನೋರ ತಾಯಿ ಅಳದೀರಿ
ಅಳದೀರಿ ಸೋಬಾನವೇ।

೫

ಅಡುಗೀಯ ಮನೆಯಾಗ ಇರುವೋಳೆ
ಕರೆತನ್ನಿ ಉಡುಗೆ ಬಂಗಾರದ ಚೆಲುವೀಯ
ಚೆಲುವೀಯ ಸೋಬಾನವೇ।
ಉಡುಗೆ ಬಂಗಾರದ ಚೆಲುವೆ
ರತ್ನಮ್ಮನ ಎಡಗೈ ಹಿಡಿದು ಕರತನ್ನಿ
ಕರತನ್ನಿ ಸೋಬಾನವೇ।
ಎಡಗೈ ಹಿಡಿದಾರೆ ಅದಿರ‍್ಯಾಳೆ
ಬೆದಿರ‍್ಯಾಳೆ ಕೊಡನಾ ನೀರಿಗಾಗಿ
ಬೆವುತಾಳೆ ಸೋಬಾನವೇ।

**ಗಂಗೆ ಪೂಜೆಯ ಹಾಡು**

ತಾಯಿ ಗಂಗಮ್ಮಗೆ ಗೋದಿಯ ಉಡಿಯಕ್ಕಿ
ತೋದ ಮಲ್ಲಿಗೆ ನೆನೆದಂಡೆ ಸುವ್ವಯೋ ಲಿಂಗ ಸುವ್ವಯೋ
ತೋದ ಮಲ್ಲಿಗೆ ನೆನೆದಂಡೆ ಕಳಿವ್ಯಾರೆ
ಚಿಕ್ಕಾನೆಗೊಂದಿ ದೊರೆಗಳೇ ಸುವ್ವಯೋ ಲಿಂಗ ಸುವ್ವಯೋ
ತಾಯಿ ಗಂಗಮ್ಮಗೆ ಗೋದಿಯ ಉಡಿಯಕ್ಕಿ
ತೋದ ಮಲ್ಲಿಗೆ ನೆನೆದಂಡೆ ಸುವ್ವಯ್ಯೋ ಲಿಂಗ ಸುವ್ವಯ್ಯೋ

ಅಕ್ಕ ಗಂಗಮ್ಮಗೆ ಅಕ್ಕಿಯ ಉಡಿಯಕ್ಕಿ
ನಿಚ್ಚಾನೇ ಮಲ್ಲಿಗೆ ನೆನೆದಂಡೆ ಸುವ್ವಯ್ಯೋ ಲಿಂಗ ಸುವ್ವಯೋ
ತಾಯಿ ಗಂಗಮ್ಮಗೆ ಗೋದಿಯ ಉಡಿಯಕ್ಕಿ
ತೋದ ಮಲ್ಲಿಗೆ ನೆನೆದಂಡೆ ಸುವ್ವಯೋ ಲಿಂಗ ಸುವ್ವಯೋ
ಏತ್ಲಾಡಾ ಬಡಿಗೇರಣ್ಣಾ ತುಪ್ಪ ಬಾನ ಉಂಡು
ಮುತ್ತಿನ ಉಟ್ಟ ಹೆಗಲಮ್ಯಾಲೇ ಸುವ್ವಯ್ಯೋಲಿಂಗ ಸುವ್ವಯೋ

ತಾಯಿ ಗಂಗಮ್ಮಗೆ ಗೋಧಿಯ ಉಡಿಯಕ್ಕಿ
ತೋದ ಮಲ್ಲಿಗೆ ನೆನೆದಂಡೆ ಸುವ್ವಯ್ಯೋ ಲಿಂಗ ಸುವ್ವಯ್ಯೋ
ಮುತ್ತಿನ ಉಟ್ಟ ಹೆಗಲಮ್ಯಾಲೆ ಇಟಗೊಂಡೆ
ಅಕ್ಕ ಗಂಗಮ್ಮ ತೆರೆ ಹೊಡೆದೆ ಸುವ್ವಯ್ಯೋ ಲಿಂಗ ಸುವ್ವಯ್ಯೋ
ತಾಯಿಗಂಗಮ್ಮಗೆ ಗೋಧಿಯ ಉಡಿಯಕ್ಕಿ
ತೋದ ಮಲ್ಲಿಗೆ ನೆನೆದಂಡೆ ಸುವ್ವಯ್ಯೋ ಲಿಂಗ ಸುವ್ವಯ್ಯೋ
ತೋದ ಮಲ್ಲಿಗೆ ನೆನೆದಂಡೆ ಕಳಿವ್ಯಾರೆ
ರಾಮಸಾಗರದ ಮಠದೋರು ಸುವ್ವಯ್ಯೋಲಿಂಗ ಸುವ್ವಯ್ಯೋ
ತಾಯಿ ಗಂಗಮ್ಮಗೆ ಗೋಧಿಯ ಉಡಿಯಕ್ಕಿ
ತೋದ ಮಲ್ಲಿಗೆ ನೆನೆದಂಡೆ ಸುವ್ವಯ್ಯೋ ಲಿಂಗ ಸುವ್ವಯ್ಯೋ
ಏತ್ಲಾತಾ ಬಡಿಗೇರಣ್ಣಾ ಹಾಲು ಬಾನ ಉಂಡು
ಹಾಯಿ ಉಳ್ಳ ಉಟ್ಟು ಹೆಗಲಮ್ಯಾಲೆ ಸುವ್ವಯ್ಯೋ ಲಿಂಗ ಸುವ್ವಯ್ಯೋ
ಕಪ್ಪೆದಂಡೆ ಬಂದು ಚಪ್ಪರಕೆ ನಿಂತಾವೆ
ಅಕ್ಕಗಂಗಮ್ಮ ಕರೆಕಾಳೆ ಸುವ್ವಯ್ಯೋ ಲಿಂಗ ಸುವ್ವಯ್ಯೋ
ತಾಯಿ ಗಂಗಮ್ಮಗೆ ಗೋಧಿಯ ಉಡಿಯಕ್ಕಿ
ತೋದ ಮಲ್ಲಿಗೆ ನೆನೆದಂಡೆ ಸುವ್ವಯ್ಯೋ ಲಿಂಗ ಸುವ್ವಯ್ಯೋ
ಅಕ್ಕ ಗಂಗಮ್ಮ ಕರೆಕಾಳೆ ನಿಮ್ಮ ರಾಯರು
ತುಪ್ಪಿಲ್ಲದ ಊಟ ಉಣವಲ್ಲ ಸುವ್ವಯ್ಯೋ ಲಿಂಗ ಸುವ್ವಯ್ಯೋ
ನಾಕೇನಾ ಮೂಲಿಗೆ ನಾಕೇನಾ ಬಾಳೆಕಂಬಾ
ಹಾಕ್ಯಾಡುತ್ತಾವೆ ಕುರಿಕೋಣ ಸುವ್ವಯ್ಯೋ ಲಿಂಗ ಸುವ್ವಯ್ಯೋ
ತಾಯಿ ಗಂಗಮ್ಮಗೆ ಗೋಧಿಯ ಉಡಿಯಕ್ಕಿ
ತೋದ ಮಲ್ಲಿಗೆ ನೆನೆದಂಡೆ ಸುವ್ವಯ್ಯೋ ಲಿಂಗ ಸುವ್ವಯ್ಯೋ
ಹಾಕ್ಯಾಡುತ್ತಾವೆ ಕುರಿಕೋಣ ಊರಮ್ಮ
ತಾ ಕುಂತ ಸೆರಿಯಾ ಬಿಡಿಸ್ಯಾಳೆ ಸುವ್ವಯ್ಯೋ ಲಿಂಗ ಸುವ್ವಯ್ಯೋ

**ತೊಟ್ಟಿಲ ಹಾಡು**

೧

ರಾಮಲಾಲಿ ಮೇಗಾ ಶಾಮಲಾಲಿ
ತಾಮಾರಸಾ ಮೈಮಾದಸರತ ತನಿಯಾಲಾಲಿ
ಅಣ್ಣಿಟೀಕಿ ಮೂಲ ಮೈಮಾ ಆದಿ ವಿಷ್ಣುನೀ
ಅಂತಕಾವಿ ಸಾಕಿ ಪಟ್ನಾ ವಿಜಯ ರಾಘವಾ
ಅರ್ಜುನ ಅದನಾ ಆಟನಾಡಿ ಅಳಿಸಿನಾ ಊರು
ಕೃಷ್ಣಬಜ್ಜು ಲೋಲ ಪಾಲ ಹರಗ ಸೂಲಲೇದಾರಾ ವಿಜಯಾ ರಾಘವಾ
ರಾಮ ಮೇಗಾ ಶಾಮಲಾಲಿ
ನಿದ್ರಿಯ ಪೂವಯ್ಯ ರಾಧ ರುಕ್ಮಿಣಿ ಸತ್ಯ ಭಾಮಿನಿ ಲಾಲಾ ಲಾಲಿ

೨

ಜೋ ಜೋ ಅಂದಾಳ ಗೋಪಿ ಜೋ ಜೋ
ಜೋ ಜೋ ಅಂದಾಳ ಗೋಪಿ ಜೋ ಜೋ
ಹಡದಾಳ ಬಾಣತಿ
ಕುಡಿದಾಳ ಕುಡಿತುಪ್ಪಾ

ಹಿಡಿದಾಳೆ ಬೇವು
ಕುಡುಗೋಲೆ ಕೈಯೊಳಗೆ
ಸುತ್ತಾಲ ದೇವರಿಗೆ ಎತ್ತಿ ಕೈಯ ಮುಗಿದೆ
ಈಗ ಮುಕ್ಕಣ್ಣ ಗತಿಯೆಂದು ಹೊಕ್ಕಾಳೆ ಕೋಲೆ ಜೋ ಜೋ
ಹತ್ತಿಯ ಮರವಾ ಕೆತ್ತಣ್ಣ ಬಡಗಿ
ಕೆತ್ತುತಲೀ ಮುತ್ತೇ
ಬಿಗಿಯಣ್ಣ ಬಡಗಿ
ಮ್ಯಾಗಳ ಕೊಂಡಿ ಮಾಣಿಕ್ಯಾದರಳೆ
ಮ್ಯಾಗ ಸಿರಿರಾಮರ ಓದುವ ಹಲಗೆ ಜೋ ಜೋ
ಆಲದ ಮರವಾ
ಸಿಳ್ಳೆಣ್ಣ ಬಡಗಿ
ಮ್ಯಾಗಳ ಕೊಂಡಿ ಮಾಣಿಕ್ಯಾದರಳೆ
ಇದು ಮತ್ತು ಸಿರಿರಾಮರ ಓದುವ ಹಲಗೆ ಜೋ ಜೋ
ಬಡಿಗೇರ ಮನೆ ಮುಂದೆ ಅವರೆಡು ಸಡಗರದ ವಾಲಿಕಂಬ
ಬಡಿಗೇರ ರಾಘಪಾಡ ಹೂವಾಲಿ ಎದ್ದು ಹೋದವು ಲಂಕಿಗೆ
ತೂಗು ತೂಗೂವಾಲೆ ಹಂಪಿಯ ನಾಮ ನಿತ್ಯ ದೈವವೇ
ಕಂಚಗಾರ ಮನೆಯ ಮುಂದೆ
ಅವೆರಡು ಕಂಚಿನ ವಾಲೆ ಕಂಬ
ಕೆಂಚೇರ ರಾಘವಾಡ ಹೂವಾಲಿ ಎದ್ದು ಹೋದವು ಲಂಕಿಗೆ
ತೂಗುತೂಗ್ಯಾವಾಲೆ ಹಂಪಿಯ ನಾಮನಿತ್ಯ ದೈವವೇ
ತುಪ್ಪದಾ ಸ್ಯಾಲೆಗೆ ಮುತ್ತಿನ ಗುಗ್ಗರಿಗಾಕಿ
ಪಟ್ಟಣ ಸ್ಯಾಲೆಗೆ ಸುರಿವ್ಯಾರೆ ಜೋ ಜೋ
ಪಟ್ಟಣ ಸ್ಯಾಲೆಗೆ ಸುರಿವಿದೆ ಗುಗ್ಗರೀ
ನಿತ್ರಿಯರು ಉಡಲಿ ಜಡರುತಾ
ತೊಟ್ಟಿಲ ಹಗ್ಗ ಹೊಕ್ಕುಳು ಬನ್ನಿದೇವಿ ಗಡರಂಗಳಾ ಜೋ ಜೋ

**ಗಾದೆಗಳು**

೧. ಕುಲಕ್ಕೆ ಕುಲವೇ ಮೂಲ, ಕುಂಟೆತ್ತು ಹೊಲಕ್ಕೆ ಮೂಲ

೨. ರಾಸಿಗೆ ಮೇವಿಲ್ಲ, ಬೇಡನಿಗೆ ಮದ್ದಿಲ್ಲ.

೩. ಗುರುವಿಲ್ಲದ ಮಠ, ಹಿರಿಯರಿಲ್ಲದ ಮನೆ ಒಂದೇ.

೪. ಗತಿಯಿಲ್ಲದ ಮುಂಡೆ ಲತೂಡಿ ನೆಕ್ಕಿದಳು.

೫. ರೊಟ್ಟಿ ಯಾವ ಕಡೆ ಕಡಿದರೇನು.

೬. ಆಸೆಗೆ ಮಿತಿಯಿಲ್ಲ, ಭಿಕ್ಷುಕನಿಗೆ ನಾಚಿಕೆಯಿಲ್ಲ.

೭. ಹಚ್ಚಗಿದ್ದ ಕಡೆ ಉಂಡನು, ಬೆಚ್ಚಗಿದ್ದ ಕಡೆ ಮಲಗಿದನು.

೮. ಕೊಬ್ಬಿದ ಬೇಡ ಬೇಲಿಗೆ ಎಟ್ಟಿದ.

೯. ಜಾಲಿ ಸಾಕಿದರೆ ಕಾಲಿಗೆ ಮೂಲ, ಬೇಡನನ್ನು ಸಾಕಿದರೆ ಜೀವಕ್ಕೆ ಮೂಲ.

೧೦. ಕಟ್ಟಿದ ಮೋಡವ ಗಾಳಿಯೆದ್ದು ಕೆಡಿಸಿತು.

೧೧. ಕಾರೇ ಗಿಡದಲ್ಲಿ ಹೊಂಬಾಳೆ ಬಯಸಿದಂತೆ.

೧೨. ಎಲ್ಲಾ ಕಾಟಕ್ಕಿನ್ನ ಲೊಟಕಪ್ಪನ ಕಾಟ ದೊಡ್ಡದು.

೧೩. ತೊಗಲು ಮುಕಳಿಯವ ಮುಗಿಲು ಸುದ್ದಿ ಏನು ಬಲ್ಲ.

೧೪. ನಡಕೊಂಡವರು ಪಡಕೊಂಡರು.

೧೫. ತಾಯಿಗಿಂತ ದೇವರಿಲ್ಲ ಉಪ್ಪಿಗಿಂತ ರುಚಿಯಿಲ್ಲ.

೧೬. ತಾನು ಮಾಡಿದ್ದು ಇರೋತನಕ, ದೇವರು ಮಾಡಿದ್ದು ಕೊನೆತನಕ.

೧೭. ಅಂಗೈ ಹುಣ್ಣಿಗೆ ಕನ್ನಡಿ ಬೇಕೇ.

೧೮. ಅತಿಯಾದರೆ ಅಮೃತವೂ ಕೂಡ ವಿಷ.

೧೯. ಅತ್ತೆಗೊಂದು ಕಾಲ ಸೊಸೆಗೊಂದು ಕಾಲ.

೨೦. ಅಜ್ಜಿಗೆ ತಾತನ ಚಿಂತೆ, ಮೊಮ್ಮಗಳಿಗೆ ಮಿಂಡನ ಚಿಂತೆ.

೨೧. ಆಚಾರ ಹೇಳಲಿಕ್ಕೆ ಬದನೇಕಾಯಿ ತಿನ್ನಲಿಕ್ಕೆ.

೨೨. ಊಟಕ್ಕಿಲ್ಲದ ಉಪ್ಪಿನಕಾಯಿ, ಶೆಂಟಕ್ಕೆ ಸಮ.

೨೩. ಊರಿಗೆ ಬಂದವಳು ನೀರಿಗೆ ಬರದೇ ಇರುವಳೇ.

೨೪. ಉಪ್ಪರಿಗೆ ಹೋಗಿ ತಿಪ್ಪೆ, ತಿಪ್ಪೆ ಹೋಗಿ ಉಪ್ಪರಿಕೆ.

೨೫. ತಿನ್ನಲಿಲ್ಲ, ಉಣ್ಣಲಿಲ್ಲ, ತುಣ್ಣಿಬಂದು ಹಣೆಗೆ ಬಡೀತು.

೨೬. ಕೋಟಿವಿದ್ಯೆಗಿಂತ ಮೇಟಿ ವಿದ್ಯೆ ಮೇಲು.

೨೭. ಕೈಕೆಸರಾದರೆ, ಬಾಯಿ ಮೊಸರು.

೨೮. ಕಣ್ಣು ಇದ್ದರೆ ಕನಕಗಿರಿ ನೋಡು, ಕಾಲು ಇದ್ದರೆ ಹಂಪಿ ನೋಡು.

೨೯. ಕಬ್ಬಿಣವನ್ನು ಕಾದಾಗಲೇ ಬಡಿಯಬೇಕು.

೩೦. ಬಿದ್ದವರ ಮೇಲೆ ಬಿತ್ತು ಬೀಸುವ ಕಲ್ಲಿನ ಗೂಟ.

೩೧. ಹಾಡುತ್ತಾ ಹಾಡುತ್ತಾ ರಾಗ, ಉಗುಳುತ್ತಾ ಉಗುಳುತ್ತಾ ರೋಗ.

೩೨. ಎದ್ದರೆ ಕಾಲು ಹಿಡಿಯುತ್ತಾರೆ, ಕುಂತರೆ ಜುಟ್ಟು ಹಿಡಿಯುತ್ತಾರೆ.

೩೩. ಕೊಲ್ಲುವವನು ಒಬ್ಬನಿದ್ದರೆ, ಕಾಯುವವನು ಒಬ್ಬನಿರುತ್ತಾನೆ.

೩೪. ಬೇಕಿಲ್ಲದ ಗಂಡನ ಜೊತೆ ಬಾಳ್ವೆ ಮಾಡಿದಂತೆ.

೩೫. ಬೆಟ್ಟ ಅಗೆದು ಇಲಿ ಹಿಡಿದರು.

೩೬. ಹಗ್ಗಕೊಟ್ಟು ಕೈಕಟ್ಟಿಸಿಕೊಂಡಂತೆ.

೩೭. ಹಾಸಿಗೆ ಇದ್ದಷ್ಟು ಕಾಲು ಚಾಚು.

೩೮. ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು.

೩೯. ದಾರಿಯಲ್ಲಿ ಹೋಗೋ ಮಾರಿ ಮನೆ ಒಳಗೆ ಬಂತು.

೪೦. ಯಾರದೊ ದುಡ್ಡು ಎಲ್ಲಮ್ಮನ ಜಾತ್ರೆ.

೪೧. ಗಂಡ ಸತ್ತ ಮೇಲೆ ಹೆಂಡ್ತಿಗೆ ಬುದ್ಧಿ ಬಂತು.

೪೨. ಗುಬ್ಬಿ ಮೇಲೆ ಬ್ರಹ್ಮಾಸ್ತ್ರ ಬಿಡಬಾರದು.

೪೩. ಪಾಲಿಗೆ ಬಂದದ್ದು ಪಂಚಾಮೃತ

೪೪. ಮಳೆಗಾಲದಲ್ಲಿ ಛತ್ರಿ ಮರೆಯಬಾರದು, ಚಳಿಗಾಲದಲ್ಲಿ ಹೆಂಡತಿ ಮರೆಯಬಾರದು.

೪೫. ಮದುವೆ ಮಾಡಿನೋಡು, ಮನೆಕಟ್ಟಿ ನೋಡು.

**ಒಗಟುಗಳು**

೧. ಹಸಿರು ಗಿಡಕ್ಕೆ ಮೊಸಲು ಚೆಲ್ಲಿದ್ದಾರೆ – ಮಲ್ಲಿಗೆ ಹೂವು

೨. ಸಾಲು ಮರದಲ್ಲಿ ಕೋಲು ಹಾಕುತ್ತಾರೆ – ಕಣ್ಣುರೆಪ್ಪೆ

೩. ಸಣ್ಣ ಮಣಿಗೆ ಚಕ್ಕೆ ತುಂಬಿದ್ದಾರೆ – ಹಲ್ಲು

೪. ಮಣೆ ಮೇಲೆ ಮಣೆ, ಬಗಲಲ್ಲಿ ಎರಡು ಗಿಣಿ, ಗಿಣಿ ಮೇಲೆ ಗುಡ್ಡ, ಗುಡ್ಡದ ಮೇಲೆ ಹುಲ್ಲು – ತಲೆ

೫. ನಾನೇ ತಂದಿರುವೆ ನಿನ್ನನ್ನು, ನೀನೇಕೆ ನೋಡುವೆ ನನ್ನನ್ನು – ಕನ್ನಡಿ

೬. ಅಪ್ಪನ ದುಡ್ಡು ಎಣಿಸಲಿಕ್ಕೆ ಆಗಲ್ಲ, ಅಮ್ಮನ ಸೀರೆ ಮಡಚಲು ಆಗಲ್ಲ – ಚುಕ್ಕಿ ಮತ್ತು ಆಕಾಶ

೭. ಗಿಡ ಗಿಡಕ್ಕೆ ಕುಡುಗೋಲು ಕಟ್ಟಿದ್ದಾರೆ – ಹುಣಸೇಕಾಯಿ

೮. ಕತ್ತಲ ಮನೆಯಲ್ಲಿ ಕರಿಯಕ್ಕ ಕುಳಿತಿದ್ದಾಳೆ – ಹೆಂಚು

೯. ಕತ್ತಲೆ ಮನೆಯಲ್ಲಿ ಕತ್ತಿ ಬೀಸುತ್ತದೆ – ಎಮ್ಮೆಬಾಲ

೧೦. ಹಗ್ಗ ಹಾಸಿದೆ, ಗೂಳಿ ಮಲಗಿದೆ – ಕುಂಬಳ ಕಾಯಿ

೧೧. ಕಪ್ಪು ಉಂಟು ಕಸ್ತೂರಿಯಲ್ಲ, ರೆಕ್ಕೆ ಉಂಟು ಹಕ್ಕಿಯಲ್ಲ, ನೀರು ಉಂಟು ಬಾವಿ ಅಲ್ಲ. ನಾನು ಯಾರು – ಕಣ್ಣು

೧೨. ಅಂಗೈ ಅಗಲ ಗದ್ದೆ, ಗದ್ದೆಯಲ್ಲಿ ನೀರು, ನೀರಿನಲ್ಲಿ ಬೇರು ಬೇರಿನಲ್ಲಿ ಬೆಂಕಿ – ದೀಪ

೧೩. ನಿನ್ನ ನೋಡಿದರೆ ಬಾಯಲ್ಲಿ ನೀರು ಬರುತ್ತದೆ – ಹುಣಸೇ ಹಣ್ಣು

೧೪. ದೂರ ಇದ್ದಾಗ ಸೆಟಗೊಂಡಿರುತ್ತದೆ. ಮುಟ್ಟಿದಾಗ ನಾಚಿಕೊಂಡು ಮುಸುಗು ಹಾಕಿಕೊಳ್ಳುತ್ತದೆ – ಮುಟ್ಟಿದರೆ ಮುನಿಗಿಡ

೧೫. ಅಂಕುಡೊಂಕು ಬಾವಿ ನಾರಾಯಣ ಕಟ್ಟಿಸಿದ ಬಾವಿ ಬಗ್ಗಿ ನೋಡಿದರೆ ತೊಟ್ಟು ನೀರಿಲ್ಲ – ಕಿವಿ

**ಜನಪದ ಕಥೆಗಳು**

**ಹಾವಿನ ಕಥೆ** : ಒಂದು ಊರಿನಲ್ಲಿ ತಿಮ್ಮಣ್ಣನೆಂಬ ವ್ಯಕ್ತಿ ಇದ್ದನು. ಈತನು ಅನೇಕ ಪ್ರಾಣಿ ಪಕ್ಷಿಗಳನ್ನು ಸಾಕಿದ್ದನು. ಮೊಲ, ಜಿಂಕೆ, ಕೋಳಿ, ಕುರಿ, ಮೇಕೆಗಳನ್ನು ಸಾಕಿದ್ದನು. ತಾನು ಸಾಕಿದ್ದ ಕೋಳಿಗಳಲ್ಲಿ ಒಂದು ಕೋಳಿಯು ಮೊಟ್ಟೆಯನ್ನಿಡಲು ಪ್ರಾರಂಭಿಸಿತು. ಈ ಮೊಟ್ಟೆಗಳನ್ನು ಕೋಳಿಯು ಕಾವುಕೊಟ್ಟು ಮರಿಮಾಡುತ್ತದೆಂದು ತಿಮ್ಮಣ್ಣನು ಸಂತೋಷ ಪಟ್ಟನು. ಆದರೆ ಮರದಲ್ಲಿ ವಾಸವಾಗಿದ್ದ ಹಾವೊಂದು ಪ್ರತಿದಿನವೂ ಮೊಟ್ಟೆಯನ್ನು ನುಂಗಿ ಹೋಗುತ್ತಿತ್ತು. ಒಂದು ದಿನ ಮೊಟ್ಟೆಗಳು

ಕಾಣೆಯಾಗುತ್ತಿರುವುದರ ಬಗ್ಗೆ ಚಿಂತಿತನಾಗಿ ಕಾದು ಕುಳಿತನು. ಕೋಳಿ ಮೊಟ್ಟೆ ಇಟ್ಟ ನಂತರ ಹಾವು ಮೊಟ್ಟೆಯನ್ನು ನುಂಗಿ ಮರದ ಮೇಲೆ ಹೋಯಿತು. ತಿಮ್ಮಣ್ಣನು ಮೊಟ್ಟೆಯೊಂದಕ್ಕೆ ಗುಂಡುಸೂಜಿಗಳನ್ನು ಚುಚ್ಚಿ ಇಟ್ಟನು. ಮೊಟ್ಟೆಯನ್ನು ನೋಡಿ ಬಂದ ಹಾವು ಮೊಟ್ಟೆಯನ್ನು ನುಂಗಿತು. ಮೊಟ್ಟೆಯೊಳಗಿದ್ದ ಗುಂಡುಸೂಜಿಗಳು ಹಾವಿನ ಹೊಟ್ಟೆಗೆ ಚುಚ್ಚಿಕೊಂಡು ನೋವಿನಿಂದ ನರಳಿ ಸತ್ತುಹೋಯಿತು. ಈ ಕಥೆಯ ಸಾರಾಂಶವೇನೆಂದರೆ ಮೋಸವು ಎಂದಿಗೂ ಶಾಶ್ವತವಲ್ಲ.

**ಅಣ್ಣತಂಗಿ ಕಥೆ:** ಅಪ್ಪಯ್ಯನ ಹಟ್ಟಿ ಎನ್ನುವ ಊರಿನಲ್ಲಿ ಅಣ್ಣ ತಂಗಿ ವಾಸವಾಗಿದ್ದರು. ತಂಗಿಗೆ ಒಳ್ಳೆಯ ಸಂಬಂಧವನ್ನು ನೋಡಿ ಅಣ್ಣನು ಮದುವೆ ಮಾಡಿದನು. ತಂಗಿಯನ್ನು ಗಂಡನ ಮನೆಗೆ ಕಳುಹಿಸುವ ಸಂದರ್ಭದಲ್ಲಿ ಅಣ್ಣನ ಕಾಲಿಗೆ ನಮಸ್ಕಾರ ಮಾಡಿ ಆಶೀರ್ವಾದ ಬೇಡಿದಳು ಆಗ ಅಣ್ಣನು ನಿನ್ನ ತಾಳಿ ಹರಿಯಲಿ, ನಿನ್ನ ಕುಂಕುಮವು ಅಳಿಸಿ ಹೋಗಲಿ, ನಿನ್ನ ಹೂವು ಹರಿಯಲಿ, ಎನ್ನುತ್ತಾ ಆಶೀರ್ವಾದ ಮಾಡಿದನು. ಆ ಸಂದರ್ಭದಲ್ಲಿ ಅಣ್ಣನ ಮೇಲೆ ತಂಗಿಗೆ ಕೋಪ ಬಂದಿತು. ಅಣ್ಣನನ್ನು ತಂಗಿಯು ಬಾಯಿಗೆ ಬಂದಂತೆ ಬೈದಳು. ಆಗ ಅಣ್ಣನು ನಾನು ಹೇಳಿದ ಮಾತಿನ ಅರ್ಥವೇನೆಂದರೆ ನಿನಗೆ ಒಂದು ಮಗು ಸಾದ್ಯವಾದಷ್ಟು ಬೇಗ ಹುಟ್ಟಲಿ ಎಂದು ಹೇಳಿದನು. ಮಗುವು ತಾಳಿಯನ್ನು ಎಳೆಯುತ್ತದೆ ಕುಂಕುಮವನ್ನು ಅಳಿಸುತ್ತದೆ. ಹೂವುಗಳನ್ನು ಕೀಳುತ್ತದೆ, ಎಂದು ವಿವರಿಸಿದನು ಆಗ ತಂಗಿಗೆ ಅಣ್ಣನ ಮೇಲೆ ವಾತ್ಸಲ್ಯ ಉಂಟಾಯಿತು. ಈ ಕಥೆಯ ಸಾರಂಶವೇನೆಂದರೆ, ಯಾವುದೇ ಮಾತುಗಳನ್ನಾಗಲೀ, ವಿಷಯಗಳನ್ನಾಗಲೀ, ಯೋಚಿಸಿ ತೀರ್ಮಾನ ತೆಗೆದುಕೊಳ್ಳಬೇಕು ಶೀಘ್ರದಲ್ಲಿ ಯಾವುದೇ ತೀರ್ಮಾನಕ್ಕೆ ಬರಬಾರದು.

ಬೇಡರ ಕಥೆಗಳು ಮಕ್ಕಳಿಗೆ ನೈತಿಕ ಶಿಕ್ಷಣವನ್ನು ನೀಡುತ್ತವೆ. ಮನೆಯ ಹಿರಿಯರು ತಮ್ಮ ಮಕ್ಕಳು, ಮೊಮ್ಮಕ್ಕಳಿಗೆ ಸಾಂದರ್ಭಿಕವಾಗಿ ಕಥೆಗಳನ್ನು ಹೇಳುವ ಸಂಪ್ರದಾಯವಿದೆ. ಈ ಕಥೆಗಳು ದೈನಂದಿನ ಜೀವನದಲ್ಲಿ ನೈತಿಕ ಶಿಕ್ಷಣವನ್ನು ನೀಡಿ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ನೂರಾರು, ಸಾವಿರಾರು ಕಥೆಗಳನ್ನು ಬೇಡರ ಹಿರಿಯರು ಹೇಳುತ್ತಾರೆ.

**೨.೯. ಪ್ರದರ್ಶನಾತ್ಮಕ ಕಲೆಗಳು**

ಚಿತ್ರದುರ್ಗ ಜಿಲ್ಲೆಯ ಬೇಡ ಬುಡಕಟ್ಟು ಸಮುದಾಯದವರು ಸಾಂಪ್ರದಾಯಕವಾದ ಕಲೆ ಮತ್ತು ಕ್ರೀಡೆಗಳನ್ನು ಹೊಂದಿದ್ದಾರೆ. ದೇವರ ಜಾತ್ರೆಗಳಲ್ಲಿ, ಹಬ್ಬಹರಿದಿನಗಳಲ್ಲಿ ಹಲವು ಕ್ರೀಡೆಗಳನ್ನು ಆಡುತ್ತಾರೆ. ದಿನನಿತ್ಯದ ಜೀವನದಲ್ಲಿಯೂ ಕ್ರೀಡೆಗಳನ್ನು, ಆಟಗಳನ್ನು ರೂಢಿಸಿಕೊಂಡಿದ್ದಾರೆ. ಇವರ ಕಲೆ ಮತ್ತು ಕ್ರೀಡೆಗಳು ಯುವಕರಿಗೆ, ವಯಸ್ಕರಿಗೆ, ಮಕ್ಕಳಿಗೆ, ಹೆಂಗಸರು, ಗಂಡಸರಿಗೆ ಬೇಸರ ಕಳೆಯಲು, ಸೃಜನಾತ್ಮಕವಾಗಿ ತಮ್ಮ ಸಮಯವನ್ನು ಕಳೆಯಲು ಪ್ರೇರೇಪಿಸುತ್ತವೆ.

**ಬಯಲಾಟ:** ಚಿತ್ರದುರ್ಗ ಪ್ರದೇಶದ ಕಂಪಳ ದೇವರಹಟ್ಟಿಯ ಜಾತ್ರೆಯಲ್ಲಿ ಪಾಪನಾಯಕ ಮತ್ತು ಕಂಪಳರಂಗ ದೇವರುಗಳ ಆರಾಧನೆ ನಡೆಯುತ್ತದೆ. ಈ ಸಂದರ್ಭದಲ್ಲಿ ಬೇಡರ ಬಯಲಾಟ ಪ್ರದರ್ಶನ ಇರುತ್ತದೆ. ರಾಮಾಯಣ, ಮಹಾಭಾರತದಿಂದ ಆಯ್ದುಕೊಂಡ ಕಥಾವಸ್ತುಗಳು ಇವರ

ಬಯಲಾಟಕ್ಕೆ ಪೂರಕವಾಗಿರುತ್ತವೆ. ಕೆಲವು ಸಂದರ್ಭಗಳಲ್ಲಿ ಸಂಪೂರ್ಣ ರಾಮಾಯಣ, ರಾಮಾಂಜನೇಯ ಯುದ್ಧ, ಸೀತಾಪರಿತ್ಯಾಗ, ಪಾಂಡವ ವನವಾಸ, ರಾಜಸೂಯಯಾಗ, ದ್ರೌಪದಿ ಸ್ವಯಂವರ, ಗಿರಿಜಾಕಲ್ಯಾಣ, ಬೇಡರ ಕಣ್ಣಪ್ಪ, ಶ್ರೀಕೃಷ್ಣಪಾರಿಜಾತ ಮುಂತಾದ ನಾಟಕಗಳನ್ನು ಆಡುತ್ತಾರೆ. ಈ ನಾಟಕಗಳನ್ನು ಆಡಲು ತಿಂಗಳುಗಟ್ಟಲೆ ಅಭ್ಯಾಸಗಳನ್ನು ಮಾಡುತ್ತಾರೆ. ಹಬ್ಬ ಹರಿದಿನಗಳಲ್ಲೇ ನಾಟಕಗಳನ್ನು ರಾತ್ರಿಯ ಸಂದರ್ಭಗಳಲ್ಲಿ ಆಡುತ್ತಾರೆ. ಈ ಪೌರಾಣಿಕ ನಾಟಕಗಳನ್ನು ನೋಡಲು ಸುತ್ತಮುತ್ತಲ ಹಳ್ಳಿಗಳ, ಹಟ್ಟಿಗಳ ಜನರು ಸಾಕಷ್ಟು ಸಂಖ್ಯೆಯಲ್ಲಿ ಬರುತ್ತಾರೆ. ನಾಟಕವನ್ನು ಆಡುವುದು ಇವರಿಗೆ ಸಂಭ್ರಮ, ಸಂತೋಷವನ್ನುಂಟು ಮಾಡುತ್ತದೆ.

**ಕ್ರೀಡೆಗಳು** : ಕ್ರೀಡೆಗಳು ಬೇಡರ ಬಿಡುವಿನ ಸಮಯವನ್ನು ಕಳೆಯಲು, ಹಬ್ಬಹರಿದಿನಗಳ ಸಂದರ್ಭಗಳಲ್ಲಿ ಸ್ಪರ್ಧಾತ್ಮಕ ಮನೋಭಾವವನ್ನು ಪರಸ್ಪರ ಬೆಳೆಸಲು ಸಹಕಾರಿಯಾಗಿವೆ. ಇಂತಹ ಕ್ರೀಡೆಗಳನ್ನು ದಿನನಿತ್ಯದ ಜೀವನದಲ್ಲಿ ಪ್ರತಿದಿನವೂ ಆಡುತ್ತಾರೆ. ಮಕ್ಕಳು, ಪುರುಷರು ಮತ್ತು ಸ್ತ್ರೀಯರು ತಮ್ಮದೇ ಆದ ಕ್ರೀಡೆಗಳನ್ನು ಆಡುತ್ತಾರೆ. ಚಿತ್ರದುರ್ಗ ಸಂಸ್ಥಾನದ ಪಾಳೆಯಗಾರರು ದಸರಾ, ದೀಪಾವಳಿ, ಯುಗಾದಿ ಮುಂತಾದ ಹಬ್ಬಗಳಲ್ಲಿ, ದೇವರು, ದೇವತೆಗಳ ಜಾತ್ರೆಗಳಲ್ಲಿ ಹಲವಾರು ಕ್ರೀಡೆಗಳನ್ನು ಆಡಲು ಪ್ರೋತ್ಸಾಹ ನೀಡುತ್ತಿದ್ದರೆಂಬುದು ತಿಳಿದುಬರುತ್ತದೆ. ಕೋಟೆ ಕಾಳಗ ಎಂಬ ಕ್ರೀಡೆಯು ಒಂದು ಕ್ರೀಡೆಯಾದರೂ ಯುದ್ಧದ ಸಂದರ್ಭದಲ್ಲಿ ವೈರಿಗಳನ್ನು ಹಿಮ್ಮೆಟ್ಟಿಸಲು ಕಲಿಸುವ ತಂತ್ರವಾಗಿದೆ. ಕೋಟೆಯ ಮೇಲಿನಿಂದ ನಿರ್ದಿಷ್ಟ ಸ್ಥಳಕ್ಕೆ ಕಲ್ಲನ್ನು ಎಸೆಯುವ ತಂತ್ರವಾಗಿದೆ. ಈ ಕ್ರೀಡೆಯಲ್ಲಿ ಕವಣೆ ಕಲ್ಲಾಟ, ಕಲ್ಲು ಬೀಸುವಾಟ, ಗುರಿಯಿಟ್ಟು ತೆಂಗಿನಕಾಯಿಯನ್ನು ಹೊಡೆಯುವ ಆಟಗಳು ಸೇರಿವೆ. ಬಿಲ್ಲುಗಾರಿಕೆಯೂ ಕೂಡ ಒಂದು ಆಟವಾದರೂ ಬಿಲ್ಲುಗಾರಿಕೆಯಲ್ಲಿ ಯುದ್ಧತಂತ್ರ ನೈಪುಣ್ಯತೆಯನ್ನು ಕಲಿಸುವ ತಂತ್ರ ಅಡಗಿದೆ. ಕೆಲವು ಆಟಗಳಿಂದ ಬುದ್ಧಿಶಕ್ತಿ ಬೆಳೆಯುವುದರ ಜೊತೆಗೆ ದೈಹಿಕವಾಗಿಯೂ ಶಕ್ತಿವಂತರನ್ನಾಗಿ ಮಾಡುತ್ತವೆ. ಉತ್ತಮ ದೇಹದ ರಚನೆಯನ್ನು ಕಾಪಾಡಲು, ದೈಹಿಕವಾಗಿ ಬಲಾಢ್ಯರಾಗಲು ಈ ಕ್ರೀಡೆಗಳು ಸಹಕಾರಿಯಾಗಿವೆ. ಹರಳಾಟ, ಬೆರಳಾಟ, ತುಳದಾಟ, ಸುತ್ತಾಟ, ಹುಡುಕಾಟ, ಮುಟ್ಟಾಟ, ಬುಗುರಿಯಾಟ, ಕಬ್ಬಡ್ಡಿ ಮುಂತಾದ ಆಟಗಳು ಮಕ್ಕಳಿಗೆ ಮನೋರಂಜನಾತ್ಮಕ ಆಟಗಳಾದರೂ ಮಕ್ಕಳ ದೈಹಿಕ ಬೆಳವಣಿಗೆಗೆ ಪೂರಕವಾಗಿವೆ.

**೧. ಚಿಕ್ಕಮಕ್ಕಳು ಆಡುವ ಆಟಗಳು**

ಚಿಕ್ಕಮಕ್ಕಳು ಆಡುವ ಈ ಆಟಗಳು ಮಕ್ಕಳಲ್ಲಿ ಸ್ಪರ್ಧಾತ್ಮಕ ಮನೋಭಾವನೆಯನ್ನು ಬೆಳೆಸುತ್ತವೆ. ಮಾನಸಿಕವಾಗಿ ಮತ್ತು ದೈಹಿಕವಾಗಿ ಶಕ್ತಿವಂತರನ್ನಾಗಿ ಮಾಡುತ್ತದೆ. ನದಿಪಾತ್ರದ ಹಳ್ಳಕೊಳ್ಳಗಳ ದಂಡೆಯಲ್ಲಿ ಮರಳಿನಲ್ಲಿ ಮನೆ ಕಟ್ಟುವ ಆಟವನ್ನು ಆಡುತ್ತಾರೆ. ಗಾಳಿಪಟವನ್ನು ಹಾರಿಸುವುದು, ಕಲ್ಲಿನ ಎತ್ತುಗಳನ್ನು ಮಾಡಿಕೊಂಡು ಹೊಲವನ್ನು ಉಳುವ ರೀತಿಯಲ್ಲಿ ಈ ಮನೆಯ ಮುಂದೆ ಅಥವಾ ಹಿತ್ತಲಿನಲ್ಲಿ ಆಡುತ್ತಾರೆ. ಕುಂಟೆ ಬಿಲ್ಲೆಯ ಆಟ, ಬಳೆಚೂರಿನ ಆಟ, ಕಣ್ಣಾಮುಚ್ಚಾಲೆ ಆಟ,

ಮುಟ್ಟಾಟ, ಬುಗುರಿಯಾಟ, ಕಪ್ಪೆಆಟ, ಮರಕೋತಿಯ ಆಟ, ಗೋಲಿ ಆಟ, ಗಜ್ಜಗದ ಆಟ, ಅಂಟ್ಲಾಳ ಆಟ (ಕಲ್ಲು ತೂರುವ ಆಟ) ಚಿನ್ನಿದಾಂಡು ಆಟ, ಕಳ್ಳಪೋಲಿಸ್ ಆಟ, ಕಣ್ಣುಕಟ್ ಆಟ, ಲಗೋರಿ ಆಟ, ಬಚ್ಚಿಟ್ಟು ಕೊಳ್ಳುವ ಆಟ, ಹುಲಿಕಟ್ಟೆ ಆಟ ಮುಂತಾದ ಆಟಗಳನ್ನು ಆಡುತ್ತಾರೆ.

**೨. ಗಂಡಸರು ಆಡುವ ಆಟಗಳು**

ಗಂಡಸರು ಆಡುವ ಆಟಗಳು ಶಾರೀರಿಕ ಶ್ರಮದಿಂದ ಕೂಡಿದ ಆಟಗಳಾಗಿರುತ್ತವೆ. ಬುದ್ಧಿ ಪ್ರಧಾನ ಹಾಗೂ ಶ್ರಮಪ್ರಧಾನವಾದ ಆಟಗಳಾಗಿರುತ್ತವೆ. ಈ ಕ್ರೀಡೆಗಳಲ್ಲಿ ದೈಹಿಕವಾಗಿ ಬಲಾಢ್ಯರು ಭಾಗವಹಿಸುವ ಆಟಗಳಾಗಿವೆ. ಈ ಕ್ರೀಡೆಗಳಲ್ಲಿಯೂ ಕೂಡ ಯುದ್ಧತಂತ್ರಗಳ ಹಿನ್ನೆಲೆ ಇರುತ್ತದೆ. ಸಾಹಸ, ತಂತ್ರಗಾರಿಕೆ, ಜಾಣ್ಮೆ, ಬುದ್ಧಿಶಕ್ತಿ ಇರಬೇಕಾಗುತ್ತದೆ. ಕಬ್ಬಡ್ಡಿ ಆಟ, ಗೂಳಿ ಕಾಳಗ ಆಟ, ಪಗಡೆ ಆಟ, ಗಜ್ಜುಗದ ಆಟ, ಗೋಲಿ ಆಟ, ಚದುರಂಗ, ಬಿಲ್ಲುಗಾರಿಕೆ, ಗುಂಡು ಕಲ್ಲುಗಳನ್ನು ಎತ್ತುವ ಆಟ, ಕುಸ್ತಿ, ಮರಳಿನ ಚೀಲವನ್ನು ಬೆನ್ನಮೇಲೆ ಹೊತ್ತುಕೊಂಡು ನಿರ್ದಿಷ್ಟ ಗುರಿಯನ್ನು ಮುಟ್ಟುವ ಆಟ, ಕಂಬ ಹತ್ತುವ ಆಟ, ಬಂಡೆ ಹತ್ತುವ ಆಟ, ಉಯ್ಯಾಲೆ ಆಟ, ನಿರ್ದಿಷ್ಟ ದೂರದ ವರೆಗೆ ಓಡುವ ಸ್ಪರ್ಧೆಯ ಆಟ, ಕಾಲಿನ ಚಕ್ರದ ಆಟ ಮುಂತಾದ ಆಟಗಳನ್ನು ಆಡುತ್ತಾರೆ. ಹಬ್ಬ ಹರಿದಿನಗಳಲ್ಲಿ ಚಿನ್ನಿದಾಂಡುವಿನ ಆಟ, ಹುಲಿಮನೆ ಆಟ, ಕಬ್ಬಡ್ಡಿ, ಮರಕೋತಿ ಆಟ ಮುಂತಾದ ಆಟಗಳನ್ನು ಆಡುತ್ತಾರೆ. ಹೋಳಿ ಹಬ್ಬದಲ್ಲಿ ಹೋಳಿ ಆಟವನ್ನು ಆಡುತ್ತಾರೆ. ಕೋಲಾಟವನ್ನು ಪ್ರತಿಹಬ್ಬಗಳಲ್ಲಿಯೂ ಆಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಈ ಆಟಗಳನ್ನು ಆಯೋಜಿಸುವ ಆಯೋಜಕರು ಬೇಡರ ಹಿರಿಯರಾಗಿರುತ್ತಾರೆ. ಈ ಆಟದ ಸ್ಪರ್ಧೆಗಳಲ್ಲಿ ಗೆಲ್ಲುವ ಗಂಡಸರಿಗೆ ಸೂಕ್ತ ಬಹುಮಾನಗಳನ್ನು ನೀಡುತ್ತಾರೆ. ಈ ಬಹುಮಾನಗಳು ಹಣ, ಬೆಳ್ಳಿ ಬಂಗಾರ, ಕಂಚುಗಳ ರೂಪದಲ್ಲಿರುತ್ತದೆ. ಆಟಗಳಲ್ಲಿ ಗೆಲ್ಲುವ ಗಂಡಸರಿಗೆ ಬೇಡ ಸಮುದಾಯದಲ್ಲಿ ಸನ್ಮಾನ ಮಾಡಲಾಗುತ್ತದೆ. ಆಟಗಳಲ್ಲಿ ಗೆದ್ದ ವ್ಯಕ್ತಿಗಳಿಗೆ ಬೇಡ ಸಮುದಾಯದಲ್ಲಿ ವಿಶೇಷ ಗೌರವ ಮತ್ತು ಹೆಮ್ಮೆ ಇರುತ್ತದೆ. ಬೇಡ ಸಮುದಾಯದ ಈ ಆಟಗಳು, ಸ್ಪರ್ಧಾತ್ಮಕ ಆಟಗಳಾಗಿರುತ್ತವೆ. ಬೇಡ ಪುರುಷರ ಶಕ್ತಿ ಪ್ರದರ್ಶನಕ್ಕೆ ಉತ್ತಮ ಅವಕಾಶಗಳಾಗಿ ಈ ಆಟಗಳಿವೆ. ಎಲ್ಲರೂ ಸಂಭ್ರಮದಿಂದ ಈ ಆಟದ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಾರೆ.

**೩. ಹೆಂಗಸರು ಆಡುವ ಆಟಗಳು**

ಬೇಡ ಸಮುದಾಯದ ಹೆಂಗಸರು ಕೂಡ ಕ್ರೀಡೆಗಳಲ್ಲಿ ಭಾಗವಹಿಸುತ್ತಾರೆ. ಹೆಂಗಸರು ದೈಹಿಕವಾಗಿ ಬಲಾಢ್ಯರಾಗಿಲ್ಲದೇ ಇರುವುದರಿಂದ ಕೆಲವು ನಿರ್ದಿಷ್ಟವಾದ ಕಡಿಮೆ ಆಟಗಳನ್ನು ಆಡುತ್ತಾರೆ. ದೇವರು, ದೇವತೆಗಳ ಜಾತ್ರೆಗಳಲ್ಲಿ, ಹಬ್ಬಹರಿದಿನಗಳಲ್ಲಿ ಆಟಗಳನ್ನು ಆಡುತ್ತಾರೆ. ಅಂಟ್ಲಾಳ ಆಟ, ಬಳೆಚೂರಿನ ಆಟ, ಪಗಡೆ ಆಟ, ಸರಿಬೆಸದ ಆಟ, ಕುಂಬಳಕಾಯಿ ಆಟ, ಓಡುವ ಆಟ, ಕಣ್ಣುಮುಚ್ಚಾಲೆ ಆಟ, ಉಪ್ಪಮ್ಮ ಉಪ್ಪಿನ ಆಟ, ಕುಂಟೊ ಬಿಲ್ಲೆ ಆಟ, ಜೋಕಾಲಿ ಆಟ, ನಿಂಬೆಹಣ್ಣು ಆಟ ಮುಂತಾದ ಆಟಗಳನ್ನು ಆಡುತ್ತಾರೆ. ಈ ಆಟಗಳು ಕೆಲವು ಸ್ಪರ್ಧಾತ್ಮಕ ಹಾಗೂ

ಸ್ಪರ್ಧಾರಹಿತ ಆಟಗಳಾಗಿರುತ್ತವೆ. ಆಟಗಳಲ್ಲಿ ಗೆಲ್ಲುವ ಹೆಂಗಸರಿಗೆ ನಿರ್ದಿಷ್ಟ ಪಡಿಸಿದ ಬಹುಮಾನಗಳನ್ನು ಆಯೋಜಕರು ಕೊಡುತ್ತಾರೆ. ಈ ಆಟಗಳು ಪರಸ್ಪರರಲ್ಲಿ ಸ್ಪರ್ಧಾತ್ಮಕ ಮನೋಭಾವವನ್ನು ಬೆಳೆಸುತ್ತವೆ. ಪರಸ್ಪರ ಸೌಹಾರ್ದಯುತವಾಗಿ ಹೆಂಗಸರು ಆಟಗಳಲ್ಲಿ ಭಾಗವಹಿಸುತ್ತಾರೆ.

**ಚಿತ್ರಕಲೆ ಮತ್ತು ವಾಸ್ತುಶಿಲ್ಪ**

ಚಿತ್ರದುರ್ಗ ಪ್ರದೇಶವು ಬೃಹದಾಕಾರವಾದ ಬಂಡೆಗಳ ಬೆಟ್ಟಗಳನ್ನು ಒಳಗೊಂಡ ಪ್ರದೇಶವಾಗಿದೆ. ಈ ಭಾಗದಲ್ಲಿ ಇತಿಹಾಸ ಪೂರ್ವಕಾಲದ ಮಾನವರು ವಾಸಿಸುತ್ತಿದ್ದರೆಂದು ಇತಿಹಾಸಕಾರರು ಹೇಳುತ್ತಾರೆ. ಚಿತ್ರದುರ್ಗದ ಪಾಳೆಯಗಾರರು ಶತಮಾನಗಳ ಕಾಲ ಚಿತ್ರದುರ್ಗದಲ್ಲಿ ಕೋಟೆಯನ್ನು ಕಟ್ಟಿಕೊಂಡು ಆಳಿದ್ದಾರೆ. ಚಿತ್ರದುರ್ಗದ ಪಾಳೆಯಗಾರರು ಆಳ್ವಿಕೆ ನಡೆಸುತ್ತಿದ್ದಂತಹ ಸಂದರ್ಭದಲ್ಲಿ ಏಳುಸುತ್ತಿನ ಕೋಟೆಯನ್ನು ಕಟ್ಟಿದ್ದಾರೆ. ಕೋಟೆಗಳ ಮೇಲೆ ಸುಂದರವಾದ ಕೆತ್ತನೆಗಳನ್ನು ಕೆತ್ತಿಸಿದ್ದಾರೆ. ಇವರ ಆಡಳಿತದ ಕಾಲದಲ್ಲಿ ಅನೇಕ ಸುಂದರ ದೇವಾಲಯಗಳನ್ನು ಕಟ್ಟಿಸಿದ್ದಾರೆ. ದೇವಾಲಯಗಳಲ್ಲಿರುವ ವಿಗ್ರಹಗಳ ಕೆತ್ತನೆಗಳು ಸುಂದರವಾಗಿವೆ. ಬೇಡ ಜನಾಂಗದ ಪಾಳೆಯಗಾರರು ಅಪಾರ ದೈವಭಕ್ತರಾಗಿದ್ದರು. ಆದ್ದರಿಂದಲೇ ಚಿತ್ರದುರ್ಗ ಪ್ರದೇಶದ ಯಾವುದೇ ಭಾಗಕ್ಕೆ ಹೋದರೂ ಕೂಡ ದೇವಾಲಯಗಳನ್ನು ಕಾಣುತ್ತೇವೆ. ಪಾಳೆಯಗಾರರು ಕೋಟೆಗಳನ್ನು ಬೃಹದಾಕಾರದ ಬಂಡೆಗಳಿಂದ ಕಟ್ಟಿದ್ದಾರೆ. ದೇವಾಲಯಗಳನ್ನು ಕೂಡ ಬೃಹತ್ ಬಂಡೆಗಳು, ಕಲ್ಲುಗಳನ್ನು ಕೆತ್ತಿ ನಿರ್ಮಾಣ ಮಾಡಿದ್ದಾರೆ. ಪಾಳೆಯಗಾರರು ನಿರ್ಮಿಸಿದ ಚಿತ್ರದುರ್ಗದ ಕೋಟೆಯು ಇತಿಹಾಸದಲ್ಲಿ ಶಾಶ್ವತವಾಗಿ ಉಳಿದಿದೆ ಬೇಡ ಮಹಿಳೆಯರು ದೇವಸ್ಥಾನಗಳ ಮುಂದೆ ರಂಗೋಲಿ ಹಾಕುವುದು. ಬಣ್ಣ ಬಣ್ಣದ ಚಿತ್ರಗಳನ್ನು ಬಿಡಿಸುವುದನ್ನು ಮಾಡುತ್ತಾರೆ. ಹಬ್ಬ ಹರಿದಿನಗಳಲ್ಲಿ ಮನೆಗಳ ಮುಂದೆ ದೇವಸ್ಥಾನಗಳ ಮುಂದೆ ರಂಗೋಲಿಗಳನ್ನು ಹಾಕಿ, ಬಣ್ಣಗಳಿಂದ ಚಿತ್ರಗಳನ್ನು ಹಾಕುತ್ತಾರೆ.

**ಚಿತ್ರದುರ್ಗ ಜಿಲ್ಲೆಯ ಬೇಡ ಬುಡಕಟ್ಟು ಸಮುದಾಯದ ತಾಲ್ಲೂಕುವಾರು ಮಾದರಿ(ನಮೂನೆ)ಗಳ ಆಯ್ಕೆಯ ವಿವರಗಳು**

**ಕೋಷ್ಟಕ–೧**

| ಕ್ರಸಂ. | ತಾಲ್ಲೂಕುಗಳು | ಕುಟುಂಬಗಳು | ಕುಟುಂಬದ ಸದಸ್ಯರ ಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧. | ಚಿತ್ರದುರ್ಗ | ೧೦೦ | ೨೧೨ | ೧೮೪ | ೩೯೬ |
| ೨. | ಹಿರಿಯೂರು | ೧೦೦ | ೨೪೧ | ೨೩೬ | ೪೭೭ |
| ೩. | ಹೊಸದುರ್ಗ | ೫೦ | ೮೪ | ೭೯ | ೧೬೩ |
| ೪. | ಹೊಳಲ್ಕೆರೆ | ೫೦ | ೯೪ | ೮೬ | ೧೮೦ |
| ೫. | ಚಳ್ಳಕೆರೆ | ೧೦೦ | ೨೧೭ | ೧೬೯ | ೩೮೬ |
| ೬. | ಮೊಳಕಾಲ್ಮೂರು | ೧೦೦ | ೨೦೨ | ೧೯೬ | ೩೯೮ |
| | ಒಟ್ಟು | ೧೦೦ | ೧೦೫೦ | ೯೫೦ | ೨೦೦೦ |

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿಯೂ ಬೇಡ ಬುಡಕಟ್ಟು ಸಮುದಾಯದವರು ಕಂಡುಬರುತ್ತಾರೆ. ಚಿತ್ರದುರ್ಗ ತಾಲ್ಲೂಕು, ಹಿರಿಯೂರು ತಾಲ್ಲೂಕು, ಚಳ್ಳಕೆರೆ ತಾಲ್ಲೂಕು, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಹೊಳಲ್ಕೆರೆ ತಾಲ್ಲೂಕು ಮತ್ತು ಹೊಸದುರ್ಗ ತಾಲ್ಲೂಕುಗಳಲ್ಲಿ ವಿರಳವಾಗಿ ಕಂಡುಬರುತ್ತಾರೆ. ಯಾದೃಚ್ಛಿಕ ಮಾದರಿ(Random Sampling)ಯ ನಮೂನೆಗಳನ್ನು ಆಯ್ದುಕೊಳ್ಳಲಾಗಿದೆ.

ಚಿತ್ರದುರ್ಗ ತಾಲ್ಲೂಕಿನಲ್ಲಿ ೧೦೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ೧೦೦ ಕುಟುಂಬಗಳಲ್ಲಿ ೨೧೨ ಗಂಡು, ೧೮೪ ಹೆಣ್ಣು, ಒಟ್ಟು ೩೯೬ ಕುಟುಂಬ ಸದಸ್ಯರಿದ್ದಾರೆ. ಹಿರಿಯೂರು ತಾಲ್ಲೂಕಿನಲ್ಲಿ ೧೦೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ೧೦೦ ಕುಟುಂಬಗಳಲ್ಲಿ ೨೪೧ ಗಂಡು, ೨೩೬ ಹೆಣ್ಣು, ಒಟ್ಟು ೪೭೭ ಕುಟುಂಬ ಸದಸ್ಯರಿದ್ದಾರೆ. ಹೊಸದುರ್ಗ ತಾಲ್ಲೂಕಿನಲ್ಲಿ ೫೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ೫೦ ಕುಟುಂಬಗಳಲ್ಲಿ ೮೪ ಗಂಡು, ೭೯ ಹೆಣ್ಣು, ಒಟ್ಟು ೧೬೩ ಕುಟುಂಬ ಸದಸ್ಯರಿದ್ದಾರೆ. ಹೊಳಲ್ಕೆರೆ ತಾಲ್ಲೂಕಿನಲ್ಲಿ ೫೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ೫೦ ಕುಟುಂಬಗಳಲ್ಲಿ ೯೪ ಗಂಡು, ೮೬ ಹೆಣ್ಣು, ಒಟ್ಟು ೧೮೦ ಕುಟುಂಬ ಸದಸ್ಯರಿದ್ದಾರೆ. ಚಳ್ಳಕೆರೆ ತಾಲ್ಲೂಕಿನಲ್ಲಿ ೧೦೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಅದರಲ್ಲಿ ೨೧೭ ಗಂಡು, ೧೭೯ ಹೆಣ್ಣು, ಒಟ್ಟು ೩೯೬ ಕುಟುಂಬ ಸದಸ್ಯರಿದ್ದಾರೆ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೧೦೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ಕುಟುಂಬಗಳಲ್ಲಿ ೨೦೨ ಗಂಡು, ೧೯೬ ಹೆಣ್ಣು, ಒಟ್ಟು ೩೯೮ ಕುಟುಂಬ ಸದಸ್ಯರಿದ್ದಾರೆ. ಒಟ್ಟು ಆರು ತಾಲ್ಲೂಕುಗಳಿಂದ ೫೦೦ ಕುಟುಂಬಗಳನ್ನು ಮಾದರಿಗಳನ್ನಾಗಿ ಆಯ್ದುಕೊಳ್ಳಲಾಗಿದೆ. ಅದರಲ್ಲಿ ೧೦೫೦ ಗಂಡು, ೯೫೦ ಹೆಣ್ಣು, ಒಟ್ಟು ೨೦೦೦ ಸದಸ್ಯರಿದ್ದಾರೆ.

**ಕೋಷ್ಟಕ ೧.೧.**

**ವೈವಾಹಿಕ ಸ್ಥಾನಮಾನ:** ಬೇಡ ಬುಡಕಟ್ಟು ಸಮುದಾಯದಲ್ಲಿ ಏಕಪತ್ನಿತ್ವ ಮತ್ತು ಏಕಪತಿತ್ವದ ವಿವಾಹಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಅಂತರ್‌ಜಾತಿ ವಿವಾಹಕ್ಕೆ ಈ ಸಮುದಾಯದಲ್ಲಿ ಪ್ರೋತ್ಸಾಹ ನೀಡುವುದಿಲ್ಲ. ಆದಾಗ್ಯೂ ಅಂತರ್‌ಜಾತಿ ವಿವಾಹಗಳು ವಿರಳವಾಗಿ ಕಂಡುಬರುತ್ತವೆ.

| **ವಿವರ** | **ಪ್ರಮಾಣ** | **ಶೇಕಡ** |
|---|---|---|
| ವಿವಾಹಿತರು | ೧೨೮೬ | ೬೪.೩೩ |
| ಅವಿವಾಹಿತರು | ೪೧೫ | ೨೦.೭೫ |
| ವಿಧವೆ/ವಿಧುರರು | ೨೯೯ | ೧೪.೯೫ |
| **ಒಟ್ಟು** | ೨೦೦೦ | ೧೦೦ |

ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಒಟ್ಟು ೫೦೦ ಕುಟುಂಬಗಳ ಒಟ್ಟು ೨೦೦೦ ಸದಸ್ಯರಲ್ಲಿ ವಿವಾಹಿತರಾದವರು ಶೇಕಡ ೬೪.೩೩ರಷ್ಟು, ಅವಿವಾಹಿತರು ಶೇಕಡ ೨೦.೭೫ರಷ್ಟು, ವಿಧವೆ/ವಿಧುರರು ಶೇಕಡ ೧೪.೯೫ರಷ್ಟು ಬಂದಿದ್ದಾರೆ.

**ಕೋಷ್ಟಕ ೧.೨.**

**ಶೈಕ್ಷಣಿಕ ಸ್ಥಾನಮಾನ**

ಚಿತ್ರದುರ್ಗ ಜಿಲ್ಲೆಯ ಬೇಡಬುಡಕಟ್ಟು ಸಮುದಾಯದಲ್ಲಿ ಶಿಕ್ಷಣ ಪಡೆಯಲು ಸಾಮಾನ್ಯವಾಗಿ ಎಲ್ಲಾ ಕುಟುಂಬಗಳಲ್ಲಿಯೂ ಆಸಕ್ತಿ ಕಂಡುಬರುತ್ತಿದೆ. ಶಿಕ್ಷಣ ಪಡೆದವರು ಪಟ್ಟಣ ಪ್ರದೇಶಗಳಲ್ಲಿ ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಶಿಕ್ಷಣ ಪಡೆಯದೇ ಇರುವವರು ಕೃಷಿ ಸಂಬಂಧಿಸಿದ ವೃತ್ತಿಗಳ ಜೊತೆಗೆ ಇತರೇ ವೃತ್ತಿಗಳನ್ನು ಮಾಡುತ್ತಿರುವುದು ಕಂಡುಬಂದಿದೆ.

| ವಿವರ | ಪ್ರಮಾಣ | ಶೇಕಡ |
|---|---|---|
| ಶಿಕ್ಷಣ ಪಡೆದವರು (ಪ್ರಾಥಮಿಕ, ಪ್ರೌಢ, ಪದವಿ) | ೧೦೫೦ | ೫೨.೫೦ |
| ಶಿಕ್ಷಣ ಪಡೆಯದೇ ಇರುವವರು | ೯೫೦ | ೪೭.೫೦ |
| **ಒಟ್ಟು** | **೨೦೦೦** | **೧೦೦** |

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳ ಒಟ್ಟು ೫೦೦ ಕುಟುಂಬಗಳಲ್ಲಿನ ಒಟ್ಟು ೨೦೦೦ ಸದಸ್ಯರಲ್ಲಿ ಶಿಕ್ಷಣ ಪಡೆದವರು ಶೇಕಡ ೫೨.೫೦ರಷ್ಟು, ಶಿಕ್ಷಣ ಪಡೆಯದೇ ಇರುವವರು ಶೇಕಡ ೪೭.೫೦ರಷ್ಟು ಕಂಡುಬಂದಿದ್ದಾರೆ.

**ಕೋಷ್ಟಕ ೧.೩.**

**ವೃತ್ತಿಯ ಸ್ಥಾನಮಾನ:** ಚಿತ್ರದುರ್ಗ ಜಿಲ್ಲೆಯ ಬೇಡ ಬುಡಕಟ್ಟು ಸಮುದಾಯವು ಶಿಕ್ಷಣವನ್ನು ಪಡೆದು ವಿವಿಧ ವೃತ್ತಿಗಳನ್ನು ಮಾಡುತ್ತಿರುವುದು ಕಂಡುಬಂದಿದೆ. ಶಿಕ್ಷಣ ವಂಚಿತರು ಕೃಷಿ ಸಂಬಂಧಿಸಿದ ಉದ್ಯೋಗ ಮತ್ತು ಇತರೇ ವೃತ್ತಿಗಳಲ್ಲಿ ತೊಡಗಿಕೊಂಡಿರುವುದು ಕಂಡುಬಂದಿದೆ.

| ವಿವರ | ಪ್ರಮಾಣ | ಶೇಕಡ |
|---|---|---|
| ಕೃಷಿಕಾರ್ಮಿಕರು | ೭೩೫ | ೩೬.೭೬ |
| ಸಣ್ಣ ವ್ಯಾಪಾರಿಗಳು | ೨೭೬ | ೧೩.೮೦ |
| ಖಾಸಗಿ ಉದ್ಯೋಗ | ೯೪೩ | ೪೭.೧೭ |
| ಸರ್ಕಾರಿ ಉದ್ಯೋಗ | ೪೬ | ೨.೩೦ |
| **ಒಟ್ಟು** | **೨೦೦೦** | **೧೦೦** |

ಬೇಡಬುಡಕಟ್ಟು ಸಮುದಾಯದಲ್ಲಿ ಶೇಕಡ ೩೬.೭೬ರಷ್ಟು ಕೃಷಿ ಕಾರ್ಮಿಕರು, ಶೇ.೧೩.೮೦ರಷ್ಟು ಸಣ್ಣ ವ್ಯಾಪಾರಿಗಳು, ಶೇ.೪೭.೧೭.ಷ್ಟು ಖಾಸಗಿ ಉದ್ಯೋಗ ಮಾಡುವವರು, ಶೇ.೨.೩೦ರಷ್ಟು ಸರ್ಕಾರಿ ಉದ್ಯೋಗ ಮಾಡುವವರು ಕಂಡುಬಂದಿದ್ದಾರೆ.

**ಕೋಷ್ಟಕ ೧.೪.**

**ವಯೋಮಾನ** : ಬೇಡ ಬುಡಕಟ್ಟು ಸಮುದಾಯದ ಒಟ್ಟು ೫೦೦ ಕುಟುಂಬಗಳ ೨೦೦೦ ಸದಸ್ಯರುಗಳನ್ನು ಅವರ ವಯಸ್ಸಿನ ಅನುಗುಣವಾಗಿ ವಯೋಮಾನವಾರು ವಿವರಗಳನ್ನು ಈ ಕೆಳಕಂಡಂತೆ ತಿಳಿಸಲಾಗಿದೆ.

| **ವಯೋಮಾನ** | **ಪ್ರಮಾಣ** | **ಶೇಕಡ** |
|---|---|---|
| ೦-೧೪ ವರ್ಷ | ೨೧೭ | ೧೦.೮೫ |
| ೧೪-೧೮ ವರ್ಷ | ೨೩೫ | ೧೧.೭೫ |
| ೧೯-೨೫ ವರ್ಷ | ೧೨೫ | ೬.೨೫ |
| ೨೬-೪೦ ವರ್ಷ | ೬೨೦ | ೩೧.೦೦ |
| ೪೧-೫೦ ವರ್ಷ | ೬೭೬ | ೩೩.೮೦ |
| ೫೦ ವರ್ಷದ ಮೇಲ್ಪಟ್ಟು | ೧೨೭ | ೬.೩೫ |
| **ಒಟ್ಟು** | **೨೦೦೦** | **೧೦೦** |

ಬೇಡ ಬುಡಕಟ್ಟು ಸಮುದಾಯದಲ್ಲಿ ವಯೋಮಾನಕ್ಕೆ ಅನುಗುಣವಾಗಿ ೦-೧೪ ವರ್ಷದವರೆಗೆ ಶೇ.೧೦.೮೫ರಷ್ಟು, ೧೪-೧೮ ವರ್ಷದವರೆಗೆ ಶೇ.೧೧.೭೫ರಷ್ಟು, ೧೯-೨೫ ವರ್ಷದವರೆಗೆ ಶೇ.೬.೨೫ರಷ್ಟು, ೨೬-೪೦ ವರ್ಷದವರೆಗೆ ಶೇ.೩೧ರಷ್ಟು, ೪೧-೫೦ ವರ್ಷದವರೆಗೆ ಶೇ.೩೩.೮೦ರಷ್ಟು, ೫೦ ವರ್ಷದ ಮೇಲ್ಪಟ್ಟು ಶೇ.೬.೩೫ರಷ್ಟು ವಯೋಮಾನದವರು ಕಂಡುಬಂದಿದ್ದಾರೆ.

**೨.೧೦ ಸಮಸ್ಯೆಗಳು ಮತ್ತು ಸವಾಲುಗಳು**

ಪ್ರತಿಯೊಂದು ಬುಡಕಟ್ಟು ಸಮುದಾಯವೂ ಕೂಡ ತನ್ನದೇ ಆದ ಸಮಸ್ಯೆಗಳು ಮತ್ತು ಸವಾಲುಗಳನ್ನು ಹೊಂದಿರುತ್ತದೆ ಬೇಡ ಬುಡಕಟ್ಟು ಸಮುದಾಯದಲ್ಲಿಯೂ ಕೂಡ ಅನೇಕ ಸಮಸ್ಯೆಗಳು ಮತ್ತು ಸವಾಲುಗಳಿವೆ. ಬೇಡ ಬುಡಕಟ್ಟು ಸಮುದಾಯವು ಸಾಂಸ್ಕೃತಿಕವಾಗಿ ಶ್ರೀಮಂತವಾಗಿದ್ದರೂ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಅನೇಕ ಸವಾಲುಗಳನ್ನು ಹೊಂದಿದೆ. ಆಧುನಿಕ ಜಗತ್ತಿನಲ್ಲಿ ಸ್ಪರ್ಧಾತ್ಮಕ ಮನೋಭಾವ ಹೆಚ್ಚಾಗಿರುವುದರಿಂದ ಇಂತಹ ಸವಾಲಿಗೆ ಬೇಡ ಸಮುದಾಯವು ತೆರೆದುಕೊಳ್ಳುತ್ತಿದೆ. ಇಂದು ಶಿಕ್ಷಣವನ್ನು ಪಡೆಯುವುದು ಅನಿವಾರ್ಯತೆ ಮತ್ತು ಅಗತ್ಯತೆಯಾಗಿದೆ. ಜನರು ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಬದುಕುತ್ತಿದ್ದಂತಹ ರೀತಿಗೂ ಸ್ವಾತಂತ್ರ್ಯನಂತರ ಕಾಲದಲ್ಲಿ ಬದುಕುತ್ತಿರುವ ರೀತಿಗೂ ಅಜಗಜಾಂತರ ವ್ಯತ್ಯಾಸವಿದೆ. ಸ್ವಾತಂತ್ರ್ಯನಂತರದ ಭಾರತದಲ್ಲಿ ಬುಡಕಟ್ಟು ಸಮುದಾಯದವರಿಗೆ ಶಿಕ್ಷಣ, ಉದ್ಯೋಗಗಳಲ್ಲಿ ಮೀಸಲಾತಿಯನ್ನು ನೀಡಿದ

ನಂತರ ಭಾರತದ ಎಲ್ಲಾ ಬುಡಕಟ್ಟು ಸಮುದಾಯದವರೂ ಈ ಸೌಲಭ್ಯವನ್ನು ಬಳಸಿಕೊಂಡು ಮುಂದುವರೆದ ಜಾತಿಯ ಜನಾಂಗದವರೊಂದಿಗೆ ಸ್ಪರ್ಧಿಸುತ್ತಿದ್ದಾರೆ. ಕರ್ನಾಟಕದಲ್ಲಿಯೂ ಕೂಡ ಬೇಡ ಸಮುದಾಯವರು ಈ ಸೌಲಭ್ಯಗಳನ್ನು ಬಳಸಿಕೊಂಡಿದ್ದಾರೆ. ಇನ್ನೂ ಹೆಚ್ಚಾಗಿ ಈ ಸೌಲಭ್ಯಗಳನ್ನು ಬಳಸಿಕೊಳ್ಳಬೇಕಾದ ಅಗತ್ಯವಿದೆ. ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಕ್ಷೇತ್ರಕಾರ್ಯ ಮಾಡಿದಾಗ ಕಂಡುಕೊಂಡ ಬಹಳ ಮುಖ್ಯವಾದ ಅಂಶವೆಂದರೆ ಬಹಳಷ್ಟು ಮಂದಿಗೆ ಪರಿಶಿಷ್ಟ ಪಂಗಡದ ಮೀಸಲಾತಿ ಇರುವುದು, ಶಿಕ್ಷಣ, ಉದ್ಯೋಗದಲ್ಲಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಈ ಸೌಲಭ್ಯಗಳನ್ನು ಬಳಸಿಕೊಳ್ಳುವುದು ಗೊತ್ತಿಲ್ಲ. ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ, ಈ ಸೌಲಭ್ಯಗಳನ್ನು, ಮೀಸಲಾತಿಗಳನ್ನು ಸರಿಯಾಗಿ ಬಳಸಿಕೊಳ್ಳಬೇಕಾದ ಸಾಮಾನ್ಯಜ್ಞಾನವನ್ನು ಇವರಿಗೆ ನೀಡುವ ಅಗತ್ಯವಿದೆ. ಎಲ್ಲಾ ಜಾತಿ ಜನಾಂಗಗಳಂತೆಯೂ ಬೇಡ ಬುಡಕಟ್ಟು ಸಮುದಾಯದವರು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಿಂದ ಇರುವ ಎಲ್ಲಾ ರೀತಿಯ ಸೌಲಭ್ಯಗಳನ್ನು ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಳ್ಳಬೇಕಾಗಿದೆ.

೧. ಬೇಡ ಬುಡಕಟ್ಟು ಸಮುದಾಯದ ಎಲ್ಲರೂ ಶಿಕ್ಷಣವನ್ನು ಸಮರ್ಪಕವಾಗಿ ಪಡೆಯುತ್ತಿಲ್ಲ.

೨. ಪ್ರಾಥಮಿಕ ಶಿಕ್ಷಣದಿಂದ ಉನ್ನತಶಿಕ್ಷಣದವರೆಗೆ ಮೀಸಲಾತಿ ಸೌಲಭ್ಯ, ಅವಕಾಶಗಳು ಇದ್ದರೂ ಸರಿಯಾಗಿ ಬಳಸಿಕೊಳ್ಳುತ್ತಿಲ್ಲ.

೩. ಸ್ವಚ್ಛತೆ, ಆರೋಗ್ಯ ನೈರ್ಮಲ್ಯಗಳ ವಿಚಾರಗಳಲ್ಲಿ ಸಾಕಷ್ಟು ಜಾಗೃತಿ ಇಲ್ಲ.

೪. ಕೇಂದ್ರ ಸರ್ಕಾರ ಮತ್ತು ರಾಜ್ಯಸರ್ಕಾರಗಳ ಯೋಜನೆಗಳು ಸಮರ್ಪಕವಾಗಿ ಬೇಡ ಸಮುದಾಯಕ್ಕೆ ತಲುಪುತ್ತಿಲ್ಲ.

೫. ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಪರಿಶಿಷ್ಟ ಪಂಗಡದವರಿಗೆ ನೀಡುವ ಸೌಲಭ್ಯಗಳ ಬಗ್ಗೆ ವ್ಯಾಪಕ ತಿಳುವಳಿಕೆಯನ್ನು, ಜಾಗೃತಿಯನ್ನು ನೀಡುವ ಅಗತ್ಯವಿದೆ.

೬. ಆಧುನೀಕರಣದ ಪ್ರಭಾವದಿಂದಾಗಿ ಬಹುತೇಕ ಯುವಕರು, ಶಿಕ್ಷಣ, ಉದ್ಯೋಗ, ಮತ್ತು ಇತರೇ ಅಗತ್ಯತೆಗಳಿಗಾಗಿ ಹಳ್ಳಿಗಳಿಂದ ನಗರಗಳ ಕಡೆಗೆ ವಲಸೆ ಹೋಗುತ್ತಿರುವುದು ಕಂಡು ಬರುತ್ತಿದೆ.

೭. ಬೇಡ ಸಮುದಾಯದಲ್ಲಿ ಆರ್ಥಿಕವಾಗಿ ಎಲ್ಲರೂ ಸಬಲರಾಗಿಲ್ಲ. ಈಗಲೂ ಇವರಲ್ಲಿ ಬಡತನ, ನಿರುದ್ಯೋಗ, ಆರ್ಥಿಕ ಸಂಪನ್ಮೂಲಗಳ ಕೊರತೆ ಇದೆ.

೮. ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಇವರು ಸಬಲರಾಗಬೇಕಾಗಿದೆ.

೯. ಶಾಲೆಗಳಲ್ಲಿ ವಿದ್ಯಾಭ್ಯಾಸವನ್ನು ಮಾಡುವಂತಹ ಸಂದರ್ಭದಲ್ಲಿಯೇ ಬಡತನದ ಕಾರಣದಿಂದ ಶಾಲೆಯಿಂದ ಹೊರಗುಳಿಯುತ್ತಿದ್ದಾರೆ.

೧೦. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿವಾಗಿ ಇತರೆ ಎಲ್ಲಾ ಸಮುದಾಯದೊಂದಿಗೆ ಬೆರೆಯುವ ಮನೋಭಾವ ಇತ್ತೀಚಿನ ದಿನಗಳಲ್ಲಿ ಕಂಡುಬರುತ್ತಿದೆ. ಆಧುನೀಕತೆಯ ಪ್ರಭಾವ ಬೇಡ ಬುಡಕಟ್ಟು ಸಮುದಾಯದ ಮೇಲೆ ಆಗುತ್ತಿದೆ.

**ಅಡಿಟಿಪ್ಪಣಿಗಳು**

೧. ಜನಸಮುದಾಯ ಸಂಪುಟ, ಕರ್ನಾಟಕ ರಾಜ್ಯಕೋಶ-೪, ಸಂಪಾದಕ, ಎಚ್.ಡಿ.ಪ್ರಶಾಂತ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೭೪-೭೫

೨. ಬುಡಕಟ್ಟು ಕುಲಕಸುಬುಗಳು, ಡಾ.ಕೆ.ಎಂ.ಮೇತ್ರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪು.೧೮೭-೧೮೮

೩. ಮ್ಯಾಸಬೇಡರು, ಕೃಷ್ಣಮೂರ್ತಿ ಹನೂರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೩, ಪು.೧೯-೨೦

೪. ಮ್ಯಾಸಬೇಡರು, ಕೃಷ್ಣಮೂರ್ತಿ ಹನೂರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೩, ಪುಟ.೨೧-೨೨

೫. ಮ್ಯಾಸಬೇಡರು, ಡಾ.ಕೃಷ್ಣಮೂರ್ತಿ ಹನೂರು, ಕರ್ನಾಟಕದ ಬುಡಕಟ್ಟುಗಳು ಸಂಪುಟ-೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು ೧೯೯೮, ಪು.೭೮೬-೭೮೭)

೬. ಹೊಸಪೇಟೆ ನಾಯಕರ ಏಳುಕೇರಿಗಳ ಸಾಂಸ್ಕೃತಿಕ ಅಧ್ಯಯನ ಪಿಎಚ್.ಡಿ. ಸಂಶೋಧನಾ ಪ್ರಬಂಧ, ತಾರಿಹಳ್ಳಿ ಹನುಮಂತಪ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ.೧೬೦

೭. ಮ್ಯಾಸಬೇಡರು, ಕೃಷ್ಣಮೂರ್ತಿ ಹನೂರು, ಕರ್ನಾಟಕ ಬುಡಕಟ್ಟುಗಳ ಸಂಪುಟ-೧, ಬೆಂಗಳೂರು, ಪುಟ.೮೦೪-೮೦೫

ಅಧ್ಯಾಯ: ೩

# ಮೇದ(ಮೇದಾರ) ಬುಡಕಟ್ಟು ಸಮುದಾಯ

೧. ಹಿನ್ನೆಲೆ
೨. ಮೂಲ ಮತ್ತು ಪ್ರಸಾರ
೩. ವಸತಿ ವ್ಯವಸ್ಥೆ
೪. ಬಂಧುತ್ವ ಮತ್ತು ವಿವಾಹ
೫. ಆರಾಧನೆ, ಆಚರಣೆ ಮತ್ತು ನಂಬಿಕೆಗಳು
೬. ಒಳಾಡಳಿತ ವ್ಯವಸ್ಥೆ
೭. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ
೮. ಸಾಹಿತ್ಯ ಮತ್ತು ಭಾಷೆ
೯. ಪ್ರದರ್ಶನಾತ್ಮಕ ಕಲೆಗಳು
೧೦. ಸಮಸ್ಯೆಗಳು ಮತ್ತು ಸವಾಲುಗಳು

ಅಧ್ಯಾಯ: ೩

# ಮೇದ(ಮೇದಾರ) ಬುಡಕಟ್ಟು ಸಮುದಾಯ

## ೩.೧. ಹಿನ್ನೆಲೆ

'ಮೇದ(ಮೇದಾರ)' ಬುಡಕಟ್ಟು ಸಮುದಾಯವು ಪಾರಂಪರಿಕವಾಗಿ ಗೃಹಕರಕುಶಲ ಕಲೆ ಮತ್ತು ಕೃಷಿಯನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡು ಬಂದಿರುವಂತಹ ಜನಾಂಗವಾಗಿದೆ. 'ಮೇದ' ಜನಾಂಗವನ್ನು 'ಮೇದಾರ(Medara), 'ಮೇದರ್(Medar), ಮೇದರಿ(Medari), ಗೌರಿಗ (Gouriga), ಬುರುಡ(Buruda), ಬುಡ್ಡರ್(Buddar) ಎನುವ ಪರ್ಯಾಯ ಪದಗಳಿಂದ ಕರೆಯಲಾಗುತ್ತಿದೆ.

'ಮೇದ' ಬುಡಕಟ್ಟು ಸಮುದಾಯವನ್ನು ಕುರಿತು 'ಮುಂಬೈ ಕರ್ನಾಟಕದ ಗ್ಯಾಝೆಟಿಯರ್ ಈ ರೀತಿ ವರದಿ ಮಾಡಿದೆ. 'ಮೇದಾರರು ಇಲ್ಲವೇ ಬುರುಡರು ದೊಡ್ಡ ಹಳ್ಳಿಗಳಲ್ಲಿಯೂ, ಪಟ್ಟಣಗಳಲ್ಲಿಯೂ ವಾಸಿಸುತ್ತಾರೆ. ಕಾನಾಡ ಜಿಲ್ಲೆಯಲ್ಲಿ ಘಟ್ಟದ ಮೇಲೆ ಮಾತ್ರ ಇರುತ್ತಾರೆ. ಇವರ ಮಾತೃಭಾಷೆ ಕನ್ನಡ. ಇವರು ತಮ್ಮ ಜಾತಿಯ ಪೀಠಿಕೆಯನ್ನು ಹೇಳುವುದು ಹೇಗೆಂದರೆ, ಕ್ಯಾತಯ್ಯನೆಂಬ ಲಿಂಗವಂತನು ತಮ್ಮ ಮೂಲ ಪುರುಷನಾದಾಗ್ಯೂ ಬರಗಾಲದಲ್ಲಿ ಶೂದ್ರರ ಮನೆಯಲ್ಲಿ ಉಂಡು ಜೀವ ಬದುಕಿಸಿದ ಕಾರಣ ತಾವು ಜಾತಿ ಭ್ರಷ್ಟರಾದರು. ಇವರಲ್ಲಿ ಯಾರಾದರೂ ಸತ್ತರೆ ಈಗಲೂ ಅಯ್ಯನ ಚರಣತೀರ್ಥವನ್ನು ಹೆಣದ ಬಾಯೊಳಗೆ ಹಾಕುವರು. ಕಾನಾಡ ಜಿಲ್ಲೆಯಲ್ಲಿ ಅಯ್ಯಗಳೇ ಇವರ ಉಪಾಧ್ಯಾಯತನದ ಕೆಲಸ ಮಾಡುತ್ತಾರೆ. ಬೇರೆ ಕಡೆಯಲ್ಲಿ ಮೇದಾರರು ಬ್ರಾಹ್ಮಣರನ್ನು ಕರೆಯುವರು. ಕಲಬುರ್ಗಿಯ ಹತ್ತಿರ ಗೋಬಾರವೆಂಬಲ್ಲಿ ಇರುವ ಹುಲಸಿಗರಾಯನೆಂಬ ದೇವತೆಯು ಮೇದಾರರ ಕುಲದೇವತೆ. ಕೆಲವರು ಹುಬ್ಬಳ್ಳಿಯ ಗುರುಸಿದ್ಧಸ್ವಾಮಿ ಎಂಬುವರ ಶಿಷ್ಯರಾಗಿರುತ್ತಾರೆ. ಮೇದಾರರು ಶಿವ, ಬಸವ, ಎಲ್ಲಮ್ಮ ಮುಂತಾದ ದೇವತೆಗಳಿಗೂ ನಡೆದುಕೊಳ್ಳುವರು. ಮದ್ಯ, ಮಾಂಸ ಬಳಸುವರು. ಹೆಣಗಳನ್ನು ಹುಗಿಯುವರು. ಇವರ ಜಾತಿಯ ಗೌಡ, ಚವಗ ಎಂಬ ಪಂಚರು ಜಾತಿಯ ನ್ಯಾಯ ತೀರಿಸುವರು.[೧]

ಮೇದರ ಐಹಿತ್ಯಗಳ ಪ್ರಕಾರ ಮಹೇಂದ್ರ ಚಲದ ಮೂಲಿಗರೇ ಮಹೇಂದ್ರರಾಗಿ ಮೇದರಾಗುವರು. ಶಿವ-ಗೌರಿಯ ಸಂತಾನವೇ ಗೌರಿಗರಾಗುವರು. ಆದರೆ ಗೌರಿಗರು ಮೂಲತಃ ಕವರಿಗರು,

ಕವರಿಗರೆಂದರೆ ಬಿದಿರಿನ ಕಾಯಕದವರೆಂದು ಅರ್ಥ. ಮಹಾಭಾರತದ ವಿದುರನ ವಂಶಜರು ತಾವು ಎಂದು ಹೇಳುವರು. ಕನ್ನಡದ ಬಿದುರ ಪದ ಈ ಸಂಶಯಕ್ಕೆಡೆಮಾಡುವುದು. ಬಿದಿರಿನ ಉದ್ಯೋಗಿಗಳನ್ನೇ ಬುರುಡ(Buruda), ಮಿಯಾದಾರ(Miyadar), ಮ್ಯಾದಾರ(Myadara), ಮೇದರೆ (Medare), ಮೇದ(Meda), ಬೀದರು(Bidaru), ಮಿದರು(Midaru), ಮೇದರ್(Medar), ಮೇದರಿ(Medari), ಗೌರಿಗ(Gouriga), ಬುಡ್ಡರ್(Buddar) ಎಂಬ ಹೆಸರುಗಳಿಂದಲೂ ಕರೆಯಲಾಗುತ್ತಿದೆ.[೨]

ಮೇದರನ್ನು ಭಾಷಿಕ ಹಿನ್ನೆಲೆಯಲ್ಲಿ ಕನ್ನಡ ಮತ್ತು ತೆಲುಗು ಮೇದರೆಂದು ವಿಭಜಿಸಬಹುದು. ಒಳಬಾಂಧವ್ಯದ ಗೌರಿಗರನ್ನು ಮೈಸೂರು ಜಿಲ್ಲೆಯಲ್ಲಿ, ಪಳ್ಳಿ(Palli) ಮೇದರ್ ಮತ್ತು ಬಂಡಿಕಾರ ಮೇದರನ್ನು ಇತರೆಡೆಗಳಲ್ಲಿ ಕಾಣಬಹುದು. ಗೌರಿಗರಲ್ಲಿ ಬೆಳ್ಳಿಕುಲ ಮತ್ತು ನಾಗರಕುಲ ಎಂಬ ಎರಡು ಒಳಬಾಂಧವ್ಯದ ಬಣಗಳಿರುವುವು. ಇವು ಬೆಳ್ಳಿ ಮತ್ತು ನಾಗರಹಾವು ಕುಲಚಿಹ್ನೆಗಳನ್ನು ಹೊಂದಿದ್ದವು. ಆದರೆ ಇಂದು ಇವು ಮರೆಮಾಚಿವೆ. ಪಳ್ಳಿ ಮೇದರಲ್ಲಿ ಆಲುಕುಲ, ಸಂಪಿಗೆಕುಲ, ಕಾರೇಕುಲ, ಕುರುಬ ಕುಲ ಇತ್ಯಾದಿ ಒಳಬಾಂಧವ್ಯದ ಕುಲಗಳನ್ನು ಕಾಣಬಹುದು. ಬಂಡಿಕಾರ ಮೇದರಲ್ಲಿ ಹೊರಬಾಂಧವ್ಯದ ನಾಯಕನ ಬೀಡು, ಮುಸುಕಾಣ್ಣೀ ಬೀಡು, ಗೌಡನ ಬೀಡು, ರಟ್ಟರ ಅಥವಾ ರತ್ನಬೀಡುಗಳಿವೆ. ಇಲ್ಲಿ ಬೀಡು ಎಂದರೆ ಬೆಡಗು, ಕುಲ, ಬಳಿ, ಬಣ ಎಂದರ್ಥ. ಇವರಲ್ಲಿ ಒಂದು ಚಪ್ಪರದವರು, ಎರಡು ಚಪ್ಪರದವರು, ಚಿನ್ನದ ಅರಿವೇಣಿ ಮತ್ತು ಬೆಳ್ಳಿ ಅರಿವೇಣಿದವರೆಂಬ ಭೇದಗಳನ್ನು ಗುರುತಿಸಬಹುದು. ಹುಬ್ಬಳ್ಳಿಯ ಮೇದ ಗರ್ಜನೆ ಪತ್ರಿಕೆಯ ವರದಿಗಾರರ ಪ್ರಕಾರ, ಕರ್ನಾಟಕದ ಮೇದರ ಬೆಡಗುಗಳೆಂದರೆ, ತೆವರೆ ಕೋಳಿ, ಪಳಸೆ, ಕೊಡ್ಡೇರ, ಪಾರಸಾಲಿ, ಡುಕರೆ, ಸೊಳಂಕೆ, ಮತ್ತೇಲ, ಬೆಳ್ಳಿನಾಗ, ಪಾಂಗಳಾ, ಚಿನ್ನದ ನಾಗ, ಕಟ್ಟರು, ಹುಲಿವಟ್ಟರ, ಸೂರ್ಯವಂಶಿ, ಮಳೆಗಲ್, ಆಲ, ಮುಸಕಿನ ಬಿಡು. ಇವು ಧಾರವಾಡ, ಬೆಳಗಾಂವ, ಬಳ್ಳಾರಿ, ದಾವಣಗೆರೆ, ಗುಲಬರ್ಗಾ, ಬೀದರ, ಬೆಂಗಳೂರು, ಕೊಡಗು ಜಿಲ್ಲೆಗಳಲ್ಲಿವೆ. ಮಹಾರಾಷ್ಟ್ರದ ಮೇದರ ಬೆಡಗುಗಳು ಹೀಗಿವೆ. ಪಾಟಲು, ಗೌಡ್ರ, ತವರೆ, ಸೂನಾವ್, ಕುಕಡೆ, ಕೋಮಡೆ, ಪವಾರ, ಪಳಸೆ, ಕುಠಡೆ, ಸಪಾಟೆ, ಸೂರ್ಯವಂಶಿ, ಸಾಳುಂಕೆ, ಬಡೆ, ನಾಗೆ, ಸಂಕವಾಳ, ಗಾಯಕವಾಡ, ಪೌರೆ, ಸಾವಂತ, ಕ್ವೆರೆ, ಘೋರ್ಪಡೆ ಮತ್ತು ಮೋಹಂತಿ. ಈ ಬೆಡಗುಗಳು ಪ್ರಕೃತಿ ಪ್ರಾಣಿಗಳನ್ನು ಪ್ರತಿನಿಧಿಸುತ್ತದೆ.[೩]

'ಮೇದ(ಮೇದಾರ)' ಬುಡಕಟ್ಟು ಸಮುದಾಯದವರು, ತಾವು ಆಂಧ್ರಪ್ರದೇಶ ಮತ್ತು ತಮಿಳುನಾಡಿನ ಪ್ರದೇಶಗಳಿಂದ ಕರ್ನಾಟಕಕ್ಕೆ ಬಂದವರೆಂದು, ಈ ಸಮುದಾಯದ ಹಿರಿಯರು ಹೇಳುತ್ತಾರೆ. ಈ ಸಮುದಾಯದವರು, ತಮ್ಮ ಹಿನ್ನೆಲೆ, ಮೂಲದ ಬಗ್ಗೆ ಹಲವಾರು ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಹಿನ್ನೆಲೆಯ ಕಥೆಗಳನ್ನು ಹೇಳುತ್ತಾರೆ. ಈ ಕಥೆಗಳಿಗೆ, ಹಿನ್ನೆಲೆಗಳಿಗೆ ಪೂರಕವಾಗಿ ತಮ್ಮನ್ನು 'ಮೇದ', 'ಮೇದರ್ಕಳ್', ಗೌರಿಗ, ಗೌರಿಮಕ್ಕಳು ಇತ್ಯಾದಿಯಾಗಿ ಕರೆದುಕೊಳ್ಳುತ್ತಾರೆ.

ಪೌರಾಣಿಕ ಕಥೆಯ ಪ್ರಕಾರ 'ಗೌರಿಕರ' ಹಿನ್ನೆಲೆಯು ಈ ರೀತಿ ಇದೆ. ಮಹಾಭಾರತದಲ್ಲಿ ಪ್ರಸಿದ್ಧನಾದ ವಿದುರನ ಮೂಲಕ್ಕೆ ಇವರು ಸೇರಿದವರು. ಈ ಕಥೆಯ ಮೂಲ ಬಿದಿರು ಮತ್ತು ವಿದುರ ಎಂಬ ಹೆಸರಿನ ಧ್ವನಿ ಸಾಮ್ಯವನ್ನು, ಹೋಲಿಕೆಯನ್ನು ತೋರಿಸುತ್ತದೆ. ಮತ್ತು ಬಿದಿರು ಅವರ ವೃತ್ತಿಯ ಮುಖ್ಯ ವಸ್ತುವಾಗಿಯೂ ಕಂಡುಬರುತ್ತದೆ. 'ಗವರಿಗ' ಎನ್ನುವುದು ಮೂಲತಃ 'ಕವರಿಗ' ಆಗಿದ್ದು, ಅದಕ್ಕೆ ಬಿದಿರು ಸಿಗಿಯುವವನು ಎಂದರ್ಥ. ಕಾಲಕ್ರಮದಲ್ಲಿ ಈ ಪದ ತಮ್ಮನ್ನು ತಾವು ಗೌರಿ ಮಕ್ಕಳೆಂದು ಭಾವಿಸಲು ಕಾರಣವಾಗಿದೆ.[೪]

ಇವರಲ್ಲಿ ಪ್ರಚಲಿತವಿರುವ ಇನ್ನೊಂದು ಕಥೆಯಂತೆ, ಪಾರ್ವತಿಗೆ 'ಮೊರ'ಗಳನ್ನು ಮಾಡಲು ಸೃಷ್ಟಿಸಲ್ಪಟ್ಟ ವ್ಯಕ್ತಿಯ ಪರಂಪರೆಗೆ ಇವರು ಸೇರಿದವರು. ಈ ಮೂಲ ವ್ಯಕ್ತಿ ಶಿವನ ಆಸ್ಥಾನದಲ್ಲಿದ್ದ ಭಕ್ತಾಗ್ರೇಸರನೂ, ಶಿವನ ವಾಹನವೂ ಆದ ನಂದಿದೇವ. ಈ ನಂದಿದೇವನು ಕಬ್ಬಿಣದ ಕಾಳುಗಳನ್ನು ತಿಂದು ಮೆಲುಕು ಹಾಕುತ್ತಾ ಇರುವಾಗ ಈ ನಂದಿಯ ಬಾಯಿಯಿಂದ ಹುಟ್ಟಿದವನು 'ಮೂಲಮೇದ'. ಆನಂತರ ಶಿವನು ತನ್ನ ಮೈ ಮೇಲಿನ ಹಾವುಗಳನ್ನು ಬಿದಿರು ಬೆತ್ತಗಳನ್ನಾಗಿ ಸೃಷ್ಟಿಸಿದನು. ಆ ವ್ಯಕ್ತಿಯ ಕೌಶಲ್ಯಕ್ಕೆ ಸಂಪ್ರೀತನಾದ ಶಿವನು ಒಂದು ಬುಟ್ಟಿಯ ತುಂಬ ಇವನಿಗೆ ಬೆಲೆ ಬಾಳುವಂತಹ ವಜ್ರ, ವೈಢೂರ್ಯಗಳನ್ನು ಪ್ರತಿಫಲವಾಗಿ ನೀಡಿದನು. ಆದರೆ ಈ ಮೂರ್ಖ ವ್ಯಕ್ತಿಗೆ ವಜ್ರ-ವೈಢೂರ್ಯಗಳ ಬೆಲೆ ಅರಿಯದೇ ಆ ಸಂಪತ್ತಿನ ಆ ಅದೃಷ್ಟದಿಂದ ದೂರವಾದನು. ಇದರಿಂದ ಬೇಸರಗೊಂಡ ದೇವತೆಗಳು ಇವನಿಗೆ ತನ್ನ ವೃತ್ತಿಯಲ್ಲಿ ಹಿಡಿಗೂಳು ಮಾತ್ರ ಸಿಗುವಂತೆ ವಿಧಿಸಿದರು.[೫]

'ಮೇದ' ಬುಡಕಟ್ಟು ಜನಾಂಗದಲ್ಲಿ ತಮ್ಮ ಮೂಲದ ಬಗ್ಗೆ ಈ ರೀತಿಯಾದ ನಂಬಿಕೆಯೂ ಕೂಡ ಪ್ರಚಲಿತದಲ್ಲಿದೆ. ಮೇದರು ತಾವು ಇಂದ್ರನ ಪರ್ವತವಾದ ಮಹೇಂದ್ರಾಚಲದಿಂದ ಬಂದವರೆಂದು ನಂಬುತ್ತಾರೆ. ಶಿವನ ಮಾವನಾದ ದಕ್ಷನು ಒಂದು ಯಜ್ಞವನ್ನು ಮಾಡಲು ಉದ್ದೇಶಿಸಿ, ಅಳಿಯನನ್ನು ಕರೆಯಲು ಬರುತ್ತಾನೆ. ಶಿವನನ್ನು ಕಂಡು ಕೈಯೆತ್ತಿ ನಮಸ್ಕರಿಸಿದಾಗ ಶಿವ ತಪೋಮಗ್ನನಾದುದರಿಂದ ಅದನ್ನು ಕಾಣದೆ ಮರು ನಮಸ್ಕಾರ ಮಾಡಲಿಲ್ಲ. ಇದರಿಂದ ಕುಪಿತನಾದ ದಕ್ಷನು ಶಿವ ಮತ್ತು ಅವನ ಹೆಂಡತಿ ಬಂದರೆ ಯಾರೂ ಸತ್ಕರಿಸಿ ಗೌರವ ತೋರಿಸಿಬೇಡಿ ಎಂದು ತನ್ನ ಮನೆಯ ಜನರಿಗೆ ಹೇಳಿದನು. ಶಿವನು ಬೇಡ ಎಂದರೂ ಕೇಳದೆ ಪಾರ್ವತಿ, ತನ್ನ ಮಗ ಗಣಪತಿಯೊಡನೆ, ಯಜ್ಞಕ್ಕೆ ಹೋದಾಗ ಯಾರೂ ಅವಳನ್ನು ವಿಚಾರಿಸಿಕೊಳ್ಳಲಿಲ್ಲ. ಆಗ ಪಾರ್ವತಿ ಕಣ್ಣೀರು ಸುರಿಸಿದಾಗ ಭೂಮಿ ಬಾಯಿ ತೆಗೆದುಕೊಂಡಿತು. ಪಾರ್ವತಿ ಅದರಲ್ಲಿ ಅದೃಶ್ಯಳಾದಳು. ಅವಳು ಮತ್ತೆ ಹಿಮವಂತನಿಗೆ ಹುಟ್ಟಿದಾಗ ಶಿವನು ಅವಳು ಯಾರೆಂಬುದನ್ನು ಹೇಳಿ ತಿರುಗಿ ಅವಳನ್ನೇ ಮದುವೆಯಾದನು. ಮತ್ತೆ ಅವಳಿಗೆ ವಿರಹ ಬರದೆ ಇರಬೇಕಾದರೆ, ಅವಳು ಒಂದು ವ್ರತ ಮಾಡಬೇಕೆಂದು, ಮೊರದಲ್ಲಿ ಬ್ರಾಹ್ಮಣರಿಗೆ ಉಂಡೆಗಳನ್ನು ದಾನ ಮಾಡಬೇಕೆಂದು ಶಿವನು ಹೇಳಿದನು. ಅದಕ್ಕೆ ಅವಳು ಚಿನ್ನದ ಮೊರ ಮಾಡಿಸಿದಳು. ಚಿನ್ನದ

ಮೊರಕ್ಕೆ ಹೆಣಿಗೆ ಇರುವುದಿಲ್ಲವಾದ್ದರಿಂದ ಬಿದುರಿನ ಮೊರವೇ ಶ್ರೇಷ್ಠ ಎಂದು ಶಿವನು ಹೇಳಿದನು. ಮತ್ತು ಹಾವೊಂದನ್ನು ಬಿದಿರನ್ನಾಗಿ ಪರಿವರ್ತಿಸಿದನು. ಗಣಪತಿ ಮತ್ತು ಇತರರು ಮನುಷ್ಯರ ಹಾಗೆ ಬದಲಾಗಿ ಪಾರ್ವತಿಯ ವ್ರತಕ್ಕೆ ಬಿದಿರು ಮೊರ ಹೆಣೆದುಕೊಡಿ ಎಂದು ಆದೇಶ ನೀಡಿದನು. ಹೆಣೆಯುವುದಕ್ಕೆ ತನ್ನ ತ್ರಿಶೂಲ ಮತ್ತು ಗದೆಗಳನ್ನು ಉಪಯೋಗಿಸಿರಿ ಎಂದು ಕೊಟ್ಟನು. ಗಣಪತಿ ಮತ್ತು ಗಣಗಳು ಮೊರ ಹೆಣೆದುಕೊಟ್ಟರು. ಆದರೆ ಅವರು ಮಹೇಂದ್ರಾಚಲದಲ್ಲೇ ಉಳಿದು ಗಂಧರ್ವ ಹೆಂಗಸರನ್ನು ಮದುವೆಯಾಗಿ ಮಕ್ಕಳನ್ನು ಪಡೆದರು. ಕೆಲವು ವರ್ಷದ ನಂತರ ಶಿವನು ಅವರು ವಾಪಸ್ಸು ಬರಬೇಕೆಂದು ಕರೆಕಳುಹಿಸಿದನು. ಹೆಂಡತಿ ಮಕ್ಕಳನ್ನು ಜೊತೆಯಲ್ಲಿ ಕರೆದೊಯ್ಯಲಾರದೆ ಗಣಪತಿ ಮತ್ತು ಇತರರು ಬಿದಿರು ವಸ್ತುಗಳನ್ನು ಹೆಣೆದು ಜೀವನ ನಿರ್ವಹಿಸಿ ಎಂದು ಹೇಳಿ ಹೊರಟು ಹೋದರು. ಆದುದರಿಂದ ಇವರಿಗೆ ಮಹೇಂದ್ರರು ಅಥವಾ ಮೇದರರು ಎಂದು ಹೆಸರು ಬಂತು.[೬]

ಅಲ್ಲದೇ, ಈ ಕಥೆಗೆ ಪೂರಕವಾಗಿ, ಮತ್ತೊಂದು ಕಥೆಯಲ್ಲಿ, ಪಾರ್ವತಿ ಒಮ್ಮೆ ಗೌರಿವ್ರತವನ್ನು ಮಾಡಬೇಕಿತ್ತು. ಆಗ ಅವಳಿಗೆ ಮೊರ ಬೇಕಾಯಿತು. 'ಮೊರ' ಎಲ್ಲಿ ಸಿಗುತ್ತದೆ ಎಂಬುದು ತಿಳಿಯದೆ ಶಿವನನ್ನು ಕೇಳಿದಳು. ಅವನು ತನ್ನ ವಾಹನವಾದ ವೃಷಭನಿಗೆ ಬಿದಿರು ಹೆಣೆಯುವ, ಮನುಷ್ಯನನ್ನು ತಯಾರಿಸಲು ಹೇಳಿದಳು. ವೃಷಭ ಮೆಲುಕು ಹಾಕಿದಾಗ ಮೇದರ ಪೂರ್ವಿಕ ಹುಟ್ಟಿದನು. ಪಾರ್ವತಿಯ ಕೋರಿಕೆಯನ್ನು ಅವನಿಗೆ ಹೇಳಿದಾಗ ಶಿವನ ಆಭರಣವಾದ ಹಾವನ್ನು ತೆಗೆದು ಒಂದು ಬೆಟ್ಟಕ್ಕೆ ಹೋದನು. ಅಲ್ಲಿ ಹಾವಿನ ತಲೆಯನ್ನು ನೆಟ್ಟಾಗ ಒಮ್ಮೆಲೆ ಬಿದಿರು ಕಾಣಿಸಿಕೊಂಡಿತು. ಬಿದಿರಿನಿಂದ ಮೊರ ಹೆಣೆದು ಅವನು ಹಾವನ್ನು ಶಿವನಿಗೆ ಹಿಂತಿರುಗಿಸಿದನು. ಬಿದಿರಿನ ಬೇರು ಹಾವಿನ ತರ ಇರುವುದನ್ನು ತೋರಿಸಿ ಕತೆಯ ಸತ್ಯವನ್ನು ಖಚಿತಪಡಿಸುತ್ತಾರೆ. ಮತ್ತು ಪುರಾಣ ಕಥೆಯ ಪ್ರಕಾರ, ಮಹಾದೇವನು, ಪಾರ್ವತಿಯ ಮೊರವನ್ನು ಬಯಸಿದಾಗ, ತನ್ನ ಕುತ್ತಿಗೆಯಿಂದ ಸರ್ಪವನ್ನು ತೆಗೆದು, ತಲೆ ಕೆಳಗಾಗಿ ಮಹೇಂದ್ರ ಪರ್ವತದಲ್ಲಿ ನೆಟ್ಟನು. ಅವುಗಳೇ ಬಿದಿರುಗಳಾದವು. ಶಿವಗಣಗಳು ಮೊರವನ್ನು ಸಿದ್ಧಪಡಿಸಿದವು. ಅಪ್ಸರೆಯರು ಈ ಪರ್ವತಕ್ಕೆ ಬಂದಾಗ ಶಿವಗಣಗಳು ಅವರನ್ನು ಕೂಡಿದರು. ಇವರ ಸಂತಾನವೇ ಮೇದರು.[೭]

### ೩.೨. ಮೂಲ ಮತ್ತು ಪ್ರಸಾರ

'ಮೇದ' ಬುಡಕಟ್ಟು ಸಮುದಾಯದ ಜನಾಂಗವು ಮೂಲತಃವಾಗಿ ಆಂಧ್ರಪ್ರದೇಶ, ತಮಿಳುನಾಡು ಪ್ರದೇಶಗಳಿಂದ ವಲಸೆ ಬಂದು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ನೆಲೆಸಿರುವರೆಂಬ ಮಾಹಿತಿಯು ಈ ಸಮುದಾಯದ ಹಿರಿಯರಿಂದ ಲಭ್ಯವಾಗುತ್ತದೆ. ಅದಕ್ಕೆ ಪೂರಕವಾಗಿಯೂ ಕೆಲವು ಗ್ರಂಥಗಳು ಈ ಮಾಹಿತಿಯನ್ನು ಪುಷ್ಟೀಕರಿಸುತ್ತವೆ. ಆ ಗ್ರಂಥಗಳು, ಈ ಕೆಳಕಂಡಂತಿವೆ.

E. Throston ಅವರ The Caste and Tribes of Southern India. Vo-5, ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರ The Mysore Tribes and Castes, ಇದರ ಜೊತೆಗೆ ಕನ್ನಡ

ಜಾನಪದ ವಿಶ್ವಕೋಶದಲ್ಲಿಯೂ ಇವರ ಬಗ್ಗೆ ಮಾಹಿತಿಯಿದೆ. The Scheduled Tribes, K.S.Singh, Karnataka State Gazetter, Part-I, The Scheduled Tribes-Bombay, The Ethnographical Survey of Mysore. ಈ ಗ್ರಂಥಗಳು ಮತ್ತು ಲೇಖನಗಳಲ್ಲಿ 'ಮೇದ', 'ಮೇದಾರ್', 'ಬುರುಡ', ಈ ಸಮನಾರ್ಥಕವಾದ ಹೆಸರುಗಳನ್ನು ಉಲ್ಲೇಖಿಸಲಾಗಿದೆ.

'ಮೇದ' ಜನಾಂಗವನ್ನು ಕುರಿತು, ವಿಸ್ತೃತವಾದ ಅಧ್ಯಯನಗಳು ಇನ್ನೂ ನಡೆಯಬೇಕಾಗಿದೆ. 'ಮೇದ' ಸಮುದಾಯದ ಸಾಂಸ್ಕೃತಿಕ ಪ್ರತಿನಿಧಿಯಾದ ಮೇದಾರ ಕೇತಯ್ಯನವರನ್ನು ಕುರಿತು, ಶ್ರೀ ಚಂದ್ರಶೇಖರ ಸ್ವಾಮೀಜಿಯವರು, 'ಶ್ರೀ ಕೇತೇಶ್ವರ ಚರಿತೆ' ಎನ್ನುವ ಕೃತಿಯನ್ನು ಬರೆದಿದ್ದಾರೆ. ಮೇದ ಸಮುದಾಯದ ಬಗ್ಗೆ ಮಂಡ್ಯದ, ಆನಂದ ಪರಾಂಡೆಯವರು 'ಕೇತೇಶ್ವರ ವಾಣಿ' ಎನ್ನುವ ಮಾಸಪತ್ರಿಕೆಯಲ್ಲಿ 'ಮೇದ' ಸಮುದಾಯದ ಬಗ್ಗೆ ಹಲವು ಸರಣಿ ಲೇಖನಗಳನ್ನು ಬರೆದಿದ್ದಾರೆ. ಹಾಗೂ ವೈ.ಕೆ. ಹಳೇಪೇಟೆ ಯವರ ಸಂಪಾದಕತ್ವದಲ್ಲಿ 'ಮೇದ ಗರ್ಜನೆ' ಎನ್ನುವ ಪತ್ರಿಕೆಯನ್ನು ಪ್ರಕಟಿಸುತ್ತಿದ್ದಾರೆ. ಈ ಪತ್ರಿಕೆಯಲ್ಲೂ ಮೇದ ಸಮಾಜದ ಬಗ್ಗೆ, ಈ ಸಮುದಾಯದ ಸಮಸ್ಯೆ, ಸವಾಲುಗಳು, ಜೀವನ ವ್ಯವಸ್ಥೆ, ಜೀವನ ವಿಧಾನದ ಬಗ್ಗೆ, ರಾಜಕೀಯ ಪಾತ್ರದ ಬಗ್ಗೆ ಸರಣಿ ಲೇಖನಗಳನ್ನು ಪ್ರಕಟಿಸಿದ್ದಾರೆ.

ಮೇದ ಸಮುದಾಯದಲ್ಲಿ ಕನ್ನಡ, ತೆಲುಗು, ತಮಿಳು, ಮರಾಠಿ, ಹಿಂದಿ ಹಾಗೂ ಇತರೇ ಭಾಷೆಗಳನ್ನು ಮಾತನಾಡುವ ಜನರಿದ್ದಾರೆ. ಇವರು ತಮ್ಮ ಜೀವನೋಪಾಯಕ್ಕಾಗಿ, ಹೊರ ರಾಜ್ಯಗಳಿಂದ ಬಂದವರಾಗಿದ್ದರೂ ಕೂಡ, ತಮ್ಮ ಮೂಲ ನೆಲೆಗಳಲ್ಲಿ ದೇವರ ಅಸ್ತಿತ್ವವನ್ನು ಉಳಿಸಿಕೊಂಡು, ಈಗಲೂ ಅಲ್ಲಿ ತಮ್ಮ ಪೂಜಾ ಕೈಂಕರ್ಯಗಳನ್ನು ಮಾಡಿಕೊಂಡು ಬರುತ್ತಿದ್ದಾರೆ. ಮೂಲತಃವಾಗಿ ಇವರ ನೆಲೆಗಳು ಬೆಟ್ಟ-ಗುಡ್ಡಗಳಲ್ಲಾದ್ದರಿಂದ ಅಲ್ಲಿಯೇ ತಮ್ಮ ದೈವಗಳನ್ನು ಪ್ರತಿಷ್ಠಾಪಿಸಿಕೊಂಡು, ಪೂಜಿಸಿಕೊಂಡು ಬರುತ್ತಿದ್ದಾರೆ. ಇಂತಹ ಬೆಟ್ಟ-ಗುಡ್ಡಗಳೇ ಈ ಹಿಂದೆ ಇವರ ಆದಿ ನೆಲೆಗಳಾಗಿದ್ದವು. ಇಂತಹ ಕಡೆ, ಆದಿ ಮಲ್ಲಮ್ಮ, ಮಾರಿ, ಮಲ್ಲಮ್ಮ, ಇತ್ಯಾದಿ ದೇವತೆಗಳನ್ನು ಪೂಜಿಸುತ್ತಾರೆ.

ಕಾಲಕ್ರಮೇಣ ಗುಡ್ಡ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಮೇದರು, ತಮ್ಮ ಕಚ್ಚಾವಸ್ತುಗಳನ್ನು ಹುಡುಕಿಕೊಂಡು, ಕರ್ನಾಟಕದ ಕಾಡಿನಂಚಿನ ಪ್ರದೇಶಗಳಿಗೆ ವಲಸೆ ಬಂದು, ಅಲ್ಲಿಯೇ ತಮ್ಮ ವಸತಿಗಳನ್ನು ಖಾಯಂ ಮಾಡಿಕೊಂಡಿರುವುದು ತಿಳಿದುಬರುತ್ತದೆ. ಮೇದರು ತಮ್ಮ ಜೀವನ ನಿರ್ವಹಣೆಗೆ, ಮೂಲತಃ ಕಚ್ಚಾವಸ್ತುವಾಗಿ ಬಿದಿರನ್ನೇ ಆಶ್ರಯಿಸಿಕೊಂಡಿರುವುದರಿಂದ, ಬಿದಿರಿನ ಉತ್ಪನ್ನಗಳಿಂದ ತಮ್ಮ ಜೀವನವನ್ನು ನಿರ್ವಹಿಸುತ್ತಿರುವುದಾಗಿ, ಈ ಸಮುದಾಯದ ವ್ಯಕ್ತಿಗಳ ಅಭಿಪ್ರಾಯವಾಗಿದೆ. ಅಲ್ಲದೇ ಕಾಡಿನಲ್ಲಿ ಸಿಗುವ ಬೆತ್ತವನ್ನು ಕೂಡ ವಸ್ತುಗಳನ್ನು ತಯಾರಿಸಲು ಬಳಸುತ್ತಿರುವುದು ತಿಳಿದುಬರುತ್ತದೆ.

ತಮ್ಮ ಉತ್ಪನ್ನಗಳ ಮಾರಾಟಕ್ಕಾಗಿ, ಪೇಟೆಗಳನ್ನು ಆಶ್ರಯಿಸಿಕೊಂಡು, ಈ ಸಮುದಾಯವು ಜೀವಿಸುತ್ತಿದೆ. ಕೆಲವೇ ಪ್ರದೇಶಗಳ ಹಳ್ಳಿಗಳಲ್ಲಿ ವ್ಯವಸಾಯವನ್ನು ಮಾಡುತ್ತಿದ್ದರೂ, ಈ ಜನಾಂಗವು

ಮೂಲತಃವಾಗಿ, ಬಿದಿರು, ಬೊಂಬು, ಬೆತ್ತಗಳಿಂದ, ಕುರ್ಚಿ, ಮೊರ, ಏಣಿ, ಸೋಪಾ, ಮಂಕರಿ, ಪುಟ್ಟಿ, ಇತರೇ ಅಲಂಕಾರಿಕ ವಸ್ತುಗಳನ್ನು, ಕರಕುಶಲಾತ್ಮಕ ವಸ್ತುಗಳನ್ನು ತಯಾರಿಸುತ್ತಾರೆ. ಇಂದು ಬಹುತೇಕವಾಗಿ, ಈ ಜನಾಂಗವು ತಮ್ಮ ಕಚ್ಚಾವಸ್ತುಗಳ ಕೊರತೆಯಿಂದ, ಪೇಟೆ, ಪಟ್ಟಣ, ನಗರಗಳಲ್ಲಿ ಜೀವಿಸುತ್ತ, ತಮ್ಮ ಮೂಲ ವೃತ್ತಿಯ ಜೊತೆಗೆ ಇತರೇ ಪರ್ಯಾಯ ವೃತ್ತಿಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ.

ಆಂಧ್ರಪ್ರದೇಶ ಮತ್ತು ತಮಿಳುನಾಡಿನಿಂದ ವಲಸೆ ಬಂದಂತಹ 'ಮೇದ' ಜನಾಂಗವು ಕರ್ನಾಟಕದ ಬಹುತೇಕ ಸ್ಥಳಗಳಲ್ಲಿ ವಾಸಿಸುತ್ತಿದೆ. ಕರ್ನಾಟಕದ ಸ್ಥಳೀಯ 'ಮೇದ' ಜನಾಂಗದೊಡನೆ, ವಲಸೆ ಬಂದ, ಈ ಜನಾಂಗವು, ವೈವಾಹಿಕ ಸಂಬಂಧಗಳಿಂದ ಬೆರೆತಿದೆ. ಕರ್ನಾಟಕದ ಬಹುತೇಕ ಎಲ್ಲಾ ನಗರ, ಪಟ್ಟಣಗಳು, ಹಾಗೂ ಆಯ್ದ ಹಳ್ಳಿಗಳಲ್ಲೂ ಈ ಮೇದ ಜನಾಂಗವು ನೆಲೆಸಿದೆ. ಕರ್ನಾಟಕದ ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು, ಉತ್ತರಕನ್ನಡ, ದಕ್ಷಿಣ ಕನ್ನಡ, ಚಿತ್ರದುರ್ಗ, ಹುಬ್ಬಳ್ಳಿ, ಧಾರವಾಡ, ಗುಲ್ಬರ್ಗಾ, ಸಾಗರ, ಹಾಸನ, ಚನ್ನಗಿರಿ, ಶಿಕಾರಿಪುರ, ಶಿರಾಳಕೊಪ್ಪ, ಆಯನೂರು, ಮೈಸೂರು, ಬೆಂಗಳೂರು, ದಾವಣಗೆರೆ, ಹಾವೇರಿ, ರಾಣಿಬೆನ್ನೂರು, ಬಿಜಾಪುರ, ತುಮಕೂರು, ಕೋಲಾರ, ಬಳ್ಳಾರಿ, ಮಡಿಕೇರಿ, ಇತ್ಯಾದಿ. ಜಿಲ್ಲಾಕೇಂದ್ರಗಳು, ಬಹುತೇಕ ತಾಲ್ಲೂಕು ಕೇಂದ್ರಗಳು ಹಾಗೂ ಹಳ್ಳಿ ಮತ್ತು ಗ್ರಾಮೀಣ ಪ್ರದೇಶಗಳಲ್ಲೂ ಮೇದ ಜನಾಂಗವು ನೆಲೆಸಿದೆ. ಇತ್ತೀಚಿನ ದಿನಗಳಲ್ಲಿ ಮೇದ ಜನಾಂಗವು ತಮ್ಮ ಜೀವನಕ್ಕೆ ನಗರ ಪ್ರದೇಶಗಳು ಮತ್ತು ಪಟ್ಟಣ ಪ್ರದೇಶಗಳಲ್ಲೇ ವಾಸಿಸುತ್ತಿರುವುದು ಕಂಡುಬರುತ್ತಿದೆ.

ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ನಗರ, ತಾಲ್ಲೂಕು ಕೇಂದ್ರಗಳಾದ, ಹಿರಿಯೂರು, ಹೊಸದುರ್ಗ, ಚಳ್ಳಕೆರೆ, ಹೊಳಲ್ಕೆರೆ, ಮೊಳಕಾಲ್ಮೂರು ತಾಲ್ಲೂಕು, ನಗರ ಪ್ರದೇಶಗಳಲ್ಲಿ 'ಮೇದ' ಜನಾಂಗವು ವಾಸಿಸುತ್ತಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ವಾಸಿಸುತ್ತಿರುವ ಈ ಮೇದ ಜನಾಂಗವು, ತಮ್ಮ ಮೂಲ ಕರಕುಶಲ ವೃತ್ತಿಗಳಿಗೆ ಬಿದಿರು, ಬೊಂಬು, ಬೆತ್ತಗಳಿಗಾಗಿ, ಪಕ್ಕದ ಜಿಲ್ಲೆಗಳಾದ ಶಿವಮೊಗ್ಗ ಮತ್ತು ಚಿಕ್ಕಮಗಳೂರಿನ ಕಾಡಿನ ಉತ್ಪನ್ನಗಳನ್ನು ಆಶ್ರಯಿಸಿಕೊಂಡಿದೆ. ಅಲ್ಲದೇ, ಹೊರರಾಜ್ಯಗಳಿಂದಲೂ, ತಮಗೆ ಬೇಕಾದ ಕಚ್ಚಾವಸ್ತುಗಳನ್ನು ತರಿಸಿಕೊಳ್ಳುತ್ತಾರೆ.

ಮೇದರು ತಮ್ಮ ಜೀವನೋಪಾಯಕ್ಕಾಗಿ, ಬಿದಿರು, ಬೊಂಬು, ಬೆತ್ತಗಳಿಂದ ಉತ್ಪನ್ನಗಳನ್ನು ಮಾಡುತ್ತಿದ್ದರೂ ಕೂಡ, ಈ ಜನಾಂಗದ ಜನರು, ಮೂಲ ವೃತ್ತಿಯನ್ನು ಮಾಡಲು ಕಚ್ಚಾವಸ್ತುಗಳ ಲಭ್ಯತೆಯ ಕೊರತೆಯಿಂದ ಇತರೇ ಬೇರೆ ಬೇರೆ ಉದ್ಯೋಗಗಳನ್ನು ಮಾಡಲು, ಕರ್ನಾಟಕದ ವಿವಿಧ ಭಾಗಗಳಿಗೆ ಹೋಗುವ, ಹೊರ ರಾಜ್ಯಗಳಿಗೆ ಹೋಗುವ ವಲಸೆಯು, ನಿರಂತರವಾಗಿ ನಡೆಯುತ್ತಿದೆ. ಸರ್ಕಾರಿ, ಖಾಸಗಿ, ವೃತ್ತಿಗಳನ್ನು ಈ ಜನಾಂಗದ ವಿದ್ಯಾವಂತ ಯುವಕರು ಆಯ್ದುಕೊಳ್ಳುತ್ತಿದ್ದಾರೆ. ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿರುವುದರಿಂದಾಗಿ, ಈ ಜನಾಂಗದಲ್ಲಿ ಶಿಕ್ಷಣದ ಜಾಗೃತಿಯು ಮೂಡುತ್ತಿರುವುದರಿಂದ ಯುವಕ ಜನಾಂಗವು, ತಮ್ಮ ಬುದ್ಧಿವಂತಿಕೆಯನ್ನು ಇತರೇ ಉದ್ಯೋಗಗಳನ್ನು ಮಾಡುವುದರಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ.

## ೩.೩. ವಸತಿ ವ್ಯವಸ್ಥೆ

ಮೇದ(ಮೇದಾರ) ಬುಡಕಟ್ಟು ಸಮುದಾಯವು, ಸಾಮಾನ್ಯವಾಗಿ, ಈ ಹಿಂದೆ ಕಾಡಂಚಿನ ಪ್ರದೇಶಗಳಲ್ಲಿ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ನಗರ, ಪಟ್ಟಣ ಪ್ರದೇಶಗಳಲ್ಲಿ ಮನೆ ಮಾಡಿಕೊಂಡು ವಾಸಿಸುತ್ತಿದ್ದಾರೆ. ನಗರ, ಪಟ್ಟಣ ಪ್ರದೇಶಗಳಲ್ಲಿ ಮೇದರ ಬೀದಿಯೆಂದೇ ಪ್ರತ್ಯೇಕವಾದ ಕೆಲವು ಬೀದಿಗಳಿವೆ. ಅಲ್ಲಿ ತಮ್ಮ ಖಾಯಂ ಮನೆಗಳಲ್ಲಿ ಹಾಗೂ ಬಾಡಿಗೆ ಮನೆಗಳಲ್ಲಿ ಈ ಜನಾಂಗವು ವಾಸಿಸುತ್ತಿದೆ.

ಸಾಮಾನ್ಯವಾಗಿ, ಚಿತ್ರದುರ್ಗ ಜಿಲ್ಲೆಯಲ್ಲಿ ವಾಸಿಸುತ್ತಿರುವ ಈ ಮೇದ ಜನಾಂಗವು ಬಹುತೇಕವಾಗಿ, ನಗರ ಪ್ರದೇಶಗಳಲ್ಲೇ ವಾಸಿಸುತ್ತಿದೆ. ಹಳ್ಳಿಗಳಲ್ಲಿ ವಾಸಿಸುತ್ತಿರುವ ಈ ಜನಾಂಗವು, ಗುಡಿಸಲು ಹಾಗೂ ಹೆಂಚಿನ ಮನೆಗಳಲ್ಲಿ ವಾಸಿಸುತ್ತಿದೆ. ಈ ಜನಾಂಗವು ವಾಸಿಸುವ ಪ್ರದೇಶವು ಸೂಕ್ತವಾಗಿ ಆಯ್ಕೆ ಮಾಡಿಕೊಂಡಿದ್ದಾಗಿರುತ್ತದೆ. ಸಾಮಾನ್ಯವಾಗಿ ಚೌಕಕಾರದ ಮನೆಗಳನ್ನೇ ಕಟ್ಟಿ ವಾಸಿಸುತ್ತಿರುತ್ತಾರೆ. ಮನೆಯ ಎದುರು ಅಥವಾ ಅಕ್ಕ ಪಕ್ಕದಲ್ಲಿ ಸ್ಮಶಾನವಿರದಂತೆ ಎಚ್ಚರಿಕೆ ವಹಿಸಿ ವಾಸಿಸುತ್ತಾರೆ. ಗಾಳಿ-ಬೆಳಕು ಚೆನ್ನಾಗಿರುವಂತೆ ಮನೆಗಳನ್ನು ಕಟ್ಟಿಕೊಳ್ಳುತ್ತಾರೆ. ಜೌಗು ಪ್ರದೇಶಗಳು, ಹಾಗೂ ಚೌಳು ಮತ್ತು ಉಸುಕು ಮಣ್ಣಿನ ಪ್ರದೇಶಗಳಲ್ಲಿ ಇವರು ವಾಸಿಸಲು ಬಯಸುವುದಿಲ್ಲ. ಮೇದ ಜನಾಂಗದಲ್ಲಿನ ಹಿರಿಯರ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟು, ತಮ್ಮ ವಾಸಸ್ಥಳವು ಎತ್ತರ ಪ್ರದೇಶದಲ್ಲಿರುವಂತೆ ಮತ್ತು ಗಟ್ಟಿಯಾಗಿರುವಂತೆ ನೋಡಿಕೊಂಡು ವಾಸಸ್ಥಳ ಪ್ರದೇಶಗಳನ್ನು ಆಯ್ದುಕೊಳ್ಳುತ್ತಾರೆ. ತಮ್ಮ ನಂಬಿಕೆಯಂತೆ, ಭೂತ, ಪ್ರೇತ, ಪಿಶಾಚಿಗಳ, ಗಾಳಿಗಳ ಕಾಟ ಇಲ್ಲದ ಪ್ರದೇಶವನ್ನು ಆಯ್ದುಕೊಳ್ಳುತ್ತಾರೆ. ದೋಷವೇನಾದರೂ ಇದ್ದರೆ ಪೂಜೆ-ಪುನಸ್ಕಾರಗಳನ್ನು ಮಾಡಿ, ತಮ್ಮ ದೋಷವನ್ನು ಬಗೆಹರಿಸಿಕೊಳ್ಳುತ್ತಾರೆ.

ಮನೆ ಕಟ್ಟುವುದಕ್ಕಿಂತ ಮುಂಚೆ, ಗುದ್ದಲಿ ಶಾಸ್ತ್ರವನ್ನು ಶಾಸ್ತ್ರೋಕ್ತವಾಗಿ ಮಾಡುತ್ತಾರೆ. ಗುದ್ದಲಿಶಾಸ್ತ್ರವನ್ನು ಶುಭ ಮುಹೂರ್ತವನ್ನು ನೋಡಿ, ಹಿರಿಯರು ನೆರವೇರಿಸಿಕೊಡುತ್ತಾರೆ. ಪೂಜೆ ಮಾಡುವಂತಹ ಜಾಗದಲ್ಲಿ ನಾಲ್ಕು ಹಸಿ ಕಡ್ಡಿಗಳನ್ನು ಹೂಳಿ, ನೀರನ್ನು ಚಿಮುಕಿಸುವುದರ ಮೂಲಕ, ತೆಂಗಿನ ಕಾಯಿಯನ್ನು ಒಡೆದು, ನಿವೇದಿಸಿದ ನಂತರ, ಗುದ್ದಲಿಯಿಂದ ಮಣ್ಣನ್ನು ತೆಗೆದು, ಚೌಕಾಕಾರವನ್ನಾಗಿ ಮಾಡಿ, ಆ ಗುದ್ದಲಿ ಗುಂಡಿಗೆ ಹಾಲು, ನೀರನ್ನು ಹಾಕಿ, ಹೂವನ್ನು ಹಾಕುವುದರ ಮೂಲಕ ಊದಿನ ಕಡ್ಡಿಯನ್ನು ಹಚ್ಚಿ, ಪೂಜಿಸುತ್ತಾರೆ. ಅಲ್ಲಿ ನೆರೆದ ಇತರೇ ತಮ್ಮ ಸಮಾಜದ ಬಾಂಧವರಿಗೆ ಸಿಹಿ-ಪದಾರ್ಥಗಳನ್ನು, ಪ್ರಸಾದವನ್ನು ಹಂಚುತ್ತಾರೆ.

ಈಗಲೂ ಹಳ್ಳಿ ಮತ್ತು ಗ್ರಾಮೀಣ ಪ್ರದೇಶಗಲ್ಲಿ 'ಮೇದರು' ಬಿದಿರು ಮತ್ತು ಬೊಂಬುಗಳಿಂದ ಮನೆಗಳನ್ನು ಕಟ್ಟುತ್ತಾರೆ. ಹಿಂದಿನ ಕಾಲದಿಂದಲೂ ಕೂಡ ಮೇದರು ಬಿದಿರು, ಬೊಂಬು, ಬೆತ್ತವನ್ನು ಆಧರಿಸಿಕೊಂಡು ಜೀವಿಸಿರುವುದರಿಂದ, ಗ್ರಾಮೀಣ ಪ್ರದೇಶಗಳಲ್ಲಿನ ಆರ್ಥಿಕವಾಗಿ ಸ್ಥಿತಿವಂತರಲ್ಲದವರು ಈಗಲೂ ಬಿದಿರು, ಬೊಂಬು, ಬೆತ್ತಗಳಿಂದ ನಿರ್ಮಿಸಿದ ಮನೆಗಳಲ್ಲೇ ವಾಸಿಸುತ್ತಿದ್ದಾರೆ. ಇವರ

ವಾಸಸ್ಥಳದ ಮನೆಗಳು, ಗಾಳಿ, ಮಳೆಯ, ಒತ್ತಡಗಳಿಗೆ ತಾಳಿಕೊಳ್ಳುವಂತೆ, ಭದ್ರವಾಗಿ, ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಚಳಿಗಾಲದಲ್ಲಿ ಕೂಡ, ಮೇದರ ಬಿದಿರು ಮನೆಗಳು ಬೆಚ್ಚಗಿರುತ್ತವೆ. ಸುತ್ತಲೂ ತಡಿಕೆಯ ರೀತಿಯಲ್ಲಿರುವ ಮನೆಗಳ ಚಾವಣಿಗಳು, ಬಿದಿರು ಮತ್ತು ಬೊಂಬಿನಿಂದಲೇ ಆಗಿರುತ್ತವೆ. ಅದರ ಜೊತೆಗೆ ತೆಂಗು ಮತ್ತು ಅಡಕೆಯ ಗರಿಗಳು ಮತ್ತು ಬೊಂಬುಗಳನ್ನು ಕೂಡ ಬಳಸಿ, ಮನೆಗಳನ್ನು ನಿರ್ಮಿಸುತ್ತಾರೆ.

ಮೇದರ ಓಣಿ ಅಥವಾ ಮೇದರ ಬೀದಿ ಎಂದು ಕರೆಯಲ್ಪಡುವ ಇವರು ವಾಸಿಸುವ ಸ್ಥಳವು ಸಾಂಘಿಕತೆಯ ಪ್ರತೀಕವೆಂಬಂತೆ, ಇವರ ಮನೆಗಳು ಸಾಲು–ಸಾಲಾಗಿ ನಿರ್ಮಿಸಲ್ಪಟ್ಟಿರುತ್ತವೆ. ಮೇದ ಜನಾಂಗದ ಜನರು ಪರಸ್ಪರ ಸಹಾಯ, ಸಹಕಾರ ಬಾಳ್ವೆಯಿಂದ ಜೀವನವನ್ನು ನಡೆಸುತ್ತಾರೆ. ಪ್ರತಿ ಕುಟುಂಬದ ಆರ್ಥಿಕ ಸ್ಥಿತಿಗತಿಗೆ ತಕ್ಕಂತೆ, ಕುಟುಂಬದ ಸದಸ್ಯರ ಸಂಖ್ಯೆಗೆ ಅನುಗುಣವಾಗಿ ಮನೆಗಳನ್ನು ನಿರ್ಮಿಸಿಕೊಂಡು ಜೀವಿಸುತ್ತಾರೆ. ಈ ಜನಾಂಗವು ಎಷ್ಟೇ ಸಿರಿವಂತಿಕೆಯಲ್ಲಿನ ಕುಟುಂಬಗಳೂ ಕೂಡ ತಮ್ಮ ಮೂಲ ವೃತ್ತಿಯಾದ ಬಿದಿರು, ಬಂಬೂ, ಬೆತ್ತಗಳ ವೃತ್ತಿಯನ್ನು ಮಾಡುತ್ತಿರುತ್ತಾರೆ. ವೈಯಕ್ತಿಕವಾಗಿ ಕರಕುಶಲ ಕಲೆಗಳಲ್ಲಿ, ವೃತ್ತಿಗಳಲ್ಲಿ ತೊಡಗಿಸಿಕೊಳ್ಳದಿದ್ದರೂ ಕೂಡ ಬಿದಿರು, ಬೊಂಬು, ಬೆತ್ತದ ವ್ಯಾಪಾರ, ವ್ಯವಹಾರಗಳನ್ನು ಮಾಡುತ್ತಿರುತ್ತಾರೆ. ತಮ್ಮ ಮನೆಗಳ ಮುಂದೆ, ಈ ಜನಾಂಗದ ಮೂಲ ಸಂಕೇತದಂತೆ, ಬಿದಿರು, ಬೊಂಬು, ಬೆತ್ತಗಳು ಇದ್ದೇ ಇರುತ್ತವೆ.

ಮೇದ ಜನಾಂಗವು ಮನೆಗಳನ್ನು ನಿರ್ಮಿಸುವ ಸಂದರ್ಭದಲ್ಲೇ ವಾಸ್ತು ಪ್ರಕಾರವಾಗಿ ಮನೆಯನ್ನು ವಿಂಗಡಿಸಿರುತ್ತಾರೆ. ತಮ್ಮ ಮನೆಯ ದಕ್ಷಿಣಕ್ಕೆ ಅಡುಗೆ ಮನೆ, ಪೂರ್ವ ಮುಖವಾಗಿ ದೇವರ ಮನೆ ಅಥವಾ ದೇವರ ಅಟ್ಟ, ದೇವರ ಕೋಣೆಯಲ್ಲಿ ತಮ್ಮ ತಮ್ಮ ಮನೆ ದೇವರುಗಳಾದ ತಿರುಪತಿ ತಿಮ್ಮಪ್ಪ, ಭರಮಪ್ಪ, ಶಿವ, ತ್ರಿಶೂಲ, ಕತ್ತಿ, ಚಾಮುಂಡಿ, ದುರುಗಮ್ಮ, ಮಾರಮ್ಮ ಮುಂತಾದ ದೇವರುಗಳನ್ನು ಪೂಜಿಸುತ್ತಾರೆ. ಹೊಸ ಮನೆ ಪ್ರವೇಶಕ್ಕೆ ಶುಭ ಮುಹೂರ್ತವನ್ನು ನಿಗದಿಪಡಿಸಿಕೊಂಡು, ಈ ಜನಾಂಗದ ಹಿರಿಯರು ಪೂಜೆಯನ್ನು ನೆರವೇರಿಸುತ್ತಾರೆ. ನಂತರ, ಕುಟುಂಬದ ಸದಸ್ಯರು ಗೃಹಪ್ರವೇಶ ಮಾಡಿ, ಹಾಲನ್ನು ಒಲೆಯ ಮೇಲೆ ಇಟ್ಟು ಆ ಹಾಲನ್ನು ಕಾಯಿಸುವುದರ ಮೂಲಕ ಉಕ್ಕಿಸಿ, ಅದಕ್ಕೆ ಸಕ್ಕರೆಯನ್ನು ಹಾಕಿ, ಗೃಹಪ್ರವೇಶ ಕಾರ್ಯಕ್ರಮಕ್ಕೆ ಬಂದಿರುವ ಬಾಂಧವರಿಗೆ ಕೊಡುತ್ತಾರೆ. ಮನೆಯ ಗೃಹಪ್ರವೇಶವನ್ನು ಜೋಯಿಸರು ಅಥವಾ ಆಚಾರಿಗಳ ಉಪಸ್ಥಿತಿಯಲ್ಲಿಯೂ ಮಾಡುತ್ತಾರೆ. ತಮ್ಮ ಮನೆಗಳಲ್ಲಿ ಅಡುಗೆಮನೆ, ದೇವರ ಕೋಣೆ, ಮಲಗುವ ಕೊಠಡಿ, ಮೈಲಿಗೆಯವರ ಕೋಣೆ, ಕೊಟ್ಟಿಗೆ ಮನೆ, ಇತ್ಯಾದಿಯಾಗಿ ಪ್ರತ್ಯೇಕವಾದ ಕೋಣೆಗಳಿರುತ್ತವೆ. ಆದರೆ, ತೀರ ಬಡತವನ್ನು ಹೊಂದಿರುವ ಮೇದರ ಮನೆಗಳು ಪ್ರತ್ಯೇಕವಾದ ಕೋಣೆಗಳನ್ನು ಹೊಂದಿರುವುದಿಲ್ಲ. ಒಂದೇ ಕೋಣೆಯಲ್ಲಿ ಹಲವು ವಿಭಾಗಗಳನ್ನಾಗಿ ಮಾಡಿಕೊಂಡು ಜೀವಿಸುತ್ತಾರೆ.

ಗೃಹಪ್ರವೇಶಕ್ಕೆ ವೀರಶೈವ ಅಯ್ನೋರು ಅಥವಾ ಬ್ರಾಹ್ಮಣ, ಜೋಯಿಸರು ಹೇಳುವ ಶಾಸ್ತ್ರವನ್ನು ಒಪ್ಪಿಕೊಳ್ಳುತ್ತಾರೆ. ಗೋಡೆಗಳಿಗೆ 'ಚಟ್ಟು' ಕಟ್ಟುತ್ತಾರೆ. ಬಲಿ ಹಾಕುತ್ತಾರೆ. ಕೋಳಿಯನ್ನು ಬಲಿ ಕೊಟ್ಟು ಮನೆಗೆ ಇವರ ಹಿರಿಯರು ಶಾಂತಿ ಮಾಡುತ್ತಾರೆ. ಹಾಲು ಉಕ್ಕಿಸುವುದು, ಗಂಗೆ ತರುವುದು, ಗೋಪೂಜೆ, ತುಳಸೀಪೂಜೆ, ವಾಸ್ತುಪೂಜೆ ಮತ್ತು ಮನೆ ದೇವರಿಗೆ ಪುಣ್ಯಾಹವರ್ತನೆಗಳನ್ನು ಜೋಯಿಸರು ನೆರವೇರಿಸುತ್ತಾರೆ. ಬಂತಂತಹ ಅತಿಥಿಗಳಿಗೆ, ಮೇದ ಜನಾಂಗದ ಅತಿಥಿಗಳಿಗೆ ಊಟದ ವ್ಯವಸ್ಥೆಯಿರುತ್ತದೆ. ಈ ದಿನ ಪಾಯಸ-ಪರಮಾನ್ನ, ಅನ್ನ, ಹುಳಿ ಮುಂತಾಗಿ ಸಸ್ಯಾಹಾರವನ್ನು ಮಾತ್ರ ಮಾಡಿಸುತ್ತಾರೆ. ಪೂಜೆ ಮಾಡಿಸಿದವರಿಗೆ 'ಪಡಿ' ಹಾಗೂ ದಾಸಯ್ಯನವರಿಗೆ 'ಎಡೆ' ಹಾಕುವ ಪದ್ಧತಿಯು ಕೆಲವರಲ್ಲಿದೆ. ಇಂತಹ ಮನೆಗಳು ಪೇಟೆಯ ಇತರ ಮನೆಗಳನ್ನೇ ಹೋಲುತ್ತವೆ. ಬಿದಿರು ಕೆಲಸಕ್ಕೆ ಅನುಗುಣವಾಗುವಂತಹ ಹಜಾರವೊಂದು ಮುಂದುಗಡೆ ಕಟ್ಟಿರುತ್ತಾರೆ. ಮನೆಯ ಹಿಂಭಾಗಕ್ಕೆ ಅಥವಾ ಬಲಮಗ್ಗುಲಿಗೆ ಕೊಟ್ಟಿಗೆಯಿರುತ್ತದೆ. ಕೊಟ್ಟಿಗೆಗೆ ತಾಗಿ ಮುಟ್ಟಾದವರು ಉಳಿಯುವ ಗುಡಿಸಲು ಕಟ್ಟುತ್ತಾರೆ. ಹೀಗೆ ಹಲವು ಮನೆಗಳು, ಗುಡಿಸಲು ಇದ್ದರೆ ಅದಕ್ಕೆ ಬಿದಿರಿನ ತಟ್ಟಿ, ಬೊಂಬುನೆಟ್ಟು, ತಮ್ಮ ಹಾಡಿಯನ್ನು ನಿರ್ಧರಿಸುತ್ತಾರೆ. ಹೆಚ್ಚಾಗಿ ಮೇದರು ವಾಸಿಸುವ ಸ್ಥಳವನ್ನು 'ಮ್ಯಾದರ ಹಟ್ಟಿ' ಎಂದು ಹಳ್ಳಿಯವರು ಹೇಳಿದರೆ, 'ಮೇದರ ಕೇರಿ' ಅಥವಾ ಬೀದಿ ಅಥವಾ ಓಣಿ ಎಂದು ಪೇಟೆಯವರು ಸೂಚಿಸುತ್ತಾರೆ.[೮]

ಪಟ್ಟಣ, ನಗರಗಳಲ್ಲಿ ಮನೆ ಕಟ್ಟಿಕೊಂಡಿರುವ ಮೇದರ ಜನಾಂಗದ ಮನೆಗಳ ಮಧ್ಯಭಾಗದಲ್ಲಿ(ಪಡಶಾಲೆ) ಬಿದಿರಿನ ಕರಕುಶಲ ಕೆಲಸವನ್ನು ಮಾಡುವುದಕ್ಕೆ ಅನುಕೂಲವಾಗಲು ತಕ್ಕ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಾರೆ. ಹಿಂದಿನ ಕಾಲದಲ್ಲಿ ನೀರು ಲಭ್ಯವಾಗುವಂತಹ ಪ್ರದೇಶಗಳಲ್ಲಿ ಜೀವನ ಮಾಡುತ್ತಿದ್ದ ಮೇದರ ಜನಾಂಗವು ತಮ್ಮ ಕಾಡಿನ ಸೀಮೆಯನ್ನು ಬಿದಿರು ಕಾಡಿನ ಎಲ್ಲೆಯನ್ನು ನಿರ್ಧರಿಸಲಾಗುತ್ತಿದ್ದು, ಬೇರೆ ಬಿದಿರು ಕಾರ್ಯ ನಿರ್ವಹಿಸುವ ಕೆಲಸಗಾರರು ತಮ್ಮ ಹಾಡಿಯೊಳಗೆ ಬಂದು ಬಿದಿರನ್ನು ಕಡಿಯುವ ಹಾಗಿರಲಿಲ್ಲ. ಹಾಗೇನಾದರೂ ಆದರೆ, ತಮ್ಮ ಮೇದ ಜನಾಂಗದ ಜಾತಿ ಪಂಚಾತಿಯ ಪ್ರಕಾರ ಬಿದಿರನ್ನು ಕಡಿದ ಇತರೇ ಜಾತಿಯವರು ದಂಡ ಕಟ್ಟ ಬೇಕಾಗುತ್ತಿತ್ತು. ತಮ್ಮ ಹಾಡಿಯಲ್ಲಿರುವ ದೇವರುಗಳು ಇರುವ ಸ್ಥಳಗಳಿಗೆ ಇತರರು ಬಂದರೆ, ಅದು ಅಪವಿತ್ರವಾಯಿತೆಂದು ಭಾವಿಸಲಾಗುತ್ತದೆ. ಆದ್ದರಿಂದ ತಮ್ಮ ಹಾಡಿಯ ಪ್ರದೇಶದ ರಕ್ಷಣೆಗಾಗಿ ಶಕ್ತಿ ದೇವತೆಗಳನ್ನು ಸ್ಥಾಪಿಸಿಕೊಂಡು ಪೂಜಿಸುತ್ತಿದ್ದರು.

ಮೇದರ ಜನಾಂಗದ ಕೇರಿಗಳಲ್ಲಿ ದೇವರುಗಳನ್ನು ಪ್ರತಿಷ್ಠಾಪಿಸಿ, ಪೂಜಿಸುತ್ತಾರೆ. ದೇವರುಗಳ ದೇವಸ್ಥಾನಗಳು ಎತ್ತರ ಪ್ರದೇಶದಲ್ಲಿದ್ದು ಚೌಕಾಕಾರದ ಅಳತೆಯನ್ನು ಹೊಂದಿರುತ್ತವೆ. ಮರದ ಜಗುಲಿ ಅಥವಾ ಸುತ್ತಲೂ ಕಲ್ಲಿನ ಕಟ್ಟೆಯನ್ನು ಕಟ್ಟುವುದರ ಮೂಲಕ ಅಲ್ಲಿ ದೇವತೆಗಳ ಸಂಕೇತಗಳನ್ನಿಟ್ಟು ಪೂಜಿಸುತ್ತಾರೆ. ದೇವತೆಗಳ ಸಂಕೇತಗಳಾಗಿ ಕಲ್ಲು-ಗುಂಡುಗಳು, ಗಂಟೆ, ದೀಪ, ವಿಗ್ರಹಗಳ ರೂಪದಲ್ಲಿ ಪೂಜಿಸುತ್ತಾರೆ. ಬೇವಿನ ಮರ, ಅತ್ತಿಯ ಮರದ ಅಡಿಗಳಲ್ಲಿ ದೇವತೆಗಳ

ರೂಪಗಳನ್ನು ಪೂಜಿಸಲಾಗುತ್ತದೆ. ತ್ರಿಶೂಲಗಳನ್ನು ಶಕ್ತಿದೇವತೆಗಳ ಜೊತೆಗೆ ಇಟ್ಟು ಪೂಜಿಸುತ್ತಾರೆ. ಮನೆಗಳಲ್ಲಿ ಬೆತ್ತದ ಬುಟ್ಟಿಗಳಲ್ಲಿನ ದೇವರನ್ನು ಪೂಜಿಸುತ್ತಾರೆ. ಆ ಬೆತ್ತದ ಬುಟ್ಟಿಯ ಸುತ್ತಲೂ ನೆಲವನ್ನು ಬಳಿಯುತ್ತಾರೆ. ನೆಲವನ್ನು ಒರೆಸಿ, ಸಾರಿಸಿ, ಎಡೆಯನ್ನು ಇಡುತ್ತಾರೆ. ದೇವರುಗಳಿಗೆ, ದೇವತೆಗಳಿಗೆ ಬಲಿಯನ್ನು ಕೊಡಲಾಗುತ್ತದೆ. ಬಲಿಗಂಬಗಳನ್ನು ಸ್ಥಾಪಿಸಿರುತ್ತಾರೆ. ದೇವತೆಗಳಾದ ಮಾರಿ, ಚಾಮುಂಡಿ, ಚೌಡಿ, ದೇವತೆಗಳ ಎದುರಿನಲ್ಲಿ ಬಲಿ ಪೀಠವನ್ನು ಪ್ರತಿಷ್ಠಾಪಿಸುವುದರ ಮೂಲಕ ಬಲಿಪೀಠವನ್ನು ಪೂಜೆಯ ದಿನದಂದು ಶುದ್ಧಗೊಳಿಸಿ, ಬಲಿಯನ್ನು ಕೊಡುವ ಸಂಪ್ರದಾಯವು ಈಗಲೂ ಅಸ್ತಿತ್ವದಲ್ಲಿದೆ. ಕಾಡಿನ ದೇವತೆಗಳಾದ ಮಾರಮ್ಮ, ಯಲ್ಲಮ್ಮ, ಮಲ್ಲಮ್ಮ ಮುಂತಾದ ದೇವರ ದೇವಾಲಯಗಳ ಸುತ್ತಾ ಬೇವಿನ ಅಥವಾ ಮಾವಿನ ತೋರಣವನ್ನು ನಿರ್ಮಿಸಿಕೊಳ್ಳುವುದರ ಮೂಲಕ ಅದರ ಒಳಗೆ ಪೂಜೆ, ಮತ್ತು ಬಲಿಯ ಕಾರ್ಯವನ್ನು ನೆರವೇರಿಸಿಕೊಳ್ಳುತ್ತಾರೆ. ಸ್ಥಳಾವರಣದ ಪರಿಶುದ್ಧತೆಯನ್ನು ಕಾಪಾಡುವುದಕ್ಕಾಗಿ ನೆಲವನ್ನು ತೊಳೆದು ಹಸು ಅಥವಾ ಎತ್ತಿನ ಸಗಣಿಯಿಂದ ಬಳಿದು ಕ್ರಿಯಾವಿಧಿಗಳನ್ನು, ಪೂಜೆಗಳನ್ನು ನೆರವೇರಿಸುತ್ತಾರೆ. ದೇವರುಗಳಿಗೆ ನೈವೇದ್ಯ(ಎಡೆ)ವನ್ನು ಇಡುವ ಜಾಗದಲ್ಲಿ ಬಿದಿರು ಚಾಪೆ ಅಥವಾ ಬಟ್ಟೆಯನ್ನು ಹಾಸಲಾಗುತ್ತದೆ. ಹಣ್ಣು-ಕಾಯಿ, ಫಲ-ತಾಂಬೂಲವನ್ನು ದೇವತೆಗಳಿಗೆ ನೈವೇದ್ಯಕ್ಕಾಗಿ ಇಡುವಾಗಲೂ ಕೂಡ ಆ ಸ್ಥಳದ ಪರಿಶುದ್ಧತೆ, ಕಾಪಾಡಿಕೊಳ್ಳಲಾಗುತ್ತದೆ. ಮೈಲಿಗೆಯಾಗದಂತೆ ಎಚ್ಚರಿಕೆಯನ್ನು ವಹಿಸಲಾಗುತ್ತದೆ.

### ೩.೪. ಬಂಧುತ್ವ ಮತ್ತು ವಿವಾಹ

ಭಾರತೀಯರ ಸಂಸ್ಕೃತಿಯು ವಿವಾಹಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡುತ್ತದೆ. ಮೇದರ ಸಮಾಜದಲ್ಲಿನ ಬಂಧುತ್ವವು ಅವರ ವಿವಾಹಗಳ ಮೂಲಕವಾಗಿ ನಿರ್ಧರಿಸಲ್ಪಡುತ್ತದೆ. 'ಮೇದ'ರಲ್ಲಿ ಇರುವ ಕುಲ, ಬೆಡಗುಗಳ ಆಧಾರಗಳ ಮೇಲೆ ತಮ್ಮ ವಿವಾಹಗಳನ್ನು ಮಾಡಿಕೊಳ್ಳುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ವಾಸಿಸುತ್ತಿರುವ ಮೇದರು, ಕರ್ನಾಟಕದ ಇತರೇ ಭಾಗಗಳಲ್ಲಿ ಪ್ರಚಲಿತವಿರುವ ಸಾಂಪ್ರಾದಾಯಿಕ ಆಚರಣೆಗಳನ್ನೇ ತಮ್ಮ ವೈವಾಹಿಕ ಸಂದರ್ಭದ ಆಚರಣೆಗಳಲ್ಲಿ ಅನುಸರಿಸುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿನ ಮೇದ(ಮೇದಾರ) ಜನಾಂಗವು ಕರ್ನಾಟಕದ ಇತರೇ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮೇದರೊಂದಿಗೆ ವೈವಾಹಿಕ ಸಂಬಂಧಗಳನ್ನು ಮಾಡಿಕೊಳ್ಳುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿನ ಮೇದರು, ಬಹುತೇಕವಾಗಿ, ದಾವಣಗೆರೆ, ಶಿವಮೊಗ್ಗ, ಬಳ್ಳಾರಿ, ಮೈಸೂರು, ರಾಯಚೂರು, ಬೆಂಗಳೂರು, ಕೊಡಗು, ಹಾವೇರಿ, ಹುಬ್ಬಳ್ಳಿ, ಧಾರವಾಡ ಪ್ರದೇಶಗಳಲ್ಲಿ ವಾಸಿಸುತ್ತಿರುವ ಮೇದರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿಕೊಂಡಿರುವುದು ಕಂಡು ಬರುತ್ತದೆ. ಅಲ್ಲದೇ ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರದ ಪ್ರದೇಶಗಳೊಂದಿಗೂ ವೈವಾಹಿಕ ವಿಚಾರಗಳಲ್ಲಿ ಸಂಬಂಧಗಳನ್ನು ಹೊಂದಿರುವುದು ಕಂಡುಬರುತ್ತದೆ. ಸ್ವಂತ ಅಕ್ಕನ ಮಗಳನ್ನು ಮಾನವ ಮಗ, ಮಗಳನ್ನು, ವಿವಾಹವಾಗುತ್ತಿರುವುದು ಅವರ ರಕ್ತಸಂಬಂಧದ ಬಾಂಧವ್ಯವನ್ನು

ಪ್ರತಿಬಿಂಬಿಸುತ್ತದೆ. ಪ್ರತಿಯೊಂದು ಸಮುದಾಯ, ಜನಾಂಗವು, ತಮ್ಮ ಜನಾಂಗ, ಸಮುದಾಯವು ಮುಂದುವರೆದುಕೊಂಡು ಹೋಗಲು, ಆ ಜನಾಂಗ, ಸಮುದಾಯದ ಸಂತಾನೋತ್ಪತ್ತಿ ಅಗತ್ಯವಾಗಿರುವುದರಿಂದ, ಆ ಜನಾಂಗವು ತಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ, ವಿವಾಹದ ಮೂಲಕ ಬಂಧುತ್ವವನ್ನು ಹೊಂದುತ್ತದೆ. ಅದೇ ರೀತಿಯಲ್ಲಿ ಮೇದ ಬುಡಕಟ್ಟು ಸಮುದಾಯದಲ್ಲಿ ವಿವಾಹಕ್ಕೆ ಹೆಚ್ಚಿನ ಮನ್ನಣೆ ಇದೆ. ಅಂತರ್ಜಾತಿಯ ವಿವಾಹಗಳೂ ಕೂಡ ಇತ್ತೀಚಿನ ದಿನಗಳಲ್ಲಿ ಕಂಡುಬರುತ್ತಿವೆ. ಆದಾಗ್ಯೂ ಮೇದ ಬುಡಕಟ್ಟು ಸಮುದಾಯವು, ತನ್ನದೇ ಜನಾಂಗದ, ತನ್ನದೇ ಜಾತಿಯ ವೈವಾಹಿಕ ಸಂಬಂಧಗಳಿಗೆ ಹೆಚ್ಚಿನ ಮಾನ್ಯತೆಯನ್ನು ನೀಡುತ್ತದೆ.

ಮೇದರು ಅವರು ವಾಸಿಸುವ ಪ್ರದೇಶಗಳಿಗೆ ಅನುಗುಣವಾಗಿ, ಆಚರಣೆಗಳಿಗೆ ಅನುಗುಣವಾಗಿ ಮೇದರಲ್ಲಿ ಹಲವು ಕುಲ, ಬಳಿ, ಬೆಡಗನ್ನು ಹೊಂದಿರುತ್ತಾರೆ. ಕನ್ನಡ ಮೇದರು, ತೆಲುಗು ಮೇದರು, ತಮಿಳು ಮೇದರುಗಳಲ್ಲಿ ಕುಲ ಪಂಗಡಗಳಲ್ಲಿ ಸಾಮ್ಯತೆ ಇದೆ. ಕನ್ನಡ ಮೇದರು ೮ ಬಗೆಯ ಕುಲ ಪಂಗಡಗಳನ್ನು ಹೊಂದಿದ್ದಾರೆ. ಈ ಕುಲ ಪಂಗಡಗಳಲ್ಲಿ ತಮಗೆ, ಹೊಂದಾಣಿಕೆಯಾಗುವಂತಹ ಕುಲಗಳೊಂದಿಗೆ ಮಾತ್ರ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾರೆ. ಮೇದರ ವೈವಾಹಿಕ ಸಂಬಂಧಗಳಲ್ಲಿ ಕುಲಗಳನ್ನು ಪ್ರಾಧ್ಯಾನ್ಯತೆಯಿಂದ ಪರಿಗಣನೆಗೆ ತೆಗೆದುಕೊಳ್ಳುತ್ತಾರೆ. ಇವರ ಕುಲಗಳು ಈ ರೀತಿಇವೆ. ಬೆಳ್ಳಿಕುಲ, ನಾಗಕುಲ, ಪುತ್ತಕುಲ, ಕಕ್ಕುಕುಲ, ಈಶ್ವರೀಕುಲ, ವಿಷ್ಣುಕುಲ, ಎನ್ನುವ ಕುಲಗಳನ್ನು ಹೊಂದಿದ್ದಾರೆ. ಈ ಕುಲಗಳಲ್ಲಿ ರತ್ನಬೆಡಗು, ಮಾದೇಶರು, ನಾಯಕರು, ಗೌಡರು ಎನ್ನುವ ಬೆಡಗುಗಳನ್ನು ಹೊಂದಿದ್ದಾರೆ. ಮೈಸೂರು ಪ್ರಾಂತ್ಯದಲ್ಲಿ 'ಮೇದರು' ಮತ್ತು 'ಗೌರಿಗರು' ಎನ್ನುವ ಎರಡು ವರ್ಗದ ಮೇದರು ಇದ್ದಾರೆ. ಈ ಮೇದರಲ್ಲಿ ಗೌಡಮ್ಯಾದ, ಕಂಬಳಿಮ್ಯಾದ, ಕುಡ್ಲುಮೇದ, ಗೌರಿಶಂಕರ ಮೇದ, ಗೌರಿಮತ ಕೊಡ್ಲಿಮೇದ(ತೀರ್ಥಹಳ್ಳಿ-ಲಕ್ಕವಳ್ಳಿ ಪ್ರದೇಶ), ಸೇಲಂ ಮೇದ(ತೆಲುಗು ಪ್ರದೇಶ) ೭ ಮನೆಗುಂಪು(ಮದ್ರಾಸ್ ಮತ್ತು ಚಿತ್ರದುರ್ಗ ಪ್ರದೇಶಗಳು) ಎನ್ನುವ ಪಂಗಡಗಳು ಇವೆ. ಮೈಸೂರು ಪ್ರಾಂತ್ಯದಲ್ಲಿ ಗೌರಿಮೇದರಲ್ಲಿ ಬೆಳ್ಳಿಕುಲ, ಮತ್ತು ನಾಗಕುಲಗಳು ಮಹತ್ವವನ್ನು ಹೊಂದಿವೆ.

ಮೇದರು ತಮ್ಮ ವಿವಾಹದಲ್ಲಿ ಕುಲಚಿಹ್ನೆಗಳನ್ನು ಬಳಸುತ್ತಾರೆ. ಮರಾಠಿ ಮೇದರಾದ ಬುರುಡರಲ್ಲಿ ಕುಲಚಿಹ್ನೆ ಪ್ರಾಮುಖ್ಯತೆಯನ್ನು, ಪಡೆದಿದೆ. ಕುಲಚಿಹ್ನೆ ಒಂದೇ ಆದರೆ, ಅವರು, ವಿವಾಹದ ಸಂಬಂಧಗಳನ್ನು ಬೆಳೆಸುವುದಿಲ್ಲ. ವಿವಾಹದ ಸಂದರ್ಭದಲ್ಲಿ ಕುಲಚಿಹ್ನೆಗಳನ್ನು ವಿವಾಹ ರಕ್ಷಣೆಯ ದೇವರೆಂದು, ಸಂರಕ್ಷಣೆಯ ದೇವರು ಎಂದು ನಂಬಿದ್ದಾರೆ. ಮೇದರ ಉಪಪಂಗಡಗಳಿಗೆ ಅನುಗುಣವಾಗಿ, ಮರ ಮತ್ತು ಪ್ರಾಣಿಗಳ ಹೆಸರುಗಳನ್ನು ವಿವಾಹದ ಕುಲಚಿಹ್ನೆಗಳನ್ನಾಗಿ ಬಳಸುತ್ತಾರೆ. ಮರಾಠಿ ಮೇದರಲ್ಲಿ ಈ ಕುಲಚಿಹ್ನೆಗಳಿವೆ.[೯]

| ಉಪಪಂಗಡ | ದೇವರು |
|---|---|
| ಸೋಮನೆ | ಆಪ್ತರೆಂಬೆ(ಬಹುನಿಯೊರೇಸ್ ಮೋಸಾ) |
| ವದತಲೆ | ವದ(ಫಿಕಸ್ ಇಂಡಿಕಾ) |

| | |
|---|---|
| ಕಾಟೆ | ಸೌಂದದ(ಪ್ರೊಸೆಫಿಸ್ ನೈಸಿಗರ್) |
| ಪಿಂಪರೆ | ಪೀಪಲ್(ಪಿಕಸ್ ರಿಲಿಜಿಯೋಸ್) |
| ಸೋಲುಂಕೆ | ಮ್ಯಾಂಗೋ(ಮೆಗ್ನಿಫರ ಇಂಡಿಕಾ) |
| ಕೊಂಬಸ್ ಕುಲೆ | ಕೊಂಬಡದ ಮಾಂಸ |
| ದುಕಾಲೆ | ಹಂದಿಮಾಂಸ(ದುಕುರ) |
| ಸುಪಕರ್ | ಮೊರ(ಬೀಸಣಿಗೆ) |
| ಇತ್‌ಕಾರೆ | ಇಟ್ಟಿಗೆ |
| ಸುರವಕೆ | ಸೂರ್ಯಹುಲ್ಲಿನ ದಂಡ |
| ಭಾಲೆ | ಭಲ್ ಪ್ಲಾಂಟ್ |

ಮೇದರಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಿದೆ. ಮೇದರ ಕುಟುಂಬದಲ್ಲಿ ಹೆಣ್ಣಿಗೆ ಸಮಾನ ಸ್ಥಾನಮಾನವಿದ್ದರೂ ಪುರುಷರಿಗೆ ಆದ್ಯತೆಯನ್ನು ನೀಡಲಾಗುತ್ತದೆ. ಅಂತರ್‌ಜಾತಿಯ ವಿವಾಹದ ನಿಷೇಧವನ್ನು ಈ ಸಮುದಾಯವು ಪಾಲಿಸುತ್ತದೆ.

**ವಿವಾಹ ಸಂಪ್ರದಾಯ**

ಮೇದರಲ್ಲಿ ನಡೆಯುವ ವಿವಾಹದ ಕಾರ್ಯವು ವಿಶಿಷ್ಟತೆಯನ್ನು ಪಡೆದಿದೆ. ಕರ್ನಾಟಕದಲ್ಲಿ ಮೂಲತಃವಾಗಿ ನೆಲೆಸಿರುವ ಮೇದರಿಗೂ, ವಲಸೆ ಬಂದು ನೆಲೆಸಿರುವ ತೆಲುಗು ಮೇದರು, ತಮಿಳು ಮೇದರಿಗೂ ವಿವಾಹದ ಆಚರಣೆಗಳಲ್ಲಿ ವ್ಯತ್ಯಾಸಗಳಿವೆ. ವಿವಾಹವನ್ನು ನಿಶ್ಚಯ ಮಾಡಲು, ಮನೆಯ ಯಜಮಾನರು, ಹಿರಿಯರು, ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತಾರೆ.

ಮೇದ ಬುಡಕಟ್ಟು ಸಮುದಾಯದ ಸಂಪ್ರದಾಯದ ಪ್ರಕಾರ, ಹೆಣ್ಣು ಇರುವ ಮನೆಗೆ, ಗಂಡಿನ ಮನೆಯ ಹಿರಿಯರು ತಮ್ಮ ಜನಾಂಗದ ಇತರೇ ಹಿರಿಯರೊಂದಿಗೆ ಹೋಗುತ್ತಾರೆ. ಹೆಣ್ಣು ಒಪ್ಪಿಗೆಯಾದರೆ, ವೀಳ್ಯದ ಎಲೆ–ಅಡಿಕೆಗಳನ್ನು ಬದಲಾಯಿಸಿಕೊಂಡು ತಮ್ಮ ಒಪ್ಪಿಗೆಯನ್ನು ಪರಸ್ಪರರು ವ್ಯಕ್ತಪಡಿಸುತ್ತಾರೆ. ಈ ವೀಳ್ಯದ ಎಲೆ–ಅಡಿಕೆಗಳು, ಬೆಸಸಂಖ್ಯೆಯಲ್ಲಿ ಇರುತ್ತವೆ. ನಂತರ ಮದುವೆ ಆಮಂತ್ರಣ ಪತ್ರಿಕೆಗಳನ್ನು ಮುದ್ರಿಸಿ, ಬಂಧು ಬಾಂಧವರನ್ನು ವಿವಾಹಕ್ಕೆ ಆಮಂತ್ರಿಸಲಾಗುತ್ತದೆ. ಲಗ್ನಪತ್ರಿಕೆಯನ್ನು ಹಿಂದಿನ ಕಾಲದಲ್ಲಿ ಸಮಾಜದ ಮುಖಂಡರೇ ಬರೆಯುತ್ತಿದ್ದರು. ಈಗ ಪುರೋಹಿತರು ಲಗ್ನ ಪತ್ರಿಕೆಯನ್ನು ಬರೆಯುತ್ತಾರೆ.

ಮೇದರ ಸಮಾಜದಲ್ಲಿ ವಧುದಕ್ಷಿಣೆ ಅಥವಾ ಮದುವೆಯಾಗುವ ಹೆಣ್ಣಿಗೆ ತೆರಕೊಡುವ ಪದ್ಧತಿಯನ್ನು ಹೊಂದಿದ್ದಾರೆ. ಈ ಪದ್ಧತಿಯು ಬುಡಕಟ್ಟು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಅಲ್ಲದೇ ಇತ್ತೀಚಿನ ದಿನಗಳಲ್ಲಿ ವರದಕ್ಷಿಣೆ ಪದ್ಧತಿಯೂ ಚಾಲ್ತಿಯಲ್ಲಿದೆ. ವಿವಾಹವನ್ನು ನಿಶ್ಚಯಿಸುವ ಶುಭದಿನದಂದು, ತೆಂಗಿನಕಾಯಿ, ಹಣ್ಣು, ಹೂವು, ತಾಂಬೂಲಗಳನ್ನು ಗಂಡಿನ ಕಡೆಯವರು, ಹೆಣ್ಣಿನ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಎರಡೂ ಕಡೆಯವರು ಗಂಡಿಗೆ ಹೆಣ್ಣನ್ನು

ತಂದುಕೊಳ್ಳುವುದರ ಬಗ್ಗೆ, ಹೆಣ್ಣನ್ನು ಗಂಡಿಗೆ ವಿವಾಹ ಮಾಡಿಸುವುದರ ಬಗ್ಗೆ ಜನಾಂಗದ ಹಿರಿಯರ, ಯಜಮಾನರ ಮುಂದೆ ತಾಂಬೂಲವನ್ನು ಹಿಡಿದುಕೊಂಡು ಪ್ರಮಾಣ ಮಾಡುತ್ತಾರೆ.

ಮೇದರು 'ಲಗ್ನ ಕಟ್ಟುವಶಾಸ್ತ್ರ' ವೆನ್ನುವ ವಿಶೇಷವಾದ ದಿನವನ್ನು ಆಯ್ಕೆಮಾಡಿಕೊಂಡು, ಆ ದಿನದಂದೇ ಈ ಶಾಸ್ತ್ರವನ್ನು ಬೆಸಸಂಖ್ಯೆಯ ಹಣ್ಣು, ಹೂವು, ಬಟ್ಟೆ, ತೆಂಗಿನ ಕಾಯಿ, ವೀಳ್ಯ, ಅಡಿಕೆ, ಅರಿಶಿಣ-ಕುಂಕುಮ ಮುಂತಾದವುಗಳನ್ನು ಕೊಂಡೊಯ್ಯುತ್ತಾರೆ. ಈ ಲಗ್ನಕಟ್ಟುವ ಶಾಸ್ತ್ರವನ್ನು ಮೇದರ ಜನಾಂಗವು ವಿವಾಹದ ಒಂದು ವಿಧಿಯಾಗಿಯೂ ಅನುಸರಿಸುತ್ತಾರೆ. ಈ ಶಾಸ್ತ್ರದ ದಿನ ಬಂದಂತಹ ನೆಂಟರುಗಳಿಗೆ ಊಟವನ್ನು ಹಾಕುತ್ತಾರೆ. ಆದರೆ, ವಿವಾಹವು ನಿಶ್ಚಯವಾಗುದಕ್ಕಿಂತಲೂ ಮುಂಚೆ ವಿವಾಹವು ಮುರಿದುಬಿದ್ದಂತಹ ಸಂದರ್ಭದಲ್ಲಿ ಹೆಣ್ಣು ಕೇಳಲು ಹೋದ ಗಂಡಿನ ಕಡೆಯವರು ಯಾರೂ ಕೂಡ ಊಟವನ್ನು ಮಾಡುವುದಿಲ್ಲ. ಹೆಣ್ಣನ್ನು ವಿವಾಹಕ್ಕೆ ನಿಶ್ಚಯಿಸುವಂತಹ ಸಂದರ್ಭದಲ್ಲಿ 'ನಾಗದೋಷ'ವನ್ನು ಹೊಂದಿರುವ ಮೂಲಾ ನಕ್ಷತ್ರದಲ್ಲಿ ಹುಟ್ಟಿದಂತಹ, ರೋಗ-ರುಜಿನಗಳಿರುವ ಹೆಣ್ಣನ್ನು ವಿವಾಹಕ್ಕೆ ತಿರಸ್ಕರಿಸಲಾಗುತ್ತದೆ. ಹೆಣ್ಣು ಮತ್ತು ಗಂಡಿನ ಜೋಡಿ, ಸರಿಯಾಗದಿದ್ದರೂ ಕೂಡ ವಿವಾಹದ ನಿಶ್ಚಯವು ಮುರಿದು ಬೀಳುವುದರ ಮೂಲಕ ರದ್ದಾಗುತ್ತದೆ. ವಿವಾಹವಾಗಲು ಅರ್ಹವಾದ ಹೆಣ್ಣಿನ ಗುಣದೋಷಗಳನ್ನು ಯಜಮಾನರು, ಹಿರಿಯರು ಪರಿಶೀಲನೆ ನಡೆಸುತ್ತಾರೆ. ಹೆಣ್ಣಿನ ಕಡೆಯವರು, ಗಂಡಿನ ಜಾತಕ ಪರಿಶೀಲನೆ ನಡೆಸುವಂತಹ, ಗಂಡಿನ ಕಡೆಯವರು ಹೆಣ್ಣಿನ ಜಾತಕ ಪರಿಶೀಲಿಸುವಂತಹ ಹಾಗೂ ಹೆಣ್ಣು-ಗಂಡಿನ ಹುಟ್ಟಿದ ದಿನಾಂಕ, ಸಮಯ, ದಿನದ ಮೂಲಕ 'ಸಾಲಾವಳಿ'ಯನ್ನು ಪಂಚಾಂಗದಲ್ಲಿ ನೋಡುವಂತಹ ಪದ್ಧತಿಯನ್ನು ಅನುಸರಿಸುತ್ತಾರೆ. ಮದುವೆ ನಿಶ್ಚಯವಾದ ನಂತರ, ಮದುವೆಗೆ ಕರೆಯುವಂತಹ ಸಂದರ್ಭದಲ್ಲಿ ವೀಳ್ಯಎಲೆ-ಅಡಿಕೆಯನ್ನು ಕೊಟ್ಟು ಕರೆಯುವುದು ಮೇದರ ಸಂಸ್ಕೃತಿ ಮತ್ತು ಸಂಪ್ರದಾಯವಾಗಿದೆ. ವಿವಾಹವು ನಿಶ್ವಯವಾದ ನಂತರ, 'ಮಡ್ಲಕ್ಕಿಶಾಸ್ತ್ರ'(ಮಡಿಲ ಅಕ್ಕಿ ಶಾಸ್ತ್ರ)ದಲ್ಲಿ ಹೆಣ್ಣಿನ ಉಡಿಗೆ ತುಂಬುವಂತಹ ಶಾಸ್ತ್ರವನ್ನು ಆಚರಿಸುತ್ತಾರೆ. ಅದಕ್ಕಾಗಿ, ಅಕ್ಕಿ, ತೆಂಗ್ಗಿನ ಕಾಯಿ, ಬಳೆಯನ್ನು ತೊಡಿಸುವುದರ ಮೂಲಕ ಹೆಣ್ಣನ್ನು ಮದುವೆಗೆ ಮಾನಸಿಕವಾಗಿ ಸಿದ್ಧಗೊಳ್ಳಲು ಪೂರಕವಾಗಿ ಈ ಕಾರ್ಯವನ್ನು ನೆರವೇರಿಸುತ್ತಾರೆ. ಅಲ್ಲದೇ ಈ ಸಂಪ್ರದಾಯದ ಮೂಲಕ ಗಂಡಿನ ಕಡೆಯವರೆಲ್ಲರೂ ಕೂಡ ಹೆಣ್ಣಿನ ಕಡೆಯವರಿಗೆ ಪರಿಚಯವಾಗುತ್ತಾರೆ ಎನ್ನುವ ಉದ್ದೇಶವೂ ಕೂಡ ಈ ಸಂಪ್ರದಾಯ ಒಳಗೊಂಡಿದೆ.

**ಚಪ್ಪರಶಾಸ್ತ್ರದ ಸಂಪ್ರದಾಯ**

ಮೇದರ ಮದುವೆಯ ಸಂಪ್ರದಾಯದ ಪ್ರಕಾರ, ಮದುವೆಯ ಹಿಂದಿನ ದಿನ ಚಪ್ಪರವನ್ನು ಹಾಕುತ್ತಾರೆ. ಅದಕ್ಕೂ ಮೊದಲು, 'ಸ್ತಂಭದ ಪೂಜೆ' ಯನ್ನು ಮಾಡುತ್ತಾರೆ. ಗಂಡಿನ ಮನೆಯವರು ೧೨ ಕಂಬದ ಚಪ್ಪರವನ್ನು ಹಾಕುತ್ತಾರೆ. ಈ ೧೨ ಕಂಬದ ಚಪ್ಪರವು ಇವರಿಗೆ ಶುಭಸೂಚಕವೆಂದು ನಂಬುತ್ತಾರೆ. ಈ ಚಪ್ಪರಕ್ಕೆ ಮಾವು, ತೆಂಗಿನ ಗರಿ, ಹಾಲುಬರುವಂತಹ ಬಳ್ಳಿ (ಕಳ್ಳಿ ಬಳ್ಳಿ)ಗಳನ್ನು

ಚಪ್ಪರದ ಸೂತ್ತಾ ನೇತು ಹಾಕುತ್ತಾರೆ. ಮದುವೆ ನಡೆಯುವ ಚಪ್ಪರದ ಮಧ್ಯಭಾಗದಲ್ಲಿ 'ಹಾಲುಗಂಬ'ವನ್ನು ನೆಟ್ಟು ಆ ಹಾಲುಗಂಬಕ್ಕೆ ಮದುವೆಯ ಮನೆಯವರು ಮತ್ತು ಮದುವೆ ಹುಡುಗನು ಪೂಜೆಯನ್ನು ನೆರವೇರಿಸುತ್ತಾರೆ. ಮದುವೆ ಹೆಣ್ಣಿನ ಮನೆಯಲ್ಲಿ ಹಾಕುವಂತಹ ಮದುವೆ ಚಪ್ಪರವನ್ನು ಅವರ ಮನೆಯವರು ಮತ್ತು ಮದುವೆಯ ಹುಡುಗಿ ಪೂಜೆ ಮಾಡುತ್ತಾಳೆ. ಚಪ್ಪರದ ಕಂಬಕ್ಕೆ ಹಾಲನ್ನು ಹಾಕಿ, ಹೂವಿನಿಂದ ಅಲಂಕರಿಸುತ್ತಾರೆ. ಚಪ್ಪರವನ್ನು ಹಾಕಿದ ರಾತ್ರಿ ಮದುವೆ ಹೆಣ್ಣಿಗೆ ಬಳೆಶಾಸ್ತ್ರವಿರುತ್ತದೆ. ಮದುವೆ ಮುಹೂರ್ತದ ಒಂದು ಭಾಗವಾಗಿ ಮದುವೆ ಹುಡುಗಿಗೆ ಮತ್ತು ಮದುವೆಗೆ ಬಂದ ಮುತ್ತೈದೆಯರೆಲ್ಲರಿಗೂ(ವಿವಾಹಿತ ಸ್ತ್ರೀಯರು) ಬಳೆಯನ್ನು ತೊಡಿಸಲಾಗುತ್ತದೆ. ಅಲ್ಲದೇ ಅರಿಶಿಣ ಮತ್ತು ಕುಂಕುಮವನ್ನು ಕೊಡಲಾಗುತ್ತದೆ. ಮದುವೆ ಗಂಡಿನ ಮನೆಯವರು ಹಾಕುವ ಚಪ್ಪರವು ಹನ್ನೆರಡು ಕಂಬದ ಚಪ್ಪರವಾದರೆ, ಮದುವೆ ಹೆಣ್ಣಿನ ಮನೆಯವರು ಹಾಕುವಂತಹ ಚಪ್ಪರವು ನಾಲ್ಕು ಕಂಬದ ಚಪ್ಪರವನ್ನು ಹೊಂದಿರುತ್ತದೆ.

**ಎಣ್ಣೆ ಹಾಕುವ ಶಾಸ್ತ್ರದ ಸಂಪ್ರದಾಯ**

ಮೇದರ ಮದುವೆಯ ಸಂಪ್ರದಾಯದ ಪ್ರಕಾರ, ಈ ಶಾಸ್ತ್ರವನ್ನು ಮಾಡುತ್ತಾರೆ. ಈ ಶಾಸ್ತ್ರವನ್ನು ಗಂಡಿನ ಮನೆಯಲ್ಲಿ ಮಾಡಲಾಗುತ್ತದೆ. ಈ ಶಾಸ್ತ್ರಕ್ಕೆ 'ಮದಲಿಂಗನ ಸ್ನಾನ'ವೆಂದು ಕರೆಯಲಾಗುತ್ತದೆ. ಹೆಣ್ಣಿನ ಮನೆಯಲ್ಲಿ ನಡೆಯುವ ಈ ಶಾಸ್ತ್ರಕ್ಕೆ 'ಎಣ್ಣೆಶಾಸ್ತ್ರ' ವೆಂದು ಕರೆಯಲಾಗುತ್ತದೆ. ದೊಡ್ಡಹಂಡೆ(ಗುಂಬ)ಯಲ್ಲಿ ಬಿಸಿ ನೀರನ್ನು ಕಾಯಿಸಿ, ಐದು ಉಂಡೆ ಸಗಣಿ ಮತ್ತು ಗರಿಕೆಗಳನ್ನು ಹಾಕಿ, ಹಂಡೆಯ ಸುತ್ತ ಹಸಿದಾರವನ್ನು ಸುತ್ತಿ ಅದರ ಸುತ್ತಲೂ ಐದು ಚೆಂಬು(ತುಂಬಿಗೆ)ಗಳಲ್ಲಿ ನೀರನ್ನು ಇಟ್ಟು ಈ ಚೆಂಬುಗಳ ಕಂಠದ ಸುತ್ತ ಐದು ಜನ ಮುತ್ತೈದೆಯವರು (ವಿವಾಹಿತ ಮಹಿಳೆಯರು) ಎಳೆಯನ್ನು ಕಟ್ಟುತ್ತಾರೆ. ಮದುವೆ ಹೆಣ್ಣಿಗೆ ಅರಿಶಿನ, ಕುಂಕುಮ ಹಚ್ಚಿದ ನಂತರ, ಬಿಸಿ ಎಣ್ಣೆಗೆ ಅರಿಶಿನವನ್ನು ಸೇರಿಸಿ ಹಚ್ಚುತ್ತಾರೆ. ಆ ದಿನ ಬಂದಂತಹ ಸಂಬಂಧಿಗಳು ನೆಂಟರೆಲ್ಲರೂ, ಸೇರಿ ಎಣ್ಣೆ ಮತ್ತು ಅರಿಶಿನವನ್ನು ಹಚ್ಚುತ್ತಾರೆ.

ಇದೇ ತರಹದ ಶಾಸ್ತ್ರವನ್ನು ಗಂಡಿನ ಮನೆಯಲ್ಲಿಯೂ ಮಾಡುತ್ತಾರೆ. ಮದುವೆಗೆ ಬಂದ ಗಂಡಿನ ಕಡೆಯವರು ಮತ್ತು ಮದುವೆಯ ಗಂಡು ಮದುವೆ ಹೆಣ್ಣಿನ ಊರಿನಲ್ಲಿ ಬಂದು, ಒಂದು ಪ್ರತ್ಯೇಕವಾದ ಮನೆಯಲ್ಲಿ ಉಳಿದುಕೊಂಡಿರುತ್ತಾರೆ. ಮೇದರ ಜಾತಿಯ ಯಜಮಾನನು ಮದುವೆಯ ಹೆಣ್ಣು ಮತ್ತು ಮದುವೆಯ ಗಂಡಿಗೆ ಕಂಕಣವನ್ನು ಕಟ್ಟುತ್ತಾನೆ. ಕಂಕಣ ಕಟ್ಟುವಂತಹ ಆಚರಣೆಯಲ್ಲಿ ಕೂಡ ವಿಶಿಷ್ಟವಾದಂತಹ ಶಾಸ್ತ್ರೋಕ್ತ ಸಂಪ್ರದಾಯವಾಗಿದೆ. ಈ ಸಂಪ್ರದಾಯದ ಪ್ರಕಾರ, ಒಂದು ಪಾವಿನಲ್ಲಿ(ಧಾನ್ಯಗಳನ್ನು ಅಳೆಯುವ ಒಂದು ಸಾಧನ) ಅಕ್ಕಿಯನ್ನು ತುಂಬಿ ಅದರ ಮೇಲೆ ಮದುವೆ ಗಂಡು(ವರ) ತನ್ನ ಬಲಕೈ ಹಸ್ತವನ್ನು ಇಡುತ್ತಾನೆ. ಯಜಮಾನನು ಆ ವರನ ಹಸ್ತಕ್ಕೆ ವಿಭೂತಿಯನ್ನು ಹಚ್ಚಿ, ಅರಿಶಿನ ಕುಂಕುಮ ಮತ್ತು ಹೂವನ್ನು ಇಟ್ಟು ಮಂಗಳಾರತಿಯನ್ನು ಮಾಡುತ್ತಾನೆ. ಒಂದು ತುಂಡು ಅರಿಶಿನದ ಕೊನೆಯನ್ನು ತೆಗೆದುಕೊಂಡು ಅದನ್ನು ಬುಡಕೆಳಗೆ

ಮಾಡಿ ಕೈನ ಸುತ್ತ ಬ್ರಹ್ಮಗಂಟನ್ನು ಹಾಕುವುದರ ಮೂಲಕ ಮತ್ತೊಮ್ಮೆ ಅರಿಶಿನ ಕೊನೆಗೂ ಪೂಜೆಯನ್ನು ಮಾಡುತ್ತಾನೆ. ಈ ಶಾಸ್ತ್ರಕ್ಕೆ 'ಕಂಕಣಶಾಸ್ತ್ರ' ಎಂದು ಕರೆಯುವರು. ಈ ರೀತಿಯ ಶಾಸ್ತ್ರವನ್ನು ಮದುವೆ ಹೆಣ್ಣಿ(ವಧು)ಗೂ ಯಜಮಾನನೇ ಹೆಣ್ಣಿನ ಮನೆಯಲ್ಲಿ ಮಾಡುವುದರ ಮೂಲಕ ಈ ಶಾಸ್ತ್ರವನ್ನು ನೆರವೇರಿಸುತ್ತಾನೆ.

**ಎಣ್ಣೆ ಬಂಗಾರದ ಹೆಡಿಗೆ(ಕುಕ್ಕೆ)ಶಾಸ್ತ್ರ ಸಂಪ್ರದಾಯ**

ಮೇದರ ವಿವಾಹ ಸಂದರ್ಭದಲ್ಲಿ ಈ ಎಣ್ಣೆ ಬಂಗಾರದ ಹೆಡಿಗೆ ಶಾಸ್ತ್ರಕ್ಕೆ ವಿಶೇಷವಾದ ವೈಶಿಷ್ಟ್ಯವಿದೆ. ಈ ಸಂಪ್ರದಾಯದ ಪ್ರಕಾರ, ಮದುವೆ ಗಂಡಿನ ಮನೆಯಿಂದ ಮದುವೆ ಹೆಣ್ಣಿನ ಮನೆಗೆ ಕಳಿಸುವಂತಹ ಬಾಗಿನವಾಗಿದೆ. ಇದಕ್ಕೆ ಎಣ್ಣೆ ಅರಿಶಿನದ ಹೆಡಿಗೆ ಎಂದು ಕರೆಯುತ್ತಾರೆ. ಒಂದು ಬುಟ್ಟಿ ಅಥವಾ ಹೆಡಿಗೆ (ಕುಕ್ಕೆ) ಯಲ್ಲಿ ಸ್ವಚ್ಚವಾದ ಒಳ್ಳೆಯ ಬಾಳೆ ಎಲೆಯನ್ನು ಹಾಸುತ್ತಾರೆ. ಅದರ ಒಳಗಡೆಯಲ್ಲಿ ಐದು ತೆಂಗಿನಕಾಯಿ, ಐದು ಅಚ್ಚು ಬೆಲ್ಲ, ಐದು ಸೇರು ಅಕ್ಕಿ, ಬಳೆ, ಬಿಚ್ಚಿದ ಓಲೆ, ಕರಿಮಣಿ, ಅರಿಶಿನ, ಕುಂಕುಮ, ಸಾಮ್ರಾಣಿ, ಕರ್ಪೂರ, ಹಸಿಮಾಲು, ಬಾಳೆಹಣ್ಣು, ಬಾಳೆಪಂಟೆ (ಮಾಸೆ), ಅರ್ಧ ಲೀಟರ್ ಒಳ್ಳೆಣ್ಣೆ, ಮೂರು ಕವಳಿಗೆ ಎಲೆ, ಐದು ಹಿಡಿ ಅಡಿಕೆಯನ್ನು ಅದರಲ್ಲಿ ಇಟ್ಟು, ಅದನ್ನು ಅರಿಶಿಣನದ ಬಟ್ಟೆಯಿಂದ ಕಟ್ಟುತ್ತಾರೆ. ತದನಂತರ ಹೆಡಿಗೆಯನ್ನು ಹೂವುಗಳನ್ನು ಹಾಕಿ ಪೂಜೆಯನ್ನು ಮಾಡುತ್ತಾರೆ. ಮೇದ ಜನಾಂಗದ ಚಿಕ್ಕಯಜಮಾನನು ಗಂಡಿನ ಮನೆಯಿಂದ ಆ ರೀತಿಯ ಹೆಡಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗುವುದರ ಮೂಲಕ ಹೆಣ್ಣಿನ ಮನೆಗೆ ಕೊಟ್ಟು ಬರುತ್ತಾನೆ. ಇಂತಹ ಹೆಡಿಗೆಯನ್ನು ತಂದಂತಹ ಮೇದ ಜನಾಂಗದ ಮುಖಂಡನಿಗೆ ಮದುವೆ ಹೆಣ್ಣಿನ ಮನೆಯವರು ವೀಳ್ಯದ ತಾಂಬೂಲವನ್ನು ಕೊಡುವುದರ ಮೂಲಕ ಸತ್ಕಾರವನ್ನು ಮಾಡುತ್ತಾರೆ.

ನಂತರ, ವಿವಾಹ ದಿನದಂದು ವಿವಾಹಕ್ಕೂ ಮೊದಲು ಎರಡು ಶಾಸ್ತ್ರಗಳ ಆಚರಣೆಯನ್ನು ಮಾಡುತ್ತಾರೆ. ಒಂದು, ಲಗ್ನ ಕಟ್ಟುವ ಶಾಸ್ತ್ರದ ಆಚರಣೆ, ಎರಡು, ಹಾಲುಗಳ್ಳಿ ತರುವ ಶಾಸ್ತ್ರದ ಆಚರಣೆ. ಮದುವೆ ಚಪ್ಪರದ ಒಳಗೆ ಒಂದು ಅರಿಶಿಣದ ಬಟ್ಟೆಯ ಮೇಲೆ ಬಿಳಿ ಅಕ್ಕಿಯನ್ನು ಮತ್ತು ಕಡಲೆ ಕಾಳುಗಳನ್ನು ಹಾಕುವುದರ ಮೂಲಕ ಬಟ್ಟೆಯನ್ನು ಕಟ್ಟುತ್ತಾರೆ. ಹೊರಭಾಗದ ಪ್ರದೇಶದಿಂದ ಹನ್ನೆರಡು ಕಳ್ಳಿಗಿಡದ ಹಸಿಯಾದ ಕಡ್ಡಿಗಳನ್ನು ತಂದು, ಅವುಗಳನ್ನು ತೊಳೆದು, ಅವುಗಳನ್ನು ದಾರದಿಂದ ಕಟ್ಟುವುದರ ಮೂಲಕ ಕೆಮ್ಮಣ್ಣಿನ ಪಟ್ಟುಗಳನ್ನು ಹಾಕುತ್ತಾರೆ. ಅಲ್ಲದೇ ಅರಿಶಿಣನ ಗಂಟನ್ನೂ ಕೂಡ ಕಟ್ಟುತ್ತಾರೆ. ಅದಕ್ಕೆ ಹೂವುಗಳನ್ನು ಮುಡಿಸುವುದರ ಮೂಲಕ ಪೂಜಿಸುತ್ತಾರೆ. ಆ ಗಂಟನ್ನು ಮೇದ ಕುಲದ ಕುಲಸ್ಥರಿಂದ ಮುಟ್ಟಿಸುವುದರ ಮೂಲಕ ಶುಭವಾಗಲಿ ಎಂದು ಹಾರೈಸುತ್ತಾರೆ. ಅಂತಹ ಗಂಟನ್ನೂ ಕೂಡ ಮದುವೆ ಹೆಣ್ಣಿನ ಮನೆಗೆ ಯಜಮಾನ ತೆಗೆದುಕೊಂಡು ಹೋಗಿ ಕೊಟ್ಟು ಬರುತ್ತಾನೆ. ಆ ಯಜಮಾನನಿಗೂ ಕೂಡ ವೀಳ್ಯದ ಗೌರವವನ್ನು ಸಲ್ಲಿಸಲಾಗುತ್ತದೆ. ಕಳ್ಳಿಕಡ್ಡಿಗಳ ಸಮೇತವಾದ ಗಂಟನ್ನು ಶಿವದೇವಾಲಯದಲ್ಲಿ ಇಟ್ಟು ವಾಪಾಸು ಬರಲಾಗುತ್ತದೆ.

ನಂತರ ಮದುವೆ ಹೆಣ್ಣಿನ ಸೋದರ ಮಾವನು ವಾದ್ಯಮೇಳಗಳ ಸಮೇತವಾಗಿ ಹೋಗುವುದರ ಮೂಲಕ ಅಂತಹ ಗಂಟನ್ನು ತಟ್ಟೆಯಲ್ಲಿ ಇಟ್ಟು ಗೌರವ ಪೂರ್ವಕವಾಗಿ ತರುತ್ತಾನೆ ಮತ್ತು ಈ ಗಂಟನ್ನು ಮದುವೆ ಚಪ್ಪರದಲ್ಲಿರುವ ಈಶಾನ್ಯ ದಿಕ್ಕಿನ ಕಂಬಕ್ಕೆ ಕಟ್ಟಲಾಗುತ್ತದೆ. ಈ ಶಾಸ್ತ್ರೋಕ್ತ ಸಂಪ್ರದಾಯದಿಂದ ಮದುವೆಯ ಕಾರ್ಯವು ನಡೆಯಲು ಅಡೆತಡೆಗಳು, ಅಡ್ಡಿ ಆತಂಕಗಳು, ತೊಂದರೆ-ತಾಪತ್ರಯಗಳು ಬರುವುದಿಲ್ಲವೆಂದು ಭಾವಿಸಲಾಗುತ್ತದೆ.

**ಗಂಗೆ ತರುವ ಶಾಸ್ತ್ರದ ಸಂಪ್ರದಾಯ**

ಮೇದರ ಸಮಾಜದಲ್ಲಿ ವಿವಾಹಕ್ಕೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಗಂಗೆ ತರುವ ಸಂಪ್ರದಾಯ ಶಾಸ್ತ್ರವು ಬಹು ಮುಖ್ಯವಾದ ಶಾಸ್ತ್ರವಾಗಿದೆ. ಮದುವೆಗೆ ಎರಡು ಗಂಟೆ ಮುಂಚಿತವಾಗಿ ಹೆಣ್ಣಿನ(ವಧುವಿನ) ಕಡೆಯ ಐದುಜನ ಮುತ್ತೈದೆ ಮಹಿಳೆಯರು ಮತ್ತು ಗಂಡಿನ (ವರನ) ಕಡೆಯ ಐದುಜನ ಮುತ್ತೈದೆ ಮಹಿಳೆಯರು ವಾದ್ಯ ಮೇಳಗಳೊಂದಿಗೆ ಸಮೀಪದ ಕೆರೆ, ನದಿ, ಬಾವಿ ಹತ್ತಿರ ಹೋಗಿ ಸೇರುತ್ತಾರೆ. ಇವರ ಜೊತೆಗೆ ಗಂಡು ಮತ್ತು ಹೆಣ್ಣಿನ ಕಡೆಯ ಸಂಬಂಧಿಕರು, ಬಂದು-ಬಾಂಧವರು ನೆಂಟರು ಕೂಡ ಬಂದು ಅಲ್ಲಿಗೆ ಸೇರುತ್ತಾರೆ. ಅಲ್ಲಿ ಪೂಜೆ ಮಾಡುವ ಜಾಗವನ್ನು ಸಗಣಿ ನೀರಿನಿಂದ ನೆಲವನ್ನು ಸಾರಿಸುತ್ತಾರೆ. ಆ ಶುದ್ಧೀಕರಣ ಸ್ಥಳದಲ್ಲಿ ಬಟ್ಟೆ ಮಡಿ ಮಾಡುವ ಅಗಸನು ತೊಳೆದು ತಂದಿರುವಂತಹ ಬಿಳಿಯ ಬಣ್ಣದ ಬಟ್ಟೆಯನ್ನು ಹಾಸುತ್ತಾರೆ. ಆ ಬಟ್ಟೆಯಮೇಲೆ ಹತ್ತು ತಂಬಿಗೆಗಳಲ್ಲಿ ನೀರನ್ನು ತುಂಬಿ ಚೌಕಕಾರದಲ್ಲಿ ಜೋಡಿಸುತ್ತಾರೆ. ಆ ತಂಬಿಗೆಗಳಿಗೆ ಸಿದ್ಧಪಡಿಸಿದ ಹೂವಿನ ಹಾರವನ್ನು ಸುತ್ತುತ್ತಾರೆ. ಆ ತಂಬಿಗೆಗಳಲ್ಲಿ ಇರುವ ನೀರಿಗೆ(ಗಂಗೆಗೆ) ಅರಿಶಿನ, ಕುಂಕುಮ, ವೀಳ್ಯವನ್ನು ಇಟ್ಟು ಪೂಜೆ ಮಾಡುತ್ತಾರೆ. ಪೂಜೆ ಮಾಡಿದ ನಂತರ ವರನ ಮತ್ತು ವಧುವಿನ ಕಡೆಯ ಹತ್ತು ಜನ ಮುತ್ತೈದೆ ಸ್ತ್ರೀಯರು ತಂಬಿಗೆ(ಚೊಂಬು)ಗಳನ್ನು ತಲೆಯ ಮೇಲೆ ಇಟ್ಟುಕೊಂಡು ಬರುವ ಮೂಲಕ ವಧುವಿನ (ಹೆಣ್ಣಿನ) ಮನೆಯ ದೇವರ ಮನೆಯಲ್ಲಿ ತಂದು ಇಡುತ್ತಾರೆ. ಮೇದರು ವಿವಾಹದ ಸಂದರ್ಭದಲ್ಲಿನ ಈ ಗಂಗೆ ತರುವ ಶಾಸ್ತ್ರದಲ್ಲಿ ಗಂಗೆಯನ್ನು ತರುವ ಸಂದರ್ಭದಲ್ಲಿ ಸೋಬಾನೆ ಪದವನ್ನು ಹಾಡುವುದು ಇವರ ಸಂಪ್ರದಾಯ ಮತ್ತು ಪದ್ಧತಿ ಆಗಿದೆ. ಈ ಸೋಬಾನೆ ಪದಗಳು ಮೇದರ ಬುಡಕಟ್ಟಿನ ಮನೋಭಾವದ ಸ್ಥಿತಿಗತಿಗಳನ್ನು ಮತ್ತು ಅವರ ಮುಂದಿನ ಆಲೋಚನೆಗಳನ್ನು ತಿಳಿಸಿಕೊಡುತ್ತವೆ.

**ಸೋಬಾನೆ ಪದ**

ಚಿನ್ನದ ಗಿಂಡೀಲಿ ಪನ್ನೀರು ತಕ್ಕೊಂಡು
ಕನ್ನೆ ಹೊರಟಾಳೆ ಕೋಣೆಂದ ॥ಸೋ॥
ಕನ್ನೆ ಹೊರಟಾಳೆ ಕೋಣೆಂದ ಬರುವಾಗ
ಗರತೀರು ಜತೆಯಾಗಿ ಹೊರಟಾರೆ ॥ಸೋ॥

ಧನವಂತಹ ಮಗಳು ಧರ್ಮರಾಯನ ಸೊಸಿ
ಭೂಮಿಪಾಲಕರ ಕರದಂಗಿ ॥ಸೋ॥
ಅವಳದಡ್ಡಾಗೋಡೆ- ಮುತ್ತೀನ ಮುಂಬಾಗ್ಲು
ಸ್ವಾಮಿ ನಿಮಮಠದ ನೆಲೆಯೇನು ॥ಸೋ॥
ನಿಮ್ಮ ಮಠಗಳ ನಾವೇನು ಬಲ್ಲೇವು
ನಾರಿ ನಿನ ಮಠದ ನೆಲೆ ಹೇಳೇ ॥ಸೋ॥
ಅತ್ತ ಹರಿಯೋಳಾ ಗಂಗೆ
ಇತ್ತಿತ್ತ ದಡ ಸೋಕಿ ಗಂಗಮ್ಮ ಇತ್ತಿತ್ತ ಬಾರವ್ವ ॥ಸೋ॥
ತಂದಿರುವೆ ಓಲೆ ಬಂಗಾರವ ಕೊಪ್ಪು ಬಂಗಾರವ
ಮುಳಲಾಗೆ ಹರಿಯೋ ಗಂಗೆ ॥ಸೋ॥
ಮಳಲೊಳೆನು ಸೈಸೆ ಮಾಡುತ್ತಿದ್ದೆ
ಮೊದಲ ದೇಶಕೆ ಶಿವ ॥ಸೋ॥
ನಿಗಸನ ಮಾಡಿ ಹಿಂದಿರುಗಿ
ಬರುವಾಗ ಗಂಗೆಯ ದಾಟಿ ಬರುವಾಗ ॥ಸೋ॥
ಗಂಗೆಯನೇ ದಾಟಿ ಬರುವಾಗ
ಗಂಗಮ್ಮ ನನ್ನ ಬೆನ್ನೆತ್ತಿ ॥ಸೋ॥
ಬೆನ್ನೆತ್ತಿ ಶಿವರಾಯ್ನ ಜಡೆಯಲಿ ಕೂತುಕೊಂಡು
ಶಿವರಾಯ್ನ ಮನೆಗೆ ಬರುವಾಗ
ಶಿವರಾಯ್ನ ಮನ್ಗೆ ಬರುವಾಗ
ಶಿವರಾಯ್ನ ಮನ್ಗೆ ಬರ್ವಾಗ ಗೌರಮ್ಮ
ಎಳ್ದು ಮಣ ಏಲಕ್ಕೆ ಎಳ್ದುರೀಗಿ ಗಿಂಡಿ
ನೀರು ಕೊಡುತಾಳೆ-ಶಿವರಾಯ್ನ ಗೌರಮ್ಮ
ಏನೆಂದು ಕೇಳುತಾಳೆ. ಇರುವೆನೆ ಗೌರಿ
ಎರ್ಡಮಾಣಯಾಲಕ್ಕೆ ಎರಡು ಗಿಂಡಿ ನೀರು ತಿಂದೆ
ಗಂಗೀಗೆ ಒಂದು ಗಿಂಡಿ, ಗಂಗೆ ತಂದವನಂಥ
ನಿನಗಾರೋ ಹೇಳಿದಾರು. ಸೊಂಡಿಲಕಾರ
ಚೆಲುವಣ್ಣ ಹೇಳಿದಾಗ ಹೆಂಡಿರಿಲ್ಲದೆ
ತಿರುಗಾವ. ಅಯ್ಯೋಯ್ಯೋ ಶಿವನೆ ಒಂದು
ಮಾತ ಹೇಳಬ್ಯಾಡ
ದೇಶ ದೇಶಕ್ಕೆ ಹೆಸರಾದ ಏನಮಗ
ರಾಟಿಮ್ಯಾಲೆ ಕೂರುವನು ಗಣಪಾನು
ಅವನಿಗೆ ಏತಕ್ಕೆ ಮದುವೀಯು
ಹಾಣೂರ ಹೊಳೆಯಾಗಿ ಎಂದು
ಬೆಳೆದವು ಚೆಂಡು ॥ಸೋ॥
ನಿನ್ನರೆ ಸುಖಕೆ ಕರೆದಾರೋ
ಬಾಸಿಂಗ ಸೋಬಾನ। ಸೋಬಾನ

ಕುಂಬಾರಣ್ಣನ ಕರದಾರೋ।
ಬಾಸಿಂಗ। ಸೋಬಾನ ಸೋಬಾನ
ಜಾದಿವರದಂಗೆ ಸೋಕಿ ಬಾಡಿ
ನನ ಕಂದ ಒಳಗಿರುವ। ॥ಸೋ॥
ಕನ್ನೆ ಪನ್ನೀರ ಮೊಗೆವಳೆ
ಬಾಸಿಂಗಾ। ಸೋಬಾನಾ। ಸೋಬಾನ
ಚಿನ್ನದ ಕೊಡತಾಗಿ ಚಿನ್ನದ
ಕೈಸಿಂಬೇ ಸೋಬಾನ ಸೋಬಾನ
ಕನ್ನೆ ಪನ್ನೀರ ಮೊಗೆಯೋಳೆ
ಬಾಸಿಂಗ। ಸೋಬಾನ। ಸೋಬಾನ
ಜಗವಂತರ ಮಗಳ ಕರೆತನ್ನಿ।
ಸೋಬಾನ-ಸೋಬಾನವೇ॥
ಆದಿಮಲ್ಲಮ್ಮ ಯೆರಗ
ಅಂಕಯ್ಯ ಪುಲಿಕಾತ ಎರಗ
ಪಚ್ಚೆಟ್ಟು ಪಂದಡಿ ಎರಗ
ಪಣ್ಣೆಂಡು ಕಂಬಾಯಿ ಎರಗ
ಆದಿಮಲ್ಲಮ್ಮ ಎರಗ
ಆಕಾಶವಾಣಿ, ಸೂರ್ಯಚಂದ್ರ ಸಾಕ್ಷಿ
ಮುಕ್ಕೋಟಿ ದೇವರಿಗೆ ಎರಗ॥

ವಿವಾಹದ ದಿನದಂದು ಪೂಜೆಯನ್ನು ಮಾಡಲು ಬ್ರಾಹ್ಮಣರು ಬರುತ್ತಾರೆ. ಬ್ರಾಹ್ಮಣರು ಬಾಸಿಂಗವನ್ನು ಪೂಜೆ ಮಾಡಿ ಕಟ್ಟುತ್ತಾರೆ. ನಂತರ ತೆರೆಯನ್ನು (ಅಂತರಪಟ) ಹಿಡಿದು ವಧುವನ್ನು ವಧುವಿನ ಸೋದರಮಾವನು ಕರೆದುಕೊಂಡು ಬಂದು ಮದುವೆ ಮಂಟಪಕ್ಕೆ ಬಿಡುತ್ತಾನೆ. ತದನಂತರ ಬ್ರಾಹ್ಮಣನು ವೇದ ಮಂತ್ರದೊಂದಿಗೆ ತಾಳಿಯನ್ನು ಪೂಜೆ ಮಾಡುತ್ತಾನೆ. ಆ ತಾಳಿಯನ್ನು ಸುಲಿದ ಎರಡು ತೆಂಗಿನ ಕಾಯಿಯ ಮೇಲೆ ಇಟ್ಟು ಪೂಜೆಯನ್ನು ಮಾಡಿ ಮೇದರ ಬುಡಕಟ್ಟಿನ ಹಿರಿಯ ವ್ಯಕ್ತಿಗಳಿಂದ ಆಶೀರ್ವಾದ ಮಾಡಿಸುತ್ತಾರೆ. ಹಾಗೂ ಮೇದ ಬುಡಕಟ್ಟಿನ ಇತರೇ ಮುಖಂಡರು ಕೂಡ ಆಶೀರ್ವಾದವನ್ನು ಮಾಡುತ್ತಾರೆ. ಆನಂತರ ತಾಳಿಯನ್ನು ಬ್ರಾಹ್ಮಣನ ಸೂಚನೆಯ ಮೇರೆಗೆ ವರನು ಕಟ್ಟುತ್ತಾನೆ ಆ ಸಂದರ್ಭದಲ್ಲಿ ವಾದ್ಯಮೇಳಗಳನ್ನು ಬಾರಿಸಲಾಗುತ್ತದೆ. ವರನು ವಧುವಿಗೆ ತಾಳಿಯನ್ನು ಕಟ್ಟಿದ ಮೇಲೆ ವಧುವಿನ ಹಾಗೂ ವರನ ಕಡೆಯವರು ಧಾರೆಯನ್ನು ಎರೆಯುವ ಶಾಸ್ತ್ರವನ್ನು ಮಾಡುತ್ತಾರೆ. ಮೇದ ಬುಡಕಟ್ಟಿನ ಹಿರಿಯರ ವ್ಯಕ್ತಿಗಳು ಧಾರೆಯನ್ನು ಹಾಕಿ ಅಕ್ಕಿಯ ಕಾಳುಗಳನ್ನು ಅಕ್ಷತೆಯ ರೂಪದಲ್ಲಿ ಹಾಕಿ ತಲೆ, ಭುಜಗಳನ್ನು ಮುಟ್ಟಿ ಆಶೀರ್ವಾದವನ್ನು ಮಾಡುತ್ತಾರೆ. ಆನಂತರ ಮದುವೆಗೆ ಬಂದ ಎಲ್ಲಾ ಮೇದ ಬುಡಕಟ್ಟಿನ ಜನರು ವಧು ಮತ್ತು ವರನಿಗೆ ಅಕ್ಷತೆಯನ್ನು ಹಾಕಿ ಆಶೀರ್ವಾದವನ್ನು ಮಾಡುತ್ತಾರೆ. ಮದುವೆಗೆ ಬಂದಂತಹ ಸ್ತ್ರೀಯರು ಹಣ್ಣು-ಕಾಯಿಗಳನ್ನು ವಧುವಿನ ಮಡಿಲಿಗೆ ಹಾಕುತ್ತಾರೆ. ವಿವಾಹಕ್ಕೆ ಬಂದ

ನೆಂಟರು, ಸಂಬಂಧಿಗಳು. ಸ್ನೇಹಿತರು ವಧು ಮತ್ತು ವರರಿಗೆ ಕಾಣಿಕೆಗಳು-ಕೊಡುಗೆಗಳನ್ನು ಕೊಡುತ್ತಾರೆ. ವಿವಾಹಕ್ಕೆ ಬಂದ ಎಲ್ಲರಿಗೂ ಸಾಮೂಹಿಕವಾಗಿ ಮದುವೆಯ ಊಟವನ್ನು ಹಾಕಲಾಗುತ್ತದೆ. ಈ ಬುಡಕಟ್ಟಿನ ಬಡವರು ಮತ್ತು ಶ್ರೀಮಂತರು ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ವಿವಾಹದ ಸಂದರ್ಭದಲ್ಲಿ ಹಣವನ್ನು ಖರ್ಚುಮಾಡಲಾಗುತ್ತದೆ.

ವಿವಾಹದ ನಂತರ ಅಂದರೆ, ವಿವಾಹವು ವಧುವಿನ ಮನೆಯಲ್ಲಿ ನಡೆದಿದ್ದರೆ ವಿವಾಹದ ನಂತರದಲ್ಲಿ ಮದುವೆ ದಿನದಂದೇ ವರನ ಮನೆಗೆ ವಧುವನ್ನು ಕರೆದುಕೊಂಡು ಹೋಗುತ್ತಾರೆ. ಕೆಲವು ಸಂದರ್ಭಗಳಲ್ಲಿ ವಿವಾಹದ ಮುಂದಿನ ದಿನದಲ್ಲಿ ವಧುವನ್ನು ವರನ ಮನೆಗೆ ಕರೆದುಕೊಂಡು ಹೋಗಲಾಗುತ್ತದೆ. ವರನ ಮನೆಗೆ ಮೊದಲಬಾರಿ ವಧು ಹೋಗುವಂತಹ ಸಂದರ್ಭದಲ್ಲಿ ಈ ಶಾಸ್ತ್ರವನ್ನು ಮಾಡುತ್ತಾರೆ. ಈ ಶಾಸ್ತ್ರಕ್ಕೆ ಮನೆದುಂಬುವ ಶಾಸ್ತ್ರವೆಂದು ಕರೆಯುತ್ತಾರೆ. ಈ ಶಾಸ್ತ್ರದ ಸಂಪ್ರದಾಯದ ಪ್ರಕಾರ ವರನ ಮನೆಯ ಬಾಗಿಲಿನ ಒಸಲಿನ ಮೇಲೆ ಭತ್ತದ ಅಕ್ಕಿಯ ಸೇರನ್ನು ಇಡಲಾಗುವುದು. ಈ ಸೇರನ್ನು ವಧುವು ತನ್ನ ಬಲಗಾಲಿನಿಂದ ಮನೆಯ ಒಳಗೆ ಆ ಸೇರು ಬೀಳುವಂತೆ ಒದೆಯುತ್ತಾಳೆ. ನಂತರ ಮುತ್ತೈದೆಯರು ಆರತಿಯನ್ನು ಎತ್ತಿ ವಧು ಮತ್ತು ವರರನ್ನು ಮನೆಯ ಒಳಗಡೆ ಕರೆಯುತ್ತಾರೆ. ಈ ಸಂಪ್ರದಾಯದ ಉದ್ದೇಶವೇನೆಂದರೆ ಮನೆಯಲ್ಲಿ ಹರಡಿದ ಭತ್ತದ ಅಕ್ಕಿಗಳು ಆ ಮನೆಯ ಸಮೃದ್ಧಿಯನ್ನು ಪ್ರತಿಬಿಂಬಿಸುತ್ತವೆ. ಅಂದು ಸಂಜೆ ಬಂದಂತಹ ಎಲ್ಲಾ ನೆಂಟರಿಗೂ, ಬಂಧು-ಬಾಂಧವರಿಗೂ, ವರನ ಕಡೆಯವರು ಊಟವನ್ನು ಹಾಕುತ್ತಾರೆ. ಅಲ್ಲದೇ ಮೇದ ಬುಡಕಟ್ಟಿನ ಎಲ್ಲಾ ಬಾಂಧವರಿಗೂ ಊಟವನ್ನು ಹಾಕುತ್ತಾರೆ.

ಮರುದಿನ ಬೆಳಗ್ಗೆ ವಧು ವರರನ್ನು ಕೂರಿಸಿ ಅವರಿಗೆ ಹಿರಿಯರಿಂದ ಆಶೀರ್ವಾದವನ್ನು ಮಾಡಿಸುತ್ತಾರೆ. ನಂತರ ವಧು-ವರರಿಗೆ ಆರತಿಯನ್ನು ಮಾಡುತ್ತಾರೆ. ಮದುವೆಗೆ ಬಂದಂತಹ ಹಾಗೂ ಮದುವೆಗೆ ಬಾರದೇ ಇದ್ದಂತಹ ಮೇದ ಬುಡಕಟ್ಟಿನ ಬಂಧುಗಳು ಬಂದು ಈ ಸಂದರ್ಭದಲ್ಲಿ ವಧು-ವರರಿಗೆ ಆಶೀರ್ವಾದವನ್ನು ಮಾಡಿ ಕಾಣಿಕೆಗಳನ್ನು, ಕೊಡುಗೆಗಳನ್ನು ನೀಡುತ್ತಾರೆ. ಇದೆಲ್ಲ ಮುಗಿದ ನಂತರ ವರನ ಮನೆದೇವರ ಪೂಜೆಯನ್ನು ಮಾಡುತ್ತಾರೆ.

**ಪ್ರಸ್ತಶಾಸ್ತ್ರದ ಸಂಪ್ರದಾಯ(ವಧು-ವರರ ಮೊದಲ ರಾತ್ರಿ)**

ಮೇದ ಬುಡಕಟ್ಟಿನ ವಿವಾಹದ ಸಂಪ್ರದಾಯಲ್ಲಿ ಪ್ರಸ್ತ ಶಾಸ್ತ್ರ ಸಂಪ್ರದಾಯಕ್ಕೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಕಾರಣವೇನೆಂದರೆ, ವಿವಾಹದ ಮೂಲ ಉದ್ದೇಶ ಸಂತಾನೋತ್ಪತ್ತಿ. ಸಂತಾನೋತ್ಪತ್ತಿಯ ಈ ಪ್ರಕ್ರಿಯೆ ಮೂಲಕ ಯಾವುದೇ ಒಂದು ಬುಡಕಟ್ಟು ಸಮುದಾಯ ತನ್ನ ಆಸ್ತಿತ್ವವನ್ನು ಮುಂದುವರಿಸಿಕೊಂಡು ಹೋಗುತ್ತದೆ. ಪ್ರಸ್ತದ ಈ ಶಾಸ್ತ್ರಕ್ಕೆ ಈ ಬುಡಕಟ್ಟಿನ ಎಲ್ಲಾ ಹಿರಿಯರು ಸಮ್ಮತಿಯನ್ನು ನೀಡಿರುತ್ತಾರೆ. ಮನುಷ್ಯನ ಮೂಲತಃ ಅವಶ್ಯಕತೆಗಳಲ್ಲಿ ಲೈಂಗಿಕ ಬಯಕೆಯ ಈಡೇರುವಿಕೆಯು ಒಂದಾಗಿದೆ. ಆಹಾರ, ಬಟ್ಟೆ, ವಸತಿ, ಮೈಥುನ, ಲೈಂಗಿಕತೆ, ಇವು ಮಾನವನ ಮೂಲಭೂತ ಅವಶ್ಯಕತೆಗಳಾಗಿವೆ.

ಪ್ರತಿಯೊಂದು ಬುಡಕಟ್ಟು ಸಮುದಾಯವು ವಿವಾಹದ ಆಚರಣೆಯ ಮೂಲಕ ಸೂಕ್ತ ವಧು-ವರರಿಗೆ ತಮ್ಮ ಲೈಂಗಿಕ ಬಯಕೆಗಳನ್ನು ಈಡೇರಿಸಿಕೊಳ್ಳಲು ವಿವಾಹದ ಮೂಲಕ ಸಮ್ಮತಿಯನ್ನು ನೀಡುತ್ತದೆ. ಈ ಮೂಲಕ ಒಂದು ಬುಡಕಟ್ಟಿನ ಸಂತಾನೋತ್ಪತ್ತಿಯನ್ನು ಮುಂದುವರೆಸಲಾಗುತ್ತದೆ.

ಮೇದ ಬುಡಕಟ್ಟಿನ ವರನ ಮನೆಯಲ್ಲಿನ ಶಾಸ್ತ್ರಗಳನ್ನು ಮುಗಿಸಿಕೊಂಡು ಹಿರಿಯರು ನಿಶ್ಚಯಿಸಿದ ಸೂಕ್ತ ಶುಭ ದಿನದಂದು ವಧುವಿನ ಮನೆಯಲ್ಲಿ ಪ್ರಸ್ತದ ಶಾಸ್ತ್ರವನ್ನು ಮಾಡುತ್ತಾರೆ. ಈ ಶಾಸ್ತ್ರವನ್ನು ವಧುವಿನ ಮನೆಯಲ್ಲಿ, ವಧುವಿನ ಪೋಷಕರು, ತಂದೆ-ತಾಯಿಗಳು ಸಿದ್ಧತೆಯನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ವಧುವಿನ ಮನೆಯವರು ಕುಲದೇವರಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಈ ಸಂದರ್ಭದಲ್ಲಿ ವರನಿಗೆ ಸಾಂಪ್ರದಾಯಿಕ ಉಡುಪನ್ನು ಧರಿಸುವಂತೆ ಸೂಚಿಸಲಾಗುತ್ತದೆ. ವರನಿಗೆ ಬಿಳಿಯ ಪಂಚೆ ಮತ್ತು ಷರ್ಟನ್ನು, ವಧುವಿಗೆ ಸೀರೆಯನ್ನು ಧರಿಸುವಂತೆ ಸೂಚಿಸಲಾಗುತ್ತದೆ. ಈ ಶಾಸ್ತ್ರಕ್ಕೆ ಪ್ರತ್ಯೇಕವಾದ ಕೋಣೆಯನ್ನು ಮೀಸಲಾಗಿರಿಸಲಾಗುತ್ತದೆ. ಈ ಕೋಣೆಯನ್ನು ಹೂವು, ಹಣ್ಣು, ಸುಗಂಧ, ಪರಿಮಳಗಳಿಂದ ಸಿಂಗರಿಸಲಾಗುತ್ತದೆ. ವಧು-ವರರಿಗೆ ಈ ಸಂಪ್ರದಾಯವು ಅವರ ಜೀವನದಲ್ಲಿ ಮಧುರವಾದ ಅನುಭವವನ್ನು ನೀಡುತ್ತದೆ.

**ಬಹುಪತ್ನಿತ್ವ**

ಮೇದ ಬುಡಕಟ್ಟು ಸಮುದಾಯದಲ್ಲಿ ಬಹುಪತ್ನಿತ್ವದ ಆಚರಣೆ ತುಂಬಾ ಕಡಿಮೆ. ಆದಾಗ್ಯೂ ಸಮುದಾಯದಲ್ಲಿ ಹೆಂಡತಿಯು ಗುಣ ಪಡಿಸಲಾರದ ರೋಗದಿಂದ ಬಳಲುತ್ತಿದ್ದರೆ. ರೋಗಿಷ್ಠೆಯಾಗಿದ್ದರೆ, ಬಂಜೆಯಾಗಿದ್ದರೆ(ಮಕ್ಕಳಾಗದಿದ್ದರೆ)ಈ ಬುಡಕಟ್ಟಿನ ಯಜಮಾನನ ಗಮನಕ್ಕೆ ತರುವುದರ ಮೂಲಕ ಇನ್ನೊಂದು ವಿವಾಹವಾಗಬಹುದು.

**ಬಹುಪತಿತ್ವ**

ಮೇದ ಬುಡಕಟ್ಟು ಸಮುದಾಯದಲ್ಲಿ ಬಹುಪತಿತ್ವದ ಆಚರಣೆ ಇಲ್ಲ. ಈ ಪದ್ಧತಿಯನ್ನು ಮೇದ ಬುಡಕಟ್ಟು ಸಮುದಾಯದಲ್ಲಿ ನಿಷೇಧಿಸಲಾಗಿದೆ.

**ಒಂದೇ ಕುಲಕ್ಕೆ ಸಂಬಂಧಿಸಿದವರ ವಿವಾಹದ ನಿಷೇಧ**

ಮೇದ ಬುಡಕಟ್ಟು ಸಮುದಾಯದಲ್ಲಿ ಒಂದೇ ಕುಲಕ್ಕೆ ಸಂಬಂಧಿಸಿದವರನ್ನು ವಿವಾಹವಾಗುವುದಿಲ್ಲ. ಅಕ್ಕ-ತಂಗಿಯರ ಮಕ್ಕಳು, ಅಣ್ಣ-ತಮ್ಮಂದಿರ ಮಕ್ಕಳು, ತಾಯಿಯ ಚಿಕ್ಕಮ್ಮ, ದೊಡ್ಡಮ್ಮನ ಮಕ್ಕಳು ಈ ರಕ್ತ ಸಂಬಂಧಿಗಳನ್ನು ವಿವಾಹವಾಗುವುದನ್ನು ನಿಷೇಧಿಸಲಾಗಿದೆ. ಸೋದರತ್ತೆಯ ಮಗಳು, ಸೋದರಮಾವನ ಮಗಳು, ಅಕ್ಕನಮಗಳು, ಇವರನ್ನು ವಿವಾಹವಾಗಬಹುದು. ಇಬ್ಬರು ಸಹೋದರರು ಇನ್ನೊಂದು ಕುಟುಂಬದ ಸಹೋದರಿಯರನ್ನು ವಿವಾಹವಾಗಬಹುದು. ವರನಿಗೆ, ವಧುವಿಗೆ, ವಿವಾಹಕ್ಕೆ ಸೂಕ್ತವಾದ ವಯಸ್ಸನ್ನು ಬುಡಕಟ್ಟಿನ ಹಿರಿಯರು ನಿರ್ಧರಿಸುತ್ತಾರೆ. ಆದರೆ ಭಾರತೀಯ ಕಾನೂನಿನ ಪ್ರಕಾರ ವಿವಾಹಕ್ಕೆ ವರನಿಗೆ ೨೧ ವರ್ಷ ವಧುವಿಗೆ ೧೮ ವರ್ಷ

ಆಗಿರಬೇಕಾಗುತ್ತದೆ. ಆದಾಗ್ಯೂ ಅಲ್ಲಲ್ಲಿ ಬಾಲ್ಯವಿವಾಹಗಳು ನಡೆಯುತ್ತಿವೆ. ಈ ಬುಡಕಟ್ಟಿನಲ್ಲಿ ಅನೈತಿಕ ಸಂಬಂಧವನ್ನು ನಿಷೇಧಿಸಲಾಗಿದೆ. ವಿವಾಹವಾಗದೇ ಹಾಗೆಯೇ ಒಬ್ಬಂಟಿಯಾಗಿ ಹೆಣ್ಣಾಗಿರಲಿ, ಗಂಡಾಗಿರಲಿ, ಜೀವಿಸಬಹುದು. ಆದರೆ ಅನೈತಿಕ ಸಂಬಂಧಕ್ಕೆ ಈ ಸಮಾಜದಲ್ಲಿ ಅವಕಾಶವಿಲ್ಲ.

**ವಿಧವಾ ವಿವಾಹ**

ಮೇದ ಬುಡಕಟ್ಟು ಸಮುದಾಯದಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿದೆ. ಮದುವೆಯಾದ ನಂತರ ವರನು ಸತ್ತುಹೋದರೆ, ವಧುವು ವಿಧವೆಯಾಗುತ್ತಾಳೆ. ಈ ಸಮುದಾಯದ ಹಿರಿಯರ ಒಪ್ಪಿಗೆಯ ಮೇರೆಗೆ, ವಿಧವೆಯು ಪುನರ್ ವಿವಾಹವಾಗಬಹುದು. ವಿಧವಾವಿವಾಹವನ್ನು ಈ ಹೆಸರಿನಿಂದಲೂ ಕರೆಯುತ್ತಾರೆ. 'ಕೂಡಿಕೆ ವಿವಾಹ', 'ಸೀರುಡಿಕೆ ವಿವಾಹ' ಎನ್ನುವ ವಿಧವಾವಿವಾಹ ಆಚರಣೆಗಳಿವೆ. ಸಾಂಪ್ರದಾಯಿಕ ವಿವಾಹದ ಆಚರಣೆಗಳಂತೆಯೇ ಈ ವಿವಾಹವೂ ನಡೆಯುತ್ತದೆ. ಆದರೆ ಈ ವಿವಾಹಕ್ಕೆ ಮುತ್ತೈದೆ ಸ್ತ್ರೀಯರು ಬರುವಂತಿಲ್ಲ ಆದರೆ ಇಂದಿನ ಆಧುನಿಕ ದಿನಗಳಲ್ಲಿ ಈ ವಿಧವಾವಿವಾಹದ ಸಂದರ್ಭದಲ್ಲಿ ಎಲ್ಲಾ ಮಹಿಳೆಯರು ಭಾಗವಹಿಸುತ್ತಿದ್ದಾರೆ. ಸಾಂಪ್ರದಾಯಿಕ ವಿವಾಹದಲ್ಲಿನ ಭೋಜನದಂತೆ ಈ ವಿವಾಹದಲ್ಲಿಯೂ ಭೋಜನವನ್ನು ಹಾಕಲಾಗುತ್ತದೆ. ವಿಧವೆಗೆ ಮಕ್ಕಳಿದ್ದರೆ, ಮರುಮದುವೆ ಆದ ನಂತರವೂ ವಿಧವೆಯ ಮಕ್ಕಳಿಗೆ ಎಲ್ಲಾ ರೀತಿಯ ಹಕ್ಕುಗಳು ಇರುತ್ತವೆ.

**ವಿದುರ ವಿವಾಹ**

ಮೇದ ಬುಡಕಟ್ಟು ಸಮುದಾಯದಲ್ಲಿ ವಿದುರ ವಿವಾಹಕ್ಕೂ ಅವಕಾಶವಿದೆ. ಹೆಂಡತಿಯು, ರೋಗದಿಂದ ಆಕಸ್ಮಿಕ ಖಾಯಿಲೆಗಳಿಂದ ಸತ್ತು ಹೋದರೆ, ಗಂಡನು ಈ ಬುಡಕಟ್ಟಿನ ಹಿರಿಯರ ಒಪ್ಪಿಗೆಯನ್ನು ಪಡೆದು ಮತ್ತೊಮ್ಮೆ ವಿವಾಹವಾಗಬಹುದು. ಕೆಲವೊಮ್ಮೆ ವಿದುರನು ವಿಧವೆಯನ್ನು ವಿವಾಹವಾಗಲು ಈ ಬುಡಕಟ್ಟಿನ ಹಿರಿಯರು ಒಪ್ಪಿಗೆಯನ್ನು ಸೂಚಿಸುತ್ತಾರೆ. ವಿದುರನ ಮಕ್ಕಳು ಮತ್ತು ವಿಧವೆಯ ಮಕ್ಕಳು ಸಮಾನ ಅವಕಾಶಗಳನ್ನು ಪಡೆಯುತ್ತಾರೆ. ಸಾಂಪ್ರದಾಯಿಕ ವಿವಾಹದಂತೆ ವಿಧವಾವಿವಾಹ ಮತ್ತು ವಿದುರ ವಿವಾಹಗಳಲ್ಲಿಯೂ ಶಾಸ್ತ್ರ-ಸಂಪ್ರದಾಯಗಳನ್ನು ಆಚರಿಸಲಾಗುತ್ತದೆ.

**ವಿವಾಹ ವಿಚ್ಛೇದನ**

ಮೇದ ಬುಡಕಟ್ಟು ಸಮುದಾಯದಲ್ಲಿ ವಿವಾಹ ವಿಚ್ಛೇದನಕ್ಕೆ ಅವಕಾಶವಿದೆ. ವಿಚ್ಛೇದಿತಳಾದ ಮಹಿಳೆಯು ವಿವಾಹವನ್ನು ಆಗಬಹುದು. ವಿವಾಹಿತಳಾದ ಮಹಿಳೆಯು ಬೇರೆ ಜಾತಿಯ ಪುರುಷನೊಂದಿಗೆ ಅನೈತಿಕ ಸಂಬಂಧವನ್ನು ಹೊಂದಿದ್ದರೆ, ಆಗ ಗಂಡನು ಇವಳಿಂದ ವಿಚ್ಛೇದನವನ್ನು ಪಡೆಯಬಹುದಾಗಿದೆ.

ಮೇದ ಬುಡಕಟ್ಟು ಸಮುದಾಯದ ಹಿರಿಯರು ಈ ಅನೈತಿಕ ಸಂಬಂಧಗಳನ್ನು ತಮ್ಮ ಜಾತಿ ಪಂಚಾಯಿತಿಗಳಲ್ಲಿ ಬಗೆಹರಿಸಲು ಪ್ರಯತ್ನಿಸುತ್ತಾರೆ. ಪರಸ್ಪರರಮೇಲೆ ದಂಡವನ್ನು ವಿಧಿಸಿ

ರಾಜಿಸಂಧಾನ ಮಾಡಿಸಲಾಗುತ್ತದೆ. ರಾಜಿಸಂಧಾನಕ್ಕೆ ಒಪ್ಪದಿದ್ದರೆ. ಅವರನ್ನು ಆ ಜಾತಿಯಿಂದ ಹೊರಹಾಕಲಾಗುವುದು. ತನ್ನದೇ ಜಾತಿಯವನೊಂದಿಗೆ ಅಥವಾ ತನ್ನದೇ ಜಾತಿಯವಳೊಂದಿಗೆ ಅನೈತಿಕ ಸಂಬಂಧ ಏರ್ಪಟ್ಟಿದ್ದರೆ, ದಂಡವನ್ನು ಹಿರಿಯರು ವಿಧಿಸುತ್ತಾರೆ. ಸಾಧ್ಯವಾದಷ್ಟು ತಪ್ಪನ್ನು ಸರಿಪಡಿಸಿಕೊಂಡು ಹೋಗಲು ಅವಕಾಶವನ್ನು ಬುಡಕಟ್ಟು ಪಂಚಾಯಿತಿಗಳಲ್ಲಿ ನೀಡಲಾಗುತ್ತದೆ. ದಂಡವನ್ನು ವಿಧಿಸಿ ಪಂಚಾಯಿತಿಯ ಹಿರಿಯರು ಪರಸ್ಪರರಿಗೆ ಬುದ್ಧಿಮಾತುಗಳನ್ನು ಹೇಳಿ ನೈತಿಕವಾದ ಜೀವನವನ್ನು ಮಾಡಲು ಅವಕಾಶವನ್ನು ನೀಡಲಾಗುತ್ತದೆ.

ಒಂದು ವೇಳೆ ವಿವಾಹವಾಗದೇ ಇರುವ ಕನ್ಯೆ(ಹುಡುಗಿ) ಗರ್ಭಿಣಿಯಾದರೆ ಅವಳು ಯಾರಿಂದ ಗರ್ಭಿಣಿ ಯಾಗಿರುತ್ತಾಳೋ ಆತನಿಗೇ ಒತ್ತಾಯಪೂರ್ವಕವಾಗಿ ವಿವಾಹವನ್ನು ಮಾಡಲಾಗುತ್ತದೆ. ಇಂತಹ ವಿವಾಹಗಳಿಗೆ ಹಾಗೂ ವಿಧವಾ ವಿವಾಹಗಳಿಗೆ ಈ ಬುಡಕಟ್ಟು ಸಮುದಾಯದಲ್ಲಿ ಹೆಚ್ಚಿನ ಮಾನ್ಯತೆ ಇಲ್ಲ. ಬೇರೆ ಜಾತಿಯವನೊಂದಿಗೆ ಮೇದ ಬುಡಕಟ್ಟಿನ ಅವಿವಾಹಿತ ಮಹಿಳೆಯು ಅನೈತಿಕ ಸಂಬಂಧವನ್ನು ಹೊಂದಿ ಗರ್ಭ ಧರಿಸಿದ್ದರೆ ಈ ಬುಡಕಟ್ಟಿನ ಮುಖಂಡರು ಪಂಚಾಯಿತಿ ಸೇರಿಸಿ ಬಹಿಷ್ಕಾರವನ್ನು ಹಾಕಲಾಗುತ್ತದೆ. ಇಂತಹ ಕಟ್ಟುನಿಟ್ಟಿನ ಆಚರಣೆಗಳಿಂದ ಈ ರೀತಿಯ ಅನೈತಿಕ ಸಂಬಂಧಗಳಿಗೆ ಈ ಬುಡಕಟ್ಟಿನ ಸಮುದಾಯದವರು ಹೆದರುತ್ತಾರೆ. ಸಾಧ್ಯವಾದಷ್ಟು, ತಪ್ಪುಗಳು ಆಗದಂತೆ ಎಚ್ಚರಿಕೆಯನ್ನು ವಹಿಸುತ್ತಾರೆ.

**೩.೫. ಆರಾಧನೆ, ಆಚರಣೆ ಮತ್ತು ನಂಬಿಕೆಗಳು**

**ಜನನ(ಹುಟ್ಟು)**

ಮೇದರ ಬುಡಕಟ್ಟು ಸಮುದಾಯದಲ್ಲಿ ಮಗುವಿನ ಜನನದ (ಹುಟ್ಟಿನ) ಶಾಸ್ತ್ರಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಗಿದೆ. ಮೇದರ ಸಮುದಾಯದಲ್ಲಿ ಹಿಂದಿನ ಕಾಲದಲ್ಲಿ ಹೆರಿಗೆಯನ್ನು ಮನೆಯ ಪ್ರತ್ಯೇಕವಾದ ಕೋಣೆಯಲ್ಲಿ ಈ ಬುಡಕಟ್ಟಿನ ಹಿರಿಯ ಅಜ್ಜಿಯರು ಹೆರಿಗೆಯನ್ನು ಮಾಡಿಸುತ್ತಿದ್ದರು. ಮೇದ ಬುಡಕಟ್ಟು ಸಮುದಾಯದ ಹೆಣ್ಣು ಮಕ್ಕಳ ಹೆರಿಗೆಯ ನಂತರ ಹೊಕ್ಕಳು ಬಳ್ಳಿಯನ್ನು ಕತ್ತರಿಸಿ ಯಾವುದಾದರೂ ಮರದ ಬಳಿ ತೆಗೆದುಕೊಂಡು ಹೋಗಿ ಹೂಳುತ್ತಾರೆ. ಹೆರಿಗೆಯ ನಂತರ ಒಂಭತ್ತನೆಯ ದಿನ ಮನೆಗೆ ಗೋವಿನ ಮೂತ್ರವನ್ನು ಹಾಕಿ ಮನೆಯನ್ನು ಶುದ್ಧಪಡಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಬ್ರಾಹ್ಮಣರ ಮನೆಯಿಂದ ಶಾಸ್ತ್ರೋಕ್ತವಾಗಿ ಶುದ್ಧೀಕರಿಸಿದ ನೀರನ್ನು ತಂದು ಚಿಮುಕಿಸುತ್ತಾರೆ. ನಂತರ ಹನ್ನೊಂದನೆಯ ದಿನದಂದು ಮನೆಯನ್ನು ತೊಳೆದು ಶುದ್ಧಿಗೊಳಿಸಿಕೊಂಡು ಮಾವು, ಹಲಸಿನ ಸೊಪ್ಪು ಇವುಗಳನ್ನು ಕಟ್ಟಲಾಗುತ್ತದೆ. ಹೆರಿಗೆಯಾದ ಬಾಣಂತಿಗೆ ಮುತ್ತೈದೆಯರು ಮತ್ತು ಹಿರಿಯ ಅಜ್ಜಿಯಂದಿರು ಕುಡಿಕೆಯಲ್ಲಿ (ಮಡಿಕೆ) ನೀರನ್ನು ತಂದು ಹಾಕುತ್ತಾರೆ. ಈ ಮೇದ ಬುಡಕಟ್ಟು ಸಮುದಾಯದಲ್ಲಿ ಹುಟ್ಟಿದ ಮಕ್ಕಳನ್ನು ಬಟ್ಟೆಯ ಜೋಳಿಗೆಯನ್ನು ಮಾಡಿ ಅದರಲ್ಲಿ ಮಗುವನ್ನು ಮಲಗಿಸುತ್ತಾರೆ. ನಂತರ ಆ ಮಗುವಿನ ಬಾಯಲ್ಲಿ ತಂದೆಯಾದವನು ಜೇನನ್ನು ಹಾಕುತ್ತಾನೆ. ಮಗುವು ಜೇನನ್ನು ನೆಕ್ಕುತ್ತದೆ. ಈ ಸಂದರ್ಭದಲ್ಲಿ

ಹೆಣ್ಣುಮಕ್ಕಳು ಸೋಬಾನೆ ಪದಗಳನ್ನು ಹಾಡುತ್ತ ಅಲ್ಲಿ ಬಂದಂತಹ ನೆಂಟರಿಗೆಲ್ಲ ಹಾಗೂ ಬಂದುಬಾಂಧವರಿಗೆಲ್ಲ ಸಿಹಿ ಪದಾರ್ಥಗಳನ್ನು ಸಂಭ್ರಮದಿಂದ ಹಂಚಿ ಸಂತೋಷಪಡಿಸುತ್ತಾರೆ. ಈ ಸಂದರ್ಭದಲ್ಲಿ ಅಕ್ಕಪಕ್ಕದ ಮನೆಯವರು, ಬಂಧು-ಬಾಂಧವರು, ಬಾಣಂತಿಗೆ ಅರಿಶಿನ-ಕುಂಕುಮ, ಹೂ, ಹಣ್ಣು, ಎಲೆ-ಅಡಿಕೆಯನ್ನು ಕೊಟ್ಟು ಸನ್ಮಾನವನ್ನು ಮಾಡುತ್ತಾರೆ. ಆ ಮಗುವಿಗೆ ಬೇರೆಯವರ ದೃಷ್ಟಿಯೂ ತಗುಲಬಾರದೆಂದು ಮನೆಯ ಬಾಗಿಲಿಗೆ ಹಳೆಯ ಚಪ್ಪಲಿಗಳನ್ನು ಕಟ್ಟುತ್ತಾರೆ. ಮನೆಯ ಮುಂಭಾಗದಲ್ಲಿ ಬೇರೆಯವರ ದೃಷ್ಟಿ ತಗುಲಬಾರದೆಂದು ಅಂಕೋಲೆ ಗಿಡದ ರೆಂಬೆಗಳನ್ನು ಕಟ್ಟುತ್ತಾರೆ. ಈ ರೀತಿಯ ಆಚರಣೆಗಳಿಂದ ಪ್ರಕೃತಿಯ ದುಷ್ಟಶಕ್ತಿಗಳು, ಭೂತ-ಪ್ರೇತಗಳು, ಮಗುವಿಗೆ ಮತ್ತು ಬಾಣಂತಿಗೆ ತೊಂದರೆಯನ್ನು ಉಂಟುಮಾಡುವುದಿಲ್ಲ ಎಂದು ನಂಬಿಕೆಯನ್ನು ಹೊಂದಿರುತ್ತಾರೆ. ಮಗುವಿನ ಹಣೆಗೆ 'ಕಪ್ಪು ಬೊಟ್ಟು' ಅನ್ನು ಇಡುತ್ತಾರೆ. ಈ ರೀತಿ ಮಾಡುವುದರಿಂದ ಮಗುವಿಗೆ ದೃಷ್ಟಿ ತಗಲುವುದಿಲ್ಲ ಎಂದು ನಂಬುತ್ತಾರೆ. ಅಲ್ಲಿಗೆ ಬಂದ ನೆಂಟರು, ಬಂಧು-ಬಾಂಧವರಿಗೆ ಎಲೆ ಅಡಿಕೆ, ರೂಪದ ವೀಳ್ಯವನ್ನು ಕೊಟ್ಟು ಗೌರವಿಸಿ ಫಲ-ತಾಂಬೂಲಗಳಿಂದ ಹಿರಿಯರು ಆಶೀರ್ವದಿಸುತ್ತಾರೆ.

ಮೇದ ಬುಡಕಟ್ಟು ಸಮುದಾಯದ ಜನರಿಗೆ ಗಂಡು ಮಗು ಹುಟ್ಟಿದರೆ ಸಂಭ್ರಮಪಡುತ್ತಾರೆ. ಹೆಣ್ಣು ಮಗು ಹುಟ್ಟಿದರೂ ಸಂಭ್ರಮಿಸುತ್ತಾರೆ. ಆದರೆ ಗಂಡು ಮಗುವಿಗೆ ವಿಶೇಷವಾದ ಪ್ರಾಧಾನ್ಯತೆಯನ್ನು ನೀಡುತ್ತಾರೆ. ಈ ಸಂದರ್ಭದಲ್ಲಿ ಬಂದಂತಹ ಮೇದ ಬುಡಕಟ್ಟು ಬಂಧು-ಬಾಂಧವರಿಗೆ ಊಟವನ್ನು ಹಾಕುತ್ತಾರೆ. ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಕುಟುಂಬಗಳಲ್ಲಿ ಅಳಿಯನಾದವನಿಗೆ ಅಂಗಿ, ಪಂಚೆ, ಮತ್ತು ಟವಲ್‌ಗಳನ್ನು ಕೊಟ್ಟು ಗೌರವವನ್ನು ತೋರಿಸುತ್ತಾರೆ. ಈ ಗೌರವವು ಅಳಿಯನಾದವನಿಗೆ ಉಡುಗೊರೆ ರೂಪದಲ್ಲಿ ಇರುತ್ತದೆ. ಈ ಸಂಭ್ರಮಕ್ಕೆ ಬಂದಂತಹ ಬಂದು-ಬಾಂಧವರು ನೆಂಟರು ಮಗುವಿಗೆ ಕಾಣಿಕೆಗಳನ್ನು ಕೊಡುತ್ತಾರೆ. ಮಗುವು ಒಳ್ಳೆಯ ಆರ್ಥಿಕ, ಸ್ಥಿತಿಗತಿಯನ್ನು ಹೊಂದಲೆಂದು ಶುಭವನ್ನು ಕೋರುತ್ತಾರೆ. ಪುರೋಹಿತರು ಮಗು ಹುಟ್ಟಿದ ವೇಳೆ, ದಿನ, ನಕ್ಷತ್ರವನ್ನು ನೋಡಿ ನಾಮಕರಣ ಮಾಡುವ ಹೆಸರನ್ನು ಹೇಳುತ್ತಾರೆ. ನಂತರ ಇದೇ ಹೆಸರನ್ನು ಮಗುವಿನ ನಾಮಕರಣ ಸಂದರ್ಭದಲ್ಲಿ ಇಡುತ್ತಾರೆ. ನಾಮಕರಣ ಮಾಡುವ ಸಂದರ್ಭದಲ್ಲಿ ಈ ಹೆಸರನ್ನು ಮಗುವಿನ ಕಿವಿಯಲ್ಲಿ ಹೇಳುತ್ತಾರೆ.

**ಋತುಮತಿ(ಮೈನೆರೆಯುವುದು) ಸಂಪ್ರದಾಯ**

ಮೇದ ಬುಡಕಟ್ಟು ಸಮಾಜದಲ್ಲಿ ಹೆಣ್ಣು ಮಕ್ಕಳು ಪ್ರಾಯಕ್ಕೆ ಬಂದಿರುವ ಸಂದರ್ಭವನ್ನು ಋತುಮತಿ ಆಚರಣೆ ಎನ್ನುವ ಸಂಪ್ರದಾಯವನ್ನು ಅನುಸರಿಸುತ್ತಾರೆ. ಋತುಮತಿಯಾಗುವುದು ಎಂದರೆ. ಹುಡುಗಿಯು ವಂಶಾಭಿವೃದ್ಧಿ ಮಾಡಲು ಲೈಂಗಿಕವಾಗಿ ಸಿದ್ಧಗೊಂಡಿದ್ದಾಳೆ ಎನ್ನುವುದನ್ನು ತಿಳಿಸುತ್ತದೆ. ಈ ಬುಡಕಟ್ಟು ಸಮುದಾಯದಲ್ಲಿ ಋತುಮತಿ ಆಚರಣೆಗೆ ಹೆಚ್ಚಿನ ಪ್ರಾತಿನಿಧ್ಯವಿದೆ. ನೈಸರ್ಗಿಕವಾಗಿ ಪ್ರಾಯಕ್ಕೆ ಬಂದ ಈ ಬುಡಕಟ್ಟು ಸಮುದಾಯದ ಹೆಣ್ಣು ಮಕ್ಕಳಿಗೆ ಈ

ಆಚರಣೆಯನ್ನು ಮಾಡುತ್ತಾರೆ. ಋತುಮತಿಯಾಗುವುದು ಎನ್ನುವುದನ್ನು ಮೈನೆರೆಯುವುದು ಎಂದೂ ಕೂಡ ಕರೆಯುತ್ತಾರೆ.

ಹುಡುಗಿಗೆ ಋತುಮತಿಯಾದಾಗ ಅವಳ ಸೋದರ ಮಾವನು ಒಂದು ಬಿದಿರಿನ ಗುಡಿಸಲನ್ನು ಕಟ್ಟುತ್ತಾನೆ. ಈ ಗುಡಿಸಲು ತುಂಬಾ ಆಕರ್ಷಕವಾಗಿರುತ್ತದೆ. ಆ ಗುಡಿಸಿಲಿನಲ್ಲಿ ಋತುಮತಿಯಾದ ಹುಡುಗಿಯು ಹತ್ತುದಿನಗಳನ್ನು ಕಳೆಯಬೇಕಾಗುತ್ತದೆ. ಆ ಗುಡಿಸಲಿನಲ್ಲಿಯೇ ಅವಳ ಊಟ, ಉಪಚಾರ, ನಡೆಯುತ್ತದೆ. ಈ ಆಚರಣೆಯ ಹನ್ನೊಂದನೇ ದಿನದವರೆಗೂ ನಡೆಯುತ್ತದೆ ಹನ್ನೆರಡನೇ ದಿನದಂದು ಒಂಭತ್ತು ಜನ ಮುತ್ತೈದೆ ಸ್ತ್ರೀಯರು ಬಂದು ನೀರನ್ನು ಕಾಯಿಸುತ್ತಾರೆ. ನೀರನ್ನು ಕಾಯಿಸುವ ಹಂಡೆ(ಗುಡಾಣ)ಯಲ್ಲಿ ಬೇವಿನಸೊಪ್ಪು, ಹಲಸಿನ ಎಲೆಯನ್ನು ಹಾಕಿ ನೀರನ್ನು ಕಾಯಿಸುತ್ತಾರೆ. ಮನೆಯ ಮುಂಭಾಗ ಮತ್ತು ಹಿಂಭಾಗಕ್ಕೂ ಈ ಸೊಪ್ಪನ್ನು ಕಟ್ಟುತ್ತಾರೆ. ಬಿದಿರಿನ ಗುಡಿಸಲಿಗೂ ಈ ಸೊಪ್ಪನ್ನು ಕಟ್ಟುತ್ತಾರೆ. ಇದರಿಂದ ದೆವ್ವ ಭೂತಗಳು ಬರುವುದಿಲ್ಲ. ಮೈ ನೆರೆದ ಹುಡುಗಿಗೆ ದೆವ್ವ ಭೂತಗಳ ಕಾಟ ತಾಕುವುದಿಲ್ಲ ಎಂಬ ನಂಬಿಕೆಯನ್ನು ಹೊಂದಿರುತ್ತಾರೆ. ನೀರನ್ನು ಕಾಯಿಸಿದ ನಂತರ ಮುತ್ತೈದೆ ಸ್ತ್ರೀಯರು ಮೈ ನೆರೆದ ಹುಡುಗಿಗೆ ಎಳ್ಳೆಣ್ಣೆಯನ್ನು ಹಚ್ಚಿ ಸ್ನಾನವನ್ನು ಮಾಡಿಸುತ್ತಾರೆ. ಈ ಸೊಪ್ಪಿನ ನೀರಿನಿಂದ ಸ್ನಾನವನ್ನು ಮಾಡಿಸುವುದರಿಂದ ಮೈ ನೆರೆದ ಹುಡುಗಿಗೆ ಕೆಮ್ಮು, ನೆಗಡಿ, ಶೀತ ಆಗುವುದಿಲ್ಲ ಎಂದು ನಂಬಿಕೆಯನ್ನು ಹೊಂದಿರುತ್ತಾರೆ. ಈ ಸಂದರ್ಭದಲ್ಲಿ ಪುರೋಹಿತರು ಬಂದು ಸೂತಕವನ್ನು ಹೋಗಲಾಡಿಸುವ ಪದ್ಧತಿಯನ್ನು ಅನುಸರಿಸುತ್ತಾರೆ. ಅಲ್ಲದೆ ಗೋ ಮೂತ್ರದಿಂದ ಈ ಸ್ಥಳವನ್ನು ಶುದ್ಧೀಕರಿಸುವ ಆಚರಣೆಯು ಇದೆ. ಮೈ ನೆರೆದ ಹುಡುಗಿಗೆ ಐದು ಜನ, ಏಳು ಜನ, ಒಂಭತ್ತು ಜನ ಈ ರೀತಿಯ ಬೆಸಸಂಖ್ಯೆಯನ್ನು ಹೊಂದಿದ ಮುತ್ತೈದೆ ಸ್ತ್ರೀಯರು ಆರತಿಯನ್ನು ಎತ್ತುವ ಸಂಪ್ರದಾಯವನ್ನು ಆಚರಿಸುತ್ತಾರೆ. ಈ ದಿನದಿಂದು ಮೈ ನೆರೆದ ಹುಡುಗಿಯ ಸೋದರ ಮಾವನು ಮನೆಯ ಮುಂದೆ ಚಪ್ಪರವನ್ನು ಹಾಕುತ್ತಾನೆ. ಅಲ್ಲಿಗೆ ಬಂದ ನೆಂಟರು, ಬಂಧು-ಬಾಂಧವರಿಗೆಲ್ಲಾ ಊಟವನ್ನು ಹಾಕುತ್ತಾರೆ ಮತ್ತು ಸಿಹಿ ತಿಂಡಿಯನ್ನು, ಎಲೆ, ಅಡಿಕೆಯ ವೀಳ್ಯವನ್ನು ನೀಡುವುದರ ಮೂಲಕ ಗೌರವಿಸುತ್ತಾರೆ. ಮೈನೆರೆದ ಹುಡುಗಿಗೆ ಹಣ್ಣು ಹಂಪಲುಗಳು, ಬೆಣ್ಣೆ, ಉದ್ದಿನ ಬೇಳೆಯ ಪದಾರ್ಥಗಳನ್ನು ಊಟಕ್ಕೆ ಬಡಿಸುತ್ತಾರೆ. ಊಟದ ಪದಾರ್ಥಗಳಿಗೆ ಅವರೇಕಾಳು, ಹೆಸರುಕಾಳು, ಬೇಳೆಕಾಳು ಮುಂತಾದ ಕಾಳುಗಳನ್ನು ಬಳಸುತ್ತಾರೆ. ಊಟದ ನಂತರ ಕೊಬ್ಬರಿ ಮತ್ತು ಹುಚ್ಚೆಳ್ಳಿನ ಎಣ್ಣೆಯನ್ನು ಕೊಡುತ್ತಾರೆ. ಇಂತಹ ದಿನಗಳಲ್ಲಿ ಶುಭಕಾರ್ಯಗಳನ್ನು ಮಾಡುವುದಿಲ್ಲ, ದೇವಸ್ಥಾನಗಳಿಗೆ ಹೋಗುವುದಿಲ್ಲ ಈ ಸಂಪ್ರದಾಯಗಳೆಲ್ಲ ಮುಗಿದ ನಂತರ ಋತುಮತಿಯಾದ ಹುಡುಗಿಯು ಮಲಗಿದ ಗುಡಿಸಲನ್ನು ಸೂತಕವು ಕಳೆದ ನಂತರ ಸುಟ್ಟು ಹಾಕುತ್ತಾರೆ.

**ಸೀಮಂತ (ಬಸುರೂಟ-ಬಸುರಿಯ ಊಟ)**

ಮೇದ ಬುಡಕಟ್ಟು ಸಮುದಾಯದ ವಿವಾಹವಾದ ಸ್ತ್ರೀಯು ಬಸುರಿಯಾದರೆ (ಗರ್ಭವನ್ನು ಧರಿಸಿದರೆ-ಗರ್ಭಿಣಿಯಾದರೆ) ಏಳನೆಯ ಅಥವಾ ಒಂಭತ್ತನೆಯ ತಿಂಗಳಿನಲ್ಲಿ ಸೀಮಂತ(ಬಸುರೂಟ)

ಎನ್ನುವ ಸಂಪ್ರದಾಯವನ್ನು ಆಚರಿಸುತ್ತಾರೆ. ವಿವಾಹವಾದ ಸ್ತ್ರೀಯು ಮೊದಲನೆಯ ಸಲ ಬಸುರಿಯಾದಾಗ ಅವಳ ಹೆತ್ತ ತಾಯಿಯ ಮನೆಯಿಂದ ಹಣ್ಣು ಹೂಗಳನ್ನು ಗರ್ಭಿಣಿ ಸ್ತ್ರೀಯ ಮನೆಗೆ ಕಳುಹಿಸಿ ಕೊಡುತ್ತಾರೆ. ಗಂಡನ ಮನೆಯಲ್ಲಿ ಸೀಮಂತ ಸಂಪ್ರದಾಯವನ್ನು ಆಚರಣೆ ಮಾಡುತ್ತಾರೆ. ಸೀಮಂತದ ದಿನದಂದು ಗರ್ಭಿಣಿ ಸ್ತ್ರೀಗೆ ಬಳೆಯನ್ನು ತೊಡಿಸುವ ಶಾಸ್ತ್ರವನ್ನು ಮಾಡುತ್ತಾರೆ. ಅಲ್ಲದೆ ಆ ಬಸುರಿಯ ಮನೆಯಲ್ಲಿರುವ ಮುತ್ತೈದೆ ಸ್ತ್ರೀಯರು, ಬಸುರಿಯ ಬಂಧು-ಬಾಂಧವರಿಗೆ ಬಳೆಗಳನ್ನು ತೊಡಿಸುತ್ತಾರೆ. ಈ ಸೀಮಂತದ ದಿನದಂದು ಹತ್ತು ತಟ್ಟೆಗಳಲ್ಲಿ ಹಣ್ಣು, ಹೂ, ವಿವಿಧ ರೀತಿಯ ಸಿಹಿ ಪದಾರ್ಥಗಳನ್ನು ಇಡುತ್ತಾರೆ. ಒಂದು ತಟ್ಟೆಯಲ್ಲಿ ಹೂ, ಗಂಧದ ಎಣ್ಣೆ, ವೀಳ್ಯದ ಎಲೆ, ಅಡಿಕೆ, ಅರಿಶಿಣ, ಕುಂಕುಮವನ್ನು ಇಡಲಾಗುತ್ತದೆ. ಎರಡು ತಟ್ಟೆಗಳಲ್ಲಿ ಐದು ಬಗೆಯ ಹಣ್ಣುಗಳನ್ನು ಇಡುತ್ತಾರೆ. ಇನ್ನುಳಿದ ತಟ್ಟೆಗಳಲ್ಲಿ ಸಿಹಿ ಮತ್ತು ಖಾರದ ತಿಂಡಿ ಪದಾರ್ಥಗಳನ್ನು ಇಡುತ್ತಾರೆ. ಅಲ್ಲದೇ ಇತರೆ ತಿಂಡಿ ಪದಾರ್ಥಗಳಾದ ಹೋಳಿಗೆ, ಕಜ್ಜಾಯ, ಎಳ್ಳುಂಡೆ, ಲಾಡು, ಕರ್ಜಿಕಾಯಿ, ಕಡ್ಲೆ ಉಂಡೆ, ಚಕ್ಕುಲಿ, ಅವಲಕ್ಕಿ, ವಡೆ, ಪುರಿ, ಉಂಡೆ ಇತ್ಯಾದಿ ಪದಾರ್ಥಗಳನ್ನು ಇಡುತ್ತಾರೆ. ಈ ಸೀಮಂತದ ದಿನದಂದು ಗಂಡ ಮತ್ತು ಹೆಂಡತಿ ಇಬ್ಬರು ಒಂದೇ ಮಣೆಯ ಮೇಲೆ ಕುಳಿತುಕೊಳ್ಳುವಂತೆ ವ್ಯವಸ್ಥೆ ಮಾಡಿರುತ್ತಾರೆ. ಅವರಿಗೆ ಮುತ್ತೈದೆ ಸ್ತ್ರೀಯರು ಆರತಿಯನ್ನು ಮಾಡುತ್ತಾರೆ. ಸೀಮಂತ ಕಾರ್ಯಕ್ಕೆ ಬಂದ ಸಂಬಂಧಿಕರೆಲ್ಲ ಅವರಿಗೆ ಅಕ್ಕಿ ಕಾಳುಗಳನ್ನು ಹಾಕುತ್ತಾರೆ. ವೀಳ್ಯವನ್ನು ಕೊಟ್ಟು ಗೌರವವನ್ನು ಸೂಚಿಸುತ್ತಾರೆ. ಎಲ್ಲರಿಗೂ ಸಿಹಿ ಪದಾರ್ಥಗಳನ್ನು ಹಂಚಲಾಗುತ್ತದೆ. ಸೀಮಂತ ಕಾರ್ಯಕ್ಕೆ ಬಂದ ನೆಂಟರೂ ಬಂದು-ಬಾಂಧವರಿಗೆಲ್ಲಾ ಸೀಮಂತ ಊಟ(ಬಸುರೂಟ)ವನ್ನು ಹಾಕಲಾಗುತ್ತದೆ. ಈ ಸೀಮಂತ ಕಾರ್ಯವು ಮುಗಿದ ನಂತರ ಗರ್ಭಿಣಿ ಸ್ತ್ರೀಯನ್ನು ತಂದೆ-ತಾಯಿಯರು ಹೆರಿಗೆಗೆ ತಮ್ಮ ಜೊತೆಗೆ ಕರೆದುಕೊಂಡು ಹೋಗುತ್ತಾರೆ. ಗರ್ಭಿಣಿ ಸ್ತ್ರೀಯು ಸೂರ್ಯ ಮುಳುಗುವ ಹೊತ್ತಿನಲ್ಲಿ ಮನೆಯ ಹೊರಗೆ ಕುಳಿತು ಕೊಳ್ಳಬಾರದು, ಸೂರ್ಯ ಮುಳುಗುವ ಹೊತ್ತಿನಲ್ಲಿ ಒಂಟಿಯಾಗಿ ಯಾರ ಜೊತೆಯಲ್ಲಿಯಾದರೂ ಸ್ಮಶಾನಕ್ಕೆ ಹೋಗಬಾರದು, ಹುಣಸೆ ಮರಗಳು ಇರುವ ಸ್ಥಳಗಳಿಗೆ ಹೋಗಬಾರದು, ಅಮಾವಾಸ್ಯೆಯ ದಿನಗಳಂದು ಗರ್ಭಿಣಿ ಸ್ತ್ರೀಯು ಮನೆಯ ಹೊರಗಡೆ ಬರಬಾರದು ಇತ್ಯಾದಿಯಾಗಿ ನಿಷಿದ್ಧಗಳನ್ನು ಆಚರಿಸುತ್ತಾರೆ. ಕಾರಣವೇನೆಂದರೆ, ಸೂರ್ಯ ಮುಳುಗಿದ ನಂತರ ಭೂತ-ಪ್ರೇತಗಳ ಕಾಟ ಹೆಚ್ಚಾಗುತ್ತದೆ ಎಂದು ನಂಬಿಕೆಯನ್ನು ಈ ಬುಡಕಟ್ಟು ಸಮುದಾಯದವರು ಹೊಂದಿರುವುದರಿಂದ ಈ ಎಲ್ಲಾ ಸಂದರ್ಭಗಳಲ್ಲಿ ಗರ್ಭಿಣಿ ಸ್ತ್ರೀಯನ್ನು ಮನೆಯಿಂದ ಹೊರಗಡೆ ಕಳುಹಿಸುವುದಿಲ್ಲ.

**ಮರಣ(ಸಾವು)ದ ಸಂಪ್ರದಾಯದ ಆಚರಣೆ**

ಮೇದ ಬುಡಕಟ್ಟು ಸಮುದಾಯದಲ್ಲಿ ಮರಣ(ಸಾವು)ದ ಆಚರಣೆಯನ್ನು ಸೂತಕದ ಆಚರಣೆಯ ರೀತಿಯಲ್ಲಿ ಭಾವಿಸಿಕೊಂಡು ಆಚರಿಸುತ್ತಾರೆ. ಗಂಡನು ಮರಣವನ್ನು ಹೊಂದಿದಾಗ

ಹೆಂಡತಿಯನ್ನು ಗಂಡನ ಹೆಣದ ಪಕ್ಕದಲ್ಲಿ ಕೂರಿಸುತ್ತಾರೆ. ಒಂದು ವೇಳೆ ಗಂಡನು ಸಾಯುವ ಸ್ಥಿತಿಯಲ್ಲಿದ್ದರೆ, ಆತನನ್ನು ಮನೆಯ ಹೊರಗೆ ಮಲಗಿಸುತ್ತಾರೆ. ಏಕೆಂದರೆ ಈ ವ್ಯಕ್ತಿಗೆ ಸಾವು ಹತ್ತಿರ ಬಂದಿದೆ ಎಂದೇ ಭಾವಿಸುತ್ತಾರೆ. ಹೆಣದ ಹತ್ತಿರ ಕುಳಿತ ಹೆಂಡತಿಯು ವೀಳ್ಯವನ್ನು ಗಂಡನ ಮನೆಯ ಸಂಬಂಧಿಕರಿಗೆ ಕೊಟ್ಟು ಋಣವು ತೀರಿತೆಂದು ಹೇಳುತ್ತಾಳೆ. ಹೆಣವನ್ನು ಹೊತ್ತುಕೊಂಡು ಹೋಗುವಾಗ ಬೆಂಕಿಯ ಮಡಿಕೆಯನ್ನು ಇವರು ಹಿಡಿಯುವ ಸಂಪ್ರದಾಯವನ್ನು ಆಚರಿಸುವುದಿಲ್ಲ. ಸ್ಮಶಾನದವರೆಗೆ ಹೆಣವನ್ನು ಹೊತ್ತೊಯ್ಯುವವರೆಗೆ ಇಡ್ಲಿ-ಮೊಸರು ಕುಡಿಕೆಯನ್ನು ಹಿಡಿದುಕೊಂಡು ಹೋಗುತ್ತಾರೆ. ಸ್ಮಶಾನಕ್ಕೆ ಹೆಣವನ್ನು ತಂದ ನಂತರ ಈ ಮಡಿಕೆಯನ್ನು ಒಡೆದು ಹಾಕಲಾಗುತ್ತದೆ. ಸತ್ತ ವ್ಯಕ್ತಿಯ ದೇಹವನ್ನು ಮನೆಯ ಹತ್ತಿರವೇ ಬಂಧು-ಬಾಂಧವರು ಪೂಜಿಸುತ್ತಾರೆ. ಹೆಣವನ್ನು ಸ್ಮಶಾನದಲ್ಲಿ ಹೂತುಹಾಕಿ ಅಲ್ಲಿ ಪಕ್ಕದಲ್ಲಿ ಸರಾಯಿ, ಬೀಡಿ, ವೀಳ್ಯ, ಹಣ್ಣು, ಹಂಪಲುಗಳನ್ನು ಇಟ್ಟು ಪೂಜಿಸುತ್ತಾರೆ. ಹೊಸ ಮಡಿಕೆಯಲ್ಲಿ ಸತ್ತ ವ್ಯಕ್ತಿಯ ಸಂಬಂಧಿಕರು ನೀರನ್ನು ಹಾಕಿ ಅದನ್ನು ತೂತು ಮಾಡಿ ಹೂತು ಹಾಕಿದ ಜಾಗವನ್ನು ಮೂರು ಸಲ ಸುತ್ತುತ್ತಾರೆ ನಂತರ ಮಡಿಕೆಯನ್ನು ಒಡೆದು ಹಾಕಲಾಗುತ್ತದೆ. ಮಡಿಕೆಯನ್ನು ಹೊತ್ತುಕೊಂಡು ಹೆಣವನ್ನು ಹೂತುಹಾಕಿದ ಜಾಗವನ್ನು ಸುತ್ತಿದ ವ್ಯಕ್ತಿಯ ತಲೆಯನ್ನು ಬೋಳಿಸಲಾಗುತ್ತದೆ. ಈ ಕಾರ್ಯವನ್ನು ಸತ್ತ ವ್ಯಕ್ತಿಯ ಮಕ್ಕಳು ಅಥವಾ ರಕ್ತ ಸಂಬಂಧಿಗಳಾದ ಗಂಡಸರು ಮಾಡುತ್ತಾರೆ. ಹೆಣವನ್ನು ಹೊತ್ತುಕೊಂಡು ಹೋದವರಿಗೆ ಬಿಸಿನೀರಿನಿಂದ ನೀರನ್ನು ಹಾಕಿ ಶುದ್ಧೀಕರಣ ಮಾಡುತ್ತಾರೆ. ಸತ್ತ ವ್ಯಕ್ತಿಯ ಮನೆಯಲ್ಲಿ ಸತ್ತ ವ್ಯಕ್ತಿಯ ಭಾವಚಿತ್ರವನ್ನು ಇಟ್ಟು ಅವರ ಪಕ್ಕದಲ್ಲಿ ದೀಪವನ್ನು ಹಚ್ಚಿಡುತ್ತಾರೆ. ಸತ್ತ ವ್ಯಕ್ತಿಯನ್ನು ಹೂತು ಹಾಕಿ ಬಂದ ಬಂಧು-ಬಾಂಧವರು ಈ ದೀಪಕ್ಕೆ ನಮಸ್ಕರಿಸಿ ಅವರವರ ಮನೆಗೆ ತೆರಳುತ್ತಾರೆ. ಈ ರೀತಿ ಮಾಡುವುದರಿಂದ ಸೂತಕ ಕಳೆಯಿತೆಂದು ನಂಬಿಕೆಯನ್ನು ಹೊಂದಿ ಅವರವರ ಮನೆಗಳಿಗೆ ಹೋಗುತ್ತಾರೆ.

ಈ ಬುಡಕಟ್ಟು ಸಮುದಾಯದಲ್ಲಿ ಸತ್ತ ವ್ಯಕ್ತಿಯನ್ನು ಸಮಾಧಿ ಮಾಡಿದ ನಂತರದ ದಿನದಂದು ಈ ಸಮಾಧಿಯ ಹತ್ತಿರ ಹಾಲು, ತುಪ್ಪ, ಮತ್ತು ಸಿಹಿ ಪದಾರ್ಥಗಳನ್ನು ಇಟ್ಟು ಪೂಜೆ ಮಾಡುತ್ತಾರೆ ಈ ಪದಾರ್ಥಗಳನ್ನು ಕಾಗೆಗಳು, ಇತರೆ ಪ್ರಾಣಿಪಕ್ಷಿಗಳು ತಿನ್ನುತ್ತವೆ. ವ್ಯಕ್ತಿಯನ್ನು ಸಮಾಧಿ ಮಾಡಿದ ನಂತರ ತಿಥಿ ಕಾರ್ಯವನ್ನು ಮಾಡುತ್ತಾರೆ. ಈ ತಿಥಿ ಕಾರ್ಯವು ವ್ಯಕ್ತಿ ಸತ್ತ ಐದನೇ ದಿನಕ್ಕೆ ಅಥವಾ ಒಂಭತ್ತನೇ ದಿನಕ್ಕೆ ಅಥವಾ ಹನ್ನೊಂದನೇ ದಿನಕ್ಕೆ ಮಾಡುತ್ತಾರೆ. ತಿಥಿಯ ದಿನದಂದು ಸತ್ತ ವ್ಯಕ್ತಿಯ ಬಂಧು-ಬಾಂಧವರು, ಹತ್ತಿರದ ರಕ್ತ ಸಂಬಂಧಿಗಳು, ನೆಂಟರು, ಸ್ನೇಹಿತರು ಸೇರಿ ಸಮಾಧಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಈ ಸಮಾಧಿಯ ಬಳಿ ವಿವಿಧ ಹಣ್ಣುಗಳು, ಅಡುಗೆ ಪದಾರ್ಥಗಳು, ಹೂಗಳು, ಇತ್ಯಾದಿಗಳನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ. ಈ ಬುಡಕಟ್ಟು ಸಮುದಾಯದಲ್ಲಿ ಆತ್ಮದ ಬಗ್ಗೆ ನಂಬಿಕೆಯನ್ನು ಹೊಂದಿದ್ದಾರೆ. ಸತ್ತ ವ್ಯಕ್ತಿಯು ಮತ್ತೆ ಹುಟ್ಟುತ್ತಾನೆ ಎನ್ನುವ ನಂಬಿಕೆಯನ್ನು ಹೊಂದಿದ್ದಾರೆ. ಸತ್ತ ವ್ಯಕ್ತಿಯು ತಾನು ಬದುಕಿದ ದಿನಗಳಲ್ಲಿ ಬಳಸುತ್ತಿದ್ದ ಆಹಾರ ಪದಾರ್ಥಗಳನ್ನು ಸಮಾಧಿಯ ಬಳಿ ಇಟ್ಟು ಆ ಸತ್ತ ವ್ಯಕ್ತಿಯ ಆತ್ಮವನ್ನು

ಸಂತೋಷಪಡಿಸುತ್ತಾರೆ. ಪ್ರತಿವರ್ಷ 'ಹಿರಿಯರ ಹಬ್ಬ'ದಂದು ಹಿರಿಯರ ಪೂಜೆಯನ್ನು ಮಾಡುತ್ತಾರೆ. ಹಿರಿಯರ ಪೂಜೆ ಎಂದರೆ ಸತ್ತ ವ್ಯಕ್ತಿಗಳ ಸಮಾಧಿಗೆ ಪೂಜೆಯನ್ನು ಸಲ್ಲಿಸುವುದೇ ಆಗಿದೆ.

ತೆಲುಗು ಮೇದ ಬುಡಕಟ್ಟು ಸಮುದಾಯದಲ್ಲಿ ಸತ್ತ ವ್ಯಕ್ತಿಯನ್ನು ಸಮಾಧಿ ಮಾಡುವ ಸಂಪ್ರದಾಯದ ಆಚರಣೆ ಈ ರೀತಿಯಿದೆ, ಮೇದ ಬುಡಕಟ್ಟು ಸಮುದಾಯದ ವ್ಯಕ್ತಿಯು ಸತ್ತ ನಂತರ ಸತ್ತ ವ್ಯಕ್ತಿಯ ಮನೆಯವರು ಈ ಬುಡಕಟ್ಟು ಸಮುದಾಯದ ಪಟೇಲರಿಗೆ ಮೊದಲು ತಿಳಿಸುತ್ತಾರೆ. ನಂತರ ತಮ್ಮ ಜಾತಿಯ ಬಾಂಧವರಿಗೆಲ್ಲ ತಿಳಿಸುತ್ತಾರೆ. ಸತ್ತ ವ್ಯಕ್ತಿಯ ಮನೆಯ ಮುಂದೆ ಕೊಳ್ಳಿ(ಬೆಂಕಿ)ಯನ್ನು ಹಾಕುತ್ತಾರೆ. ವ್ಯಕ್ತಿಯು ಸಾಯುವುದಕ್ಕಿಂತ ಮುಂಚೆ ಅವನ/ಅವಳ ಹತ್ತಿರದ ರಕ್ತ ಸಂಬಂಧಿಗಳು ಬಾಯಿಗೆ ನೀರು ಅಥವಾ ಹಾಲನ್ನು ಹಾಕುತ್ತಾರೆ. ಸಾಯುವ ಸಂದರ್ಭದಲ್ಲಿ ಆ ವ್ಯಕ್ತಿಯನ್ನು ಪಶ್ಚಿಮಕ್ಕೆ ತಲೆ ಪೂರ್ವಕ್ಕೆ ಕಾಲು ಇರುವಂತೆ ಮಲಗಿಸುತ್ತಾರೆ. ವ್ಯಕ್ತಿ ಸತ್ತ ನಂತರ ತೆಂಗಿನ ಚಿಪ್ಪಿನಲ್ಲಿ ಹರಳೆಣ್ಣೆಯನ್ನು ಹಾಕಿ ನೂಲಿನ ಬತ್ತಿಯನ್ನು ಇಟ್ಟು ದೀಪವನ್ನು ಹಚ್ಚುತ್ತಾರೆ. ಈ ಕಾರ್ಯವನ್ನು ಆ ಮನೆಯ ಹಿರಿಯ ಮಗ ಅಥವಾ ಕಿರಿಯ ಮಗ ಮಾಡುತ್ತಾನೆ. ಹೆಂಗಸರು ಸತ್ತರೆ ತವರು ಮನೆಯ ಸ್ತ್ರೀಯರು ಸ್ನಾನವನ್ನು ಮಾಡಿಸುತ್ತಾರೆ. ಹಣೆಗೆ ಕುಂಕುಮವನ್ನು ಹಚ್ಚುತ್ತಾರೆ. ಬಾಯಿಗೆ ಎಲೆ-ಅಡಿಕೆಯನ್ನು ಹಾಕುತ್ತಾರೆ. ಗಂಡಸು ಸತ್ತರೆ ಅವನ ಹತ್ತಿರದ ರಕ್ತಸಂಬಂಧಿಗಳು ಸ್ನಾನವನ್ನು ಮಾಡಿಸುತ್ತಾರೆ. ನಂತರ ಅವನ ಅಕ್ಕ ತಂಗಿಯರು ಹೊಸ ಬಟ್ಟೆಯನ್ನು ಹಾಕುತ್ತಾರೆ. ಹೆಂಗಸರು ಸತ್ತರೆ ಆ ಹೆಂಗಸಿನ ಅಣ್ಣ-ತಮ್ಮಂದಿರು. ಸೀರೆ-ಕುಪ್ಪಸ, ಬಟ್ಟೆಯನ್ನು ಹಾಕುತ್ತಾರೆ. ತಂದೆ ಸತ್ತರೆ ಆತನ ಮಕ್ಕಳು ಕೇಶ ಮುಂಡನವನ್ನು ಮಾಡಿಸಿಕೊಳ್ಳುತ್ತಾರೆ. ಹೆಣವನ್ನು ಮನೆಯಿಂದ ಸ್ಮಶಾನಕ್ಕೆ ಅಥವಾ ಹೆಣ ಹೂಳುವ ಜಾಗಕ್ಕೆ ಹೊತ್ತುಕೊಂಡು ಹೋಗುವುದನ್ನು ಆತನ ರಕ್ತ ಸಂಬಂಧಿಗಳು ಮಾಡುತ್ತಾರೆ. ಹೆಣವನ್ನು 'ಚಟ್ಟ'ದಲ್ಲಿ ಹೊತ್ತುಕೊಂಡು ಹೋಗುತ್ತಾರೆ. ಈ ಹೆಣವನ್ನು ಸಾಮಾನ್ಯವಾಗಿ ನಾಲ್ಕು ಜನರು ಏಕ ಕಾಲದಲ್ಲಿ ಹೊತ್ತೊಯ್ಯುತ್ತಾರೆ. ನಂತರ ಸ್ನಾನವನ್ನು ಮಾಡುತ್ತಾರೆ. ಹೆಣವನ್ನು ಹೊತ್ತೊಯ್ಯುವಾಗ ನೀರಿನ ಮಡಿಕೆಯನ್ನು ಹಿರಿಯ ಮಗ ಹಿಡಿಯುತ್ತಾನೆ. ಹೆಣ ಹೊತ್ತೊಯ್ಯುವ ದಾರಿಯುದ್ದಕ್ಕೂ ಕಡೆಲೆ, ಮಂಡಕ್ಕಿಯನ್ನು ಹೆಣದ ಮೇಲಕ್ಕೆ ತೂರುತ್ತಾರೆ. ಈ ಕಡಲೆ ಮತ್ತು ಮಂಡಕ್ಕಿಯನ್ನು ಪ್ರಾಣಿ ಪಕ್ಷಿಗಳು ತಿಂದರೆ ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ಸಿಗುತ್ತದೆ. ಎಂದು ನಂಬುತ್ತಾರೆ. ಸತ್ತ ವ್ಯಕ್ತಿಯು ಕೆಟ್ಟಗಳಿಗೆಯಲ್ಲಿ ಸತ್ತಿದ್ದರೆ ಕೋಳಿಮರಿಯನ್ನು ಸಮಾಧಿಯ ಗುಂಡಿಗೆ ಹಾಕಿ ಹೆಣವನ್ನು ಸಮಾಧಿ ಮಾಡುತ್ತಾರೆ. ಬಿದಿರಿನ ಚಟ್ಟದಿಂದ ಹೆಣವನ್ನು ತೆಗೆದ ನಂತರ ತುಂಡು-ತುಂಡು ಮಾಡಿ ಬಿಸಾಡುತ್ತಾರೆ. ಸತ್ತ ವ್ಯಕ್ತಿಯ ಮೇಲಿನ ಬಟ್ಟೆ (ವಸ್ತ್ರ)-ವಡವೆ, ಇತ್ಯಾದಿಗಳನ್ನು ತೆಗೆಯುತ್ತಾರೆ. ಸತ್ತ ವ್ಯಕ್ತಿಯು ಗಂಡಸಾಗಲಿ ಅಥವಾ ಹೆಂಗಸಾಗಲಿ ಆ ವ್ಯಕ್ತಿಯ ಮೇಲಿರುವ ಎಲ್ಲವನ್ನು ತೆಗೆದು ಹೂತು ಹಾಕುತ್ತಾರೆ. ಗರ್ಭಿಣಿ ಹೆಂಗಸು ಸತ್ತರೆ ಅವಳ ಹೊಟ್ಟೆಯನ್ನು ಹೊಲೆಯ ಜನಾಂಗದವರಿಂದ ಕೋಯಿಸಿ ಅವಳನ್ನು ಹೂತು ಹಾಕುವ ಸಂದರ್ಭದಲ್ಲಿ ಅಕ್ಕಿ ಕಾಳುಗಳನ್ನು ಹಾಕಿ ಹೂತು ಹಾಕುತ್ತಾರೆ ಮೇದ ಬುಡಕಟ್ಟು

ಸಮುದಾಯದ ಶವ ಸಂಸ್ಕಾರಕ್ಕೆ ಈ ಸಮುದಾಯದ ಜಾತಿಯವರೆಲ್ಲಾ ಒಂದುಗೂಡಿ ಈ ಕಾರ್ಯವನ್ನು ನೆರವೇರಿಸುತ್ತಾರೆ. ಹೆಣದ ಗುಂಡಿ(ಸಮಾಧಿಗುಂಡಿ)ಯನ್ನು ತೆಗೆದವರಿಗೆ ಹಣವನ್ನು ಕೊಡುತ್ತಾರೆ. ಹೆಣವನ್ನು ಹೂಳಿದ ನಂತರ ಸತ್ತವ್ಯಕ್ತಿಯ ಬಂಧು-ಬಾಂಧವರು ಸಮಾಧಿಯ ಸುತ್ತಲು ಮೂರು ಸುತ್ತು ಸುತ್ತುತ್ತಾರೆ. ಹಿರಿಯ ವ್ಯಕ್ತಿಯು ನೀರಿನ ಮಡಿಕೆಯನ್ನು ಹಿಡಿದು ಸತ್ತ ವ್ಯಕ್ತಿಗೆ 'ನೀನು ಸ್ವರ್ಗ ಸೇರು' 'ಕೈಲಾಸವನ್ನು ಸೇರು' ಎಂದು ಹೇಳುತ್ತ ಮೂರು ಸುತ್ತನ್ನು ಸುತ್ತು ಹಾಕಿ ಮಡಿಕೆಯನ್ನು ಮೂರು ತೂತನ್ನು ಕುಟ್ಟಿ ಹೊಡೆದು ಹಾಕುತ್ತಾನೆ. ನಂತರ ಬಂಧು ಬಾಂಧವರೆಲ್ಲರೂ ಕೈ ಕಾಲುಗಳನ್ನು ತೊಳೆದುಕೊಂಡು ಮನೆಯಲ್ಲಿ ಹಚ್ಚಿದ ದೀಪಕ್ಕೆ ನಮಸ್ಕಾರವನ್ನು ಮಾಡುತ್ತಾರೆ. ಸಮಾಧಿ ಮಾಡಿದ ಮೂರು ದಿನಗಳ ನಂತರ 'ಹೆಗಲಭಾರ ಇಳಿಸುವ ಸಂಪ್ರದಾಯ'ವನ್ನು ಆಚರಿಸುತ್ತಾರೆ. ಸತ್ತ ವ್ಯಕ್ತಿಯ ಹೆಣವನ್ನು ಹೊತ್ತಂತಹ ವ್ಯಕ್ತಿಗಳನ್ನು ಒನಕೆಯ ಮೇಲೆ ಕುಳಿತುಕೊಳ್ಳಲು ಹೇಳಿ ಅವರ ಹೆಗಲಿನ ಮೇಲೆ ಎಣ್ಣೆಯನ್ನು ಹಾಕಿ ಒರೆಸುತ್ತಾರೆ. ನಂತರ ಅವರ ಮೇಲೆ ನೀರನ್ನು ಸುರಿಯುತ್ತಾರೆ. ಇದಾದ ನಂತರ ಮನೆಯ ಅಂಗಳದಲ್ಲಿ ಹಾಕಿರುವ ಬೆಂಕಿಯನ್ನು ದಾಟಿಕೊಂಡು ಮನೆಯ ಒಳಕ್ಕೆ ಹೋಗುತ್ತಾರೆ. ಈ ಸಮುದಾಯದ ಪಟೇಲನು ಸತ್ತ ವ್ಯಕ್ತಿಯ ಮನೆಯವರೆಗೆ ಸಮಾಧಾನದ ಮಾತುಗಳನ್ನು ಹೇಳಿ ಸಂತೈಸುತ್ತಾನೆ ನಂತರ ಆ ಮನೆಯ ವ್ಯಕ್ತಿಗಳೆಲ್ಲರೂ ಸ್ನಾನವನ್ನು ಮಾಡಿ ಶುದ್ಧೀಕರಣಗೊಳ್ಳುತ್ತಾರೆ. ಸತ್ತ ವ್ಯಕ್ತಿಯು ಸತ್ತ ಮೂರನೆಯ ದಿನಕ್ಕೆ ಶ್ರಾದ್ಧಾ ಎನ್ನುವ ಕಾರ್ಯವನ್ನು ಮಾಡುತ್ತಾರೆ. ಈ ಶ್ರಾದ್ಧಾ ಕಾರ್ಯಕ್ಕೆ ಮಾಂಸದ ಅಡುಗೆಯನ್ನು ಮಾಡುತ್ತಾರೆ. ಈ ಸಮುದಾಯದ ಹಿರಿಯರ ಹೆಸರಿನಲ್ಲಿ ಮೂರು ಎಡೆಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಈ ಮೂರು ಎಡೆಗಳಲ್ಲಿ ಒಂದನ್ನು ಸಮಾಧಿಯ ಬಳಿ ಇಟ್ಟು ಬರುತ್ತಾರೆ. ಇದನ್ನು ಕಾಗೆಗಳು, ಪ್ರಾಣಿ, ಪಕ್ಷಿಗಳು ತಿನ್ನುತ್ತವೆ. ಈ ರೀತಿ ಮಾಡುವುದರಿಂದ ಮೃತನ ಆತ್ಮಕ್ಕೆ ಶಾಂತಿ ಸಿಗುತ್ತದೆ ಎಂದು ನಂಬುತ್ತಾರೆ.

ನಂತರ 'ಏಳುಕೊಂಡ್ಲೆಯ ಒಡೆಯ ವೆಂಕಟರಮಣ ಗೋವಿಂದ, ಗೋವಿಂದ, ಗೋವಿಂದ, ಎಂದು ಸಾರುತ್ತಾ ಕೂಗುತ್ತಾರೆ. ಮನೆಯಲ್ಲಿ ಹಾಕಿರುವ ಎಡೆಯನ್ನು ಮೃತನ ಕುಟುಂಬದವರು ಮಾತ್ರ ಹಂಚಿಕೊಂಡು ತಿನ್ನುತ್ತಾರೆ. ಈ ರೀತಿ ಎಡೆಯನ್ನು ಹಂಚಿಕೊಂಡು ತಿನ್ನುವ ಸಂದರ್ಭದಲ್ಲಿ ಕುಲದೇವರುಗಳ ಹೆಸರುಗಳನ್ನು ಹೇಳಿಕೊಳುತ್ತ ಎಡೆಯನ್ನು ತಿನ್ನುತ್ತಾರೆ. ಹನ್ನೊಂದನೆಯ ದಿನದಂದು ಸ್ನಾನವನ್ನು ಮಾಡಿ ಬಂಧು ಬಾಂಧವರು, ನೆಂಟರು, ಜಾತಿಯ ಕುಲಬಾಂಧವರು ಸೇರಿ ಸೂತಕವನ್ನು ಕಳೆದುಕೊಳ್ಳಲು ಪೂಜೆಯನ್ನು ಮಾಡುತ್ತಾರೆ. ಈ ಪೂಜೆಗೆ 'ಸಮಾರಾಧನೆ' ಎಂದು ಕರೆದು ಈಶ್ವರನ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಎಡೆಯನ್ನು ಇಟ್ಟು ತುಪ್ಪದ ದೀಪವನ್ನು ಹಚ್ಚಿ ಪೂಜೆ ಸಲ್ಲಿಸುತ್ತಾರೆ. ಸತ್ತ ವ್ಯಕ್ತಿಯ ಮನೆಯಲ್ಲಿ ಸತ್ತ ವ್ಯಕ್ತಿಗೆ ಹೊಸ ಬಟ್ಟೆಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಅಮಾವಾಸ್ಯೆ, ಯುಗಾದಿ ಹಬ್ಬದ ದಿನ, ಗೌರಿಹಬ್ಬ ಇತ್ಯಾದಿ ಹಬ್ಬಗಳಲ್ಲಿ ಹಿರಿಯರಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಸತ್ತ ವ್ಯಕ್ತಿಯು ಮತ್ತೆ ಅದೇ ಕುಟುಂಬದಲ್ಲಿ ಜನಿಸುತ್ತಾರೆ ಎಂದು ನಂಬಿಕೆಯನ್ನು ಹೊಂದಿರುತ್ತಾರೆ. ಈ ಕಾರಣದಿಂದಲೇ ಮನೆಯಲ್ಲಿ

ಹುಟ್ಟುವಂತಹ ಮಕ್ಕಳಿಗೆ ಸತ್ತು ಹೋದ ಹಿರಿಯರ ಹೆಸರುಗಳನ್ನೇ ಇಡುತ್ತಾರೆ. ಈ ಮೇದ ಬುಡಕಟ್ಟು ಸಮುದಾಯದಲ್ಲಿ ವ್ಯಕ್ತಿಗಳು ಅಸಹಜ ಸಾವನ್ನಪ್ಪಿದರೆ(ಅತ್ಮಹತ್ಯೆ, ಅಪಘಾತ ಇತ್ಯಾದಿ) ಕುಷ್ಟರೋಗ, ತೊನ್ನು ರೋಗ, ಪ್ಲೇಗ್, ರೋಗ ಇತ್ಯಾದಿ ರೋಗಗಳಿಂದ ವ್ಯಕ್ತಿಗಳು ಸತ್ತರೆ ಸುಟ್ಟು ಹಾಕುತ್ತಾರೆ.

**ಧರ್ಮ, ದೇವರು ಮತ್ತು ನಂಬಿಕೆಗಳು**

ಮೇದ ಬುಡಕಟ್ಟು ವಾಸ ಮಾಡುವ ಪ್ರದೇಶಗಳಿಗೆ ಅನುಗುಣವಾಗಿ ತಮ್ಮದೇ ಆದ ದೇವರುಗಳು, ಹಾಗೂ ಧಾರ್ಮಿಕ ಶ್ರದ್ಧಾ ಕೇಂದ್ರಗಳನ್ನು ಆರಾಧಿಸುತ್ತಾರೆ. ಈ ಬುಡಕಟ್ಟು ಸಮುದಾಯದವರು ಮೂಲತಃ ವಾಗಿ ಪೂಜಿಸುತ್ತಿದ್ದ ಮತ್ತು ಆರಾಧಿಸುತ್ತಿದ್ದ ದೇವರುಗಳ ಜೊತೆಗೆ, ಅವರು ವಾಸಮಾಡುವಂತಹ ಪ್ರದೇಶಗಳಲ್ಲಿನ ದೇವರುಗಳೂ ಕೂಡ ಇವರ ಧಾರ್ಮಿಕ ನಂಬಿಕೆಯ ದೇವರುಗಳಾಗಿವೆ. ಕನ್ನಡ ಮೇದ ಬುಡಕಟ್ಟು ಸಮುದಾಯದವರು ಮತ್ತು ತೆಲುಗು ಮೇದ ಬುಡಕಟ್ಟು ಸಮುದಾಯದವರು, ತಮ್ಮದೇ ಆದ ದೇವರುಗಳನ್ನು ಆರಾಧಿಸುತ್ತಾರೆ. ಮತ್ತು ಪೂಜಿಸುತ್ತಾರೆ. ಕನ್ನಡ ಮೇದ ಬುಡಕಟ್ಟಿನಲ್ಲಿ ತಮ್ಮ ಕುಲಗಳಿಗೆ ಅನುಗುಣವಾಗಿ ತಿಮ್ಮಪ್ಪನ ಕುಲ, ತೋಪಿನ ಕುಲ, ಯಲ್ಲಮ್ಮನ ಕುಲ, ಇತ್ಯಾದಿಯಾಗಿರುವ ಈ ಕುಲದೇವರು, ತಮ್ಮ ದೇವರುಗಳನ್ನಾಗಿ, ತೋಪನಯ್ಯ, ತಿಮ್ಮಪ್ಪ, ಯಲ್ಲಮ್ಮ, ಓಂಕಾರಪ್ಪ, ಸಿದ್ದಪ್ಪ, ಲಕ್ಷ್ಮೀದೇವರು ಕೊಂಗಳ್ಳಿ ಮಲ್ಲಿಕಾರ್ಜುನ ದೇವರು ಇತ್ಯಾದಿಯಾಗಿ ತಮ್ಮ ದೇವರು, ದೇವತೆಗಳನ್ನು ಪೂಜಿಸಿ, ಆರಾಧಿಸುತ್ತಾರೆ. ಅಲ್ಲದೇ, ಮಾರಿಯಮ್ಮ, ಚೌಡಮ್ಮ, ಕುಕ್ಕಡದಮ್ಮ, ಮಾರಮ್ಮ, ಲಕ್ಕಮ್ಮ, ದುರ್ಗಮ್ಮ, ಕರಿಯಮ್ಮ, ಲಕ್ಷ್ಮಮ್ಮ, ಶನೇಶ್ವರ ಇತ್ಯಾದಿ ದೇವ-ದೇವತೆಗಳನ್ನು ಆರಾಧಿಸುತ್ತಾರೆ. ಈ ದೇವರುಗಳಿಗೆ ಸಂಬಂಧಿಸಿದ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ. ಮೇದ ಬುಡಕಟ್ಟು ಸಮುದಾಯದವರು ಆಚರಿಸುವ ಹಬ್ಬಗಳಲ್ಲಿ ಸಿಹಿ ಅಡುಗೆಗಳು ಹಾಗೂ ಮಾಂಸದ ಊಟವೂ ಇರುತ್ತದೆ. ಈ ಸಮುದಾಯದವರು, ಹೆಚ್ಚಾಗಿ ಮಾಂಸದ ಅಡುಗೆಗಳನ್ನು, ಮಾಂಸದ ಊಟವನ್ನು ಇಷ್ಟಪಟ್ಟು ಸೇವಿಸುತ್ತಾರೆ. ಹೆಣ್ಣು ದೇವತೆಗಳಿಗೆ ಕುರಿ ಬಲಿಗಳನ್ನು ಕೊಡುವ ಪದ್ಧತಿಯನ್ನು ಅನುಸರಿಸುತ್ತಾರೆ.

ಚಿತ್ರದುರ್ಗ ಜಿಲ್ಲೆಯ ಮೇದ ಬುಡಕಟ್ಟು ಸಮುದಾಯದವರು ತಮ್ಮ ದೇವರುಗಳನ್ನು ಸ್ಥಳೀಯವಾಗಿ ಪೂಜಿಸುತ್ತಾರೆ. ಅಲ್ಲದೇ ಬೇರೆ-ಬೇರೆ ಜಿಲ್ಲೆಗಳಲ್ಲಿರುವ ಕರ್ನಾಟಕದಾದ್ಯಂತ ಇರುವ ತಮ್ಮ ದೇವರುಗಳಿಗೆ ಪೂಜೆಯನ್ನು ಸಲ್ಲಿಸಲು ಹೋಗುತ್ತಾರೆ. ಮೂಲತಃವಾಗಿ ಮೇದ ಬುಡಕಟ್ಟು ಸಮುದಾಯವು ವಲಸೆ ಬಂದು ನೆಲೆಸಿರುವುದರಿಂದ ತಮ್ಮ ಮೂಲ ಸ್ಥಾನದಲ್ಲಿರುವ ದೇವರುಗಳಿಗಾಗಿ ಕರ್ನಾಟಕದ ಇತರೇ ಪ್ರದೇಶಗಳು, ಆಂಧ್ರಪ್ರದೇಶ, ತಮಿಳುನಾಡುಗಳಿಗೂ ಹೋಗಿ ಅಲ್ಲಿರುವ ತಮ್ಮ ಮೂಲ ದೇವರುಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಈ ಸಮುದಾಯದಲ್ಲಿ ಈ ವೈವಿಧ್ಯತೆಯಿರುವುದರಿಂದ ತಮ್ಮ ಧಾರ್ಮಿಕ ಜೀವನದಲ್ಲಿ ವಿವಿಧ ದೇವರು, ದೇವತೆಗಳನ್ನು ಪೂಜಿಸುತ್ತಾರೆ. ತೆಲುಗು ಮೂಲದವರು ಆಂಧ್ರಪ್ರದೇಶದ ವಿವಿಧ ಪ್ರದೇಶಗಳಲ್ಲಿರುವ ದೇವರನ್ನು ಪೂಜಿಸಲು ಹೋಗುತ್ತಾರೆ.

ತಮಿಳು ಮೂಲದವರು ತಮ್ಮ ಮೂಲ ದೇವರುಗಳನ್ನು ಪೂಜಿಸಲು ತಮಿಳುನಾಡಿಗೆ ಹೋಗುತ್ತಾರೆ. ಇವರು ಪೂಜಿಸುವ ದೇವರುಗಳು ಬಿದಿರಿನೊಂದಿಗೆ ಭಾವನಾತ್ಮಕವಾದ ಸಂಬಂಧವನ್ನು ಹೊಂದಿರುತ್ತವೆ ಎಂದು ನಂಬಿದ್ದಾರೆ. ಮೇದರ ಕೇರಿಗಳಲ್ಲಿ ತಮ್ಮ ದೇವರುಗಳನ್ನು ಸ್ಥಾಪಿಸಿಕೊಂಡು ದೇವಸ್ಥಾನಗಳನ್ನು ಕಟ್ಟಿಸಿಕೊಂಡಿರುತ್ತಾರೆ. ಚೌಡೇಶ್ವರಿ, ಮಾರಮ್ಮ, ಹುಲುಗಮ್ಮ ಇತ್ಯಾದಿ ದೇವರುಗಳನ್ನು ಸ್ಥಾಪಿಸಿಕೊಂಡು ದೇವಸ್ಥಾನಗಳನ್ನು ಕಟ್ಟಿಕೊಂಡು, ಹಬ್ಬ-ಹರಿದಿನಗಳನ್ನು ಆಚರಿಸುತ್ತಾ ದೇವರನ್ನು ಆರಾಧಿಸುತ್ತಾರೆ.

ಮೇದ ಬುಡಕಟ್ಟು ಸಮುದಾಯದ ದೇವತೆಗಳನ್ನು ಸಾಮಾನ್ಯವಾಗಿ ಕಟ್ಟೆ(ಜಗುಲಿ)ಯ ಮೇಲೆ ಸ್ಥಾಪನೆ ಮಾಡಿರುತ್ತಾರೆ. ಮರದಲ್ಲಿ ಹಾಲು ಬರುವಂತಹ ವೃಕ್ಷಗಳ ಕೆಳಗೆ ಕಟ್ಟೆ(ಜಗುಲಿ)ಯನ್ನು ಕಟ್ಟಿ, ಮರದ ಬೊಡ್ಡೆ(ಕಾಂಡ)ದ ಸುತ್ತ ದುಂಡಾಗಿ ಕಲ್ಲುಗಳನ್ನು ಜೋಡಿಸಿ, ಕಟ್ಟೆಯನ್ನು ಕಟ್ಟುತ್ತಾರೆ. ಆ ಕಟ್ಟೆಯ ಮೇಲೆ ಕಲ್ಲಿನ ಪ್ರತಿಮೆಗಳನ್ನು ಇಡುತ್ತಾರೆ. ಕಾಡಿನ ದೇವತೆಗಳಿಗೆ ನಾಲ್ಕು ಚಪ್ಪಡಿಗಳನ್ನು ಇಟ್ಟು, ಗುಡಿಯ ರೀತಿಯಲ್ಲಿ ಸ್ಥಾಪಿಸಿ, ಅದರ ಒಳಗೆ ನಿರ್ದಿಷ್ಟ ಸ್ಥಳವನ್ನು ಗುರುತಿಸಿ, ಒಳಗೆ ಕಲ್ಲಿನ ಪ್ರತಿಮೆಗಳನ್ನು ಸ್ಥಾಪಿಸುತ್ತಾರೆ. ಆ ಕಲ್ಲು ಚಪ್ಪಡಿಗಳಿಗೆ ಸುಣ್ಣ ಮತ್ತು ಹುರಿಮಂಜುಗಳನ್ನು ಬಳಿಯುತ್ತಾರೆ. ಕಟ್ಟೆಯ ಮೇಲೆ ಗಂಟೆ ಮತ್ತು ದೀಪವನ್ನು ಇಡಲು ಚಪ್ಪಟೆಯಾಕಾರದ ಕಲ್ಲನ್ನು ಇಡುತ್ತಾರೆ. ಸಾಧ್ಯವಾದಷ್ಟು ಮಟ್ಟಿಗೆ ದೇವರನ್ನು ಎತ್ತರದ ಸ್ಥಳದಲ್ಲಿ ಸ್ಥಾಪನೆ ಮಾಡಿರುತ್ತಾರೆ. ಕೊಲ್ಲಾರಮ್ಮ ದೇವಿಯನ್ನು ಸ್ಥಾಪಿಸುವ ಸಂದರ್ಭದಲ್ಲಿ ಗುಡಿಯಲ್ಲಿ ಕೊಲ್ಲಾರಮ್ಮ ದೇವಿಯ ಸ್ಥಳ ಎತ್ತರವಾಗಿರುವಂತೆ ಸ್ಥಾಪಿಸುತ್ತಾರೆ. ದೇವತೆಗಳ ಮೂರ್ತಿಗಳನ್ನು ಹಿತ್ತಾಳೆ ಮತ್ತು ತಾಮ್ರದಿಂದಲೂ ಮಾಡಿ ಸ್ಥಾಪಿಸುತ್ತಾರೆ. ಈ ದೇವತೆಗಳನ್ನು ಬಟ್ಟೆ ಮತ್ತು ವಿವಿಧ ಅಲಂಕಾರಗಳಿಂದ ಸಿಂಗರಿಸುತ್ತಾರೆ. ಗುಡಿಯಲ್ಲಿ ಪಲ್ಲಕ್ಕಿಯನ್ನು ಸರಪಳಿಯಿಂದ ಮೇಲಕ್ಕೆ ಕಟ್ಟಿ ಪಲ್ಲಕ್ಕಿಯ ಉಯ್ಯಾಲೆಯ ಮೇಲೆ ದೇವತೆಯ ಮೂರ್ತಿಯನ್ನು ಸ್ಥಾಪಿಸುತ್ತಾರೆ. ನಿಯಮಿತವಾಗಿ ದೇವತೆಗೆ ಛತ್ರ, ಚಾಮರಗಳಿಂದ ಪೂಜೆಯನ್ನು ಮಾಡುತ್ತಾರೆ. ಮನೆಗಳಿಂದ ಅಡುಗೆ ಪದಾರ್ಥಗಳನ್ನು ಮಾಡಿಕೊಂಡು ಬಂದು, ಪೂಜೆಯನ್ನು ಸಲ್ಲಿಸುತ್ತಾರೆ. ಮಾರನವಮಿ ಮತ್ತು ನವರಾತ್ರಿಗಳಂತಹ ಹಬ್ಬಗಳಲ್ಲಿ ದೇವತೆಗೆ ಪ್ರಾಣಿಬಲಿಯನ್ನು ಕೊಡುವಂತಹ ಪದ್ಧತಿ ಮತ್ತು ರೂಢಿಗಳು ಇವೆ.

ಪ್ರಾಣಿ ಬಲಿಯನ್ನು ಕೊಡುವುದಕ್ಕಾಗಿಯೇ ದೇವತೆಗಳ ದೇವಾಲಯಗಳಲ್ಲಿ 'ಬಲಿಕಲ್ಲು' ಅನ್ನು ಸ್ಥಾಪಿಸಿರುತ್ತಾರೆ. ಈ ಸಮುದಾಯದ ಜನರು ಪ್ರಾಣಿ ಬಲಿಯನ್ನು ಕೊಡಲು ಹರಕೆಯನ್ನು ಹೊತ್ತುಕೊಂಡು, ತಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳಲು ಪ್ರಾಣಿಬಲಿಯನ್ನು ದೇವತೆಗೆ ಕೊಡುವ ಪದ್ಧತಿಯನ್ನು ಅನುಸರಿಸುತ್ತಾರೆ. ಈ ಬಲಿಕೊಡುವ ಆಚರಣೆಯೂ ಕೂಡ ವಿಶಿಷ್ಟತೆಯನ್ನು ಹೊಂದಿದೆ. ದೇವಾಲಯದ ಪೂಜೆ ಮಾಡುವ ವ್ಯಕ್ತಿ ಪೂಜಾರಿಯು ಬಲಿಯನ್ನು 'ಬಲಿಪೀಠ'ದ ಮೇಲೆ ಇಟ್ಟು, ಅದರ ಮೇಲೆ ನೀರನ್ನು ಚಿಮುಕಿಸಿ, ಬಲಿಗೆ ಹಾರವನ್ನು ಹಾಕಿ, ಹರಿಶಿಣ-ಕುಂಕುಮವನ್ನು ಹಚ್ಚಿ, ದೇವಸ್ಥಾನದ ಹೊರಗೆ ಇರುವ 'ಬಲಿಪೀಠ'ದ ಕಂಬಕ್ಕೆ ಬಲಿಯ ಕುತ್ತಿಗೆಯನ್ನು ತಗುಲಿಸಿ ಬಲಿಯನ್ನು ಕೊಡುತ್ತಾರೆ. ಬಲಿಕೊಡುವ ಕಾರ್ಯವನ್ನು ಮೊದಲು

ಪೂಜಾರಿಯು ಮಾಡುತ್ತಾನೆ. ತದನಂತರ, ಪ್ರತಿಯೊಂದು ಬಲಿಗೆ ಪೂಜಾರಿಯು ತೀರ್ಥವನ್ನು ಹಾಕಿದ ನಂತರ ಉಳಿದ ಭಕ್ತರು ಬಲಿಯನ್ನು ಕೊಡುತ್ತಾರೆ. ಕುರಿ, ಕೋಳಿ, ಮೇಕೆ, ಬಲಿಗಳನ್ನು ದೇವತೆಗೆ ಕೊಡುತ್ತಾರೆ. ಈ ಬಲಿಗಳಿಂದ ಮಾಂಸದ ಅಡುಗೆಯನ್ನು ಮಾಡಿ ತಿನ್ನುತ್ತಾರೆ. ಮೇದ ಬುಡಕಟ್ಟು ಸಮುದಾಯದ ಜನರು ಮಾಂಸಾಹಾರವನ್ನು ಹೆಚ್ಚಾಗಿ ಇಷ್ಟಪಡುವುದರಿಂದ ವಿವಿಧ ರೀತಿಯ ಮಾಂಸದ ಅಡುಗೆಗಳನ್ನು ಮಾಡಿ ತಿನ್ನುತ್ತಾರೆ. ಮಾಂಸದ ಊಟದೊಂದಿಗೆ ಮದ್ಯವನ್ನು ಸೇವಿಸುವ ಪದ್ಧತಿ ಇದೆ. ಮಾಂಸದ ಊಟವನ್ನು ನೆಂಟರು, ಬಂಧು-ಬಾಂಧವರು, ಸಂಬಂಧಿಗಳಿಗೆ ಸಾರ್ವತ್ರಿಕವಾಗಿಯೂ ಬಡಿಸುತ್ತಾರೆ. ಕೆಲವೊಮ್ಮೆ ಒಟ್ಟಾಗಿ, ಗುಂಪಾಗಿ, ಮಾಂಸಾಹಾರವನ್ನು ಸೇವಿಸುತ್ತಾರೆ.

ಮೇದರ ಬುಡಕಟ್ಟು ಸಮಾಜದಲ್ಲಿ ಮೇದರ ಜನಾಂಗದವರೇ ದೇವಸ್ಥಾನಗಳಿಗೆ ಪೂಜಾರಿಗಳಾಗಿರುತ್ತಾರೆ. ದೇವತೆಯ ಜೊತೆಗೆ ಬಿದಿರುಗಳನ್ನು ಪೂಜಿಸಿ ಈ ಸಮುದಾಯದ ಜನರಿಗೆ ಹಂಚುವ ಪದ್ಧತಿಯಿದೆ. ಕೆಲವೊಮ್ಮೆ ಹಬ್ಬ-ಹರಿದಿನಗಳಲ್ಲಿ ಈ ಸಮುದಾಯದ ಜನರು ಉಪವಾಸವನ್ನು ಆಚರಿಸುತ್ತಾರೆ. ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ದೀಪಾವಳಿ ಹಬ್ಬದ ನಂತರ ಕಾಡಮ್ಮ ದೇವತೆಗೆ ಪೂಜೆಯನ್ನು ಸಲ್ಲಿಸಿ ಹಬ್ಬವನ್ನು ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಹೊಸ ಬಿದಿರುಗಳನ್ನು ಪೂಜೆ ಮಾಡುತ್ತಾರೆ. ಬಿದಿರುಗಳನ್ನು, ಆಯುಧಗಳನ್ನು ಇಟ್ಟು ಪೂಜೆ ಮಾಡಿ ಕುರಿ, ಮೇಕೆ, ಕೋಳಿಗಳನ್ನು ಈ ದೇವತೆಗೆ ಬಲಿ ಕೊಡುತ್ತಾರೆ. ಈ ಹಬ್ಬದ ನಂತರ ಮೂರು ದಿನಗಳ ಕಾಲ ಬಿದಿರುಗಳನ್ನು ಕಡಿಯುವುದಿಲ್ಲ. ಮೂರು ದಿನಗಳ ನಂತರ ಕಾಡಿನಲ್ಲಿ ಪೂಜೆಯನ್ನು ಸಲ್ಲಿಸಿ ಬಿದಿರನ್ನು ಕಡಿಯುವ ಸಂಪ್ರದಾಯವಿದೆ. ಈ ಸಂಪ್ರದಾಯವು ಮೇದರ ಬುಡಕಟ್ಟು ಸಮುದಾಯದಲ್ಲಿನ ದೇವರು-ದೇವತೆಗಳ ಬಗ್ಗೆ ಇರುವ ಭಯ-ಭಕ್ತಿ, ನಂಬಿಕೆಗಳ ಆಚರಣೆಯಾಗಿದೆ. ಅರಣ್ಯದಲ್ಲಿ ಮುಟ್ಟರಾಯ ದೇವರು, ಮೇದಾರ ಮಲ್ಲಮ್ಮ ಎನ್ನುವ ದೇವತೆಯನ್ನು ಪೂಜಿಸುತ್ತಾರೆ. ಈ ರೀತಿ ಮಾಡುವುದರಿಂದ ದೇವರು ಮತ್ತು ದೇವತೆಗಳು ತಮ್ಮನ್ನು ಕಾಡು ಪ್ರಾಣಿಗಳಿಂದ ರಕ್ಷಿಸುತ್ತಾರೆ ಎನ್ನುವ ನಂಬಿಕೆಯನ್ನು ಹೊಂದಿದ್ದಾರೆ. ಮೇದ ಬುಡಕಟ್ಟು ಇತರೆ ಜಾತಿಯವರನ್ನು ಸಮಾನವಾಗಿ ಕಾಣುತ್ತಾರೆ. ಬೇಡರು, ಕ್ಷೌರಿಕರು, ಮಡಿವಾಳರು(ಅಗಸರು) ಇವರುಗಳನ್ನು ತಮ್ಮ ಜಾತಿಯ ಕೆಳಜಾತಿಯವರೆಂದು ಭಾವಿಸುವುದಿಲ್ಲ. ಆದರೆ ತೀರ ಕೆಳಜಾತಿಯ ವ್ಯಕ್ತಿಗಳೊಂದಿಗೆ ಇವರು ಸಮಾನತೆಯನ್ನು ಪರಿಗಣಿಸುವುದಿಲ್ಲ. ಒಕ್ಕಲಿಗರು, ಕುರುಬರು, ಕುಂಚಿಟಿಗರು, ಗೊಲ್ಲರು, ಉಪ್ಪಾರರು, ಭೋವಿಗಳು ಇತ್ಯಾದಿ ಜನಾಂಗದವದರು ಇವರ ಮನೆಯಲ್ಲಿ ಊಟವನ್ನು ಮಾಡಲು ಅವಕಾಶ ನೀಡುತ್ತಾರೆ. ಈ ಜನಾಂಗದವರ ಮನೆಗಳಿಗೂ ಮೇದರ ಸಮಾಜದವರು ಹೋಗಿ ಊಟವನ್ನು ಮಾಡುತ್ತಾರೆ. ಹಬ್ಬ-ಹರಿದಿನಗಳಲ್ಲಿ ಪರಸ್ಪರ ಈ ಜನಾಂಗದವರು ಭಾಗವಹಿಸಿ ಊಟ-ಉಪಚಾರಗಳನ್ನು ಮಾಡುತ್ತಾರೆ. ಮೇದ ಸಮಾಜದವರು ಕೊಲ್ಲಾರಮ್ಮ, ಗುಳ್ಯಮ್ಮ ಮತ್ತು ಅಂತರಘಟ್ಟಮ್ಮ ದೇವತೆಗಳನ್ನು ಪೂಜಿಸುತ್ತಾರೆ. ಈ ದೇವತೆಗಳನ್ನು ಬಲವಾಗಿ ನಂಬುವ ಇವರು ಈ ದೇವತೆಗಳನ್ನು ಶಕ್ತಿ ದೇವತೆಗಳೆಂದೇ ಪರಿಗಣಿಸುತ್ತಾರೆ. ರೋಗ-ರುಜಿನಗಳ

ನಿವಾರಣೆಗೆ ಈ ದೇವತೆಗಳ ಮೊರೆ ಹೋಗುತ್ತಾರೆ. ಈ ದೇವತೆಗಳಿಗೆ ಪ್ರಾಣಿ ಬಲಿಗಳನ್ನು ನೀಡುತ್ತಾರೆ. ಕುರಿ, ಮೇಕೆ, ಕೋಳಿಗಳನ್ನು ಬಲಿ ಕೊಡುತ್ತಾರೆ. ಮಹಾರಾಷ್ಟ್ರದ ಕೊಲ್ಲಾಪುರದಲ್ಲಿರುವ ಕೊಲ್ಲಾರಮ್ಮನಿಗೆ ಪೂಜೆ ಸಲ್ಲಿಸಲು, ಬಲಿ ಕೊಡಲು, ಚಿತ್ರದುರ್ಗ ಜಿಲ್ಲೆಯ ಮೇದ ಜನಾಂಗದವರು ಹೋಗುತ್ತಾರೆ. ಅಲ್ಲಿ ನಡೆಯುವ ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ಆದಿಶಕ್ತಿ ಯಲ್ಲಮ್ಮ ದೇವತೆಗೆ ಪೂಜೆಯನ್ನು ಸಲ್ಲಿಸುತ್ತಾರೆ. ಆದಿಶಕ್ತಿ ಯಲ್ಲಮ್ಮ, ಚೌಡಮ್ಮ, ಭೂತರಾಯ, ಸುಬ್ರಮಣ್ಯ, ಪಳನಿ, ದೇವರುಗಳನ್ನು ಪೂಜೆ ಮಾಡುತ್ತಾರೆ. ತಮಿಳು ಮೇದರು, ತೆಲುಗು ಮೇದರು, ಕನ್ನಡ ಮೇದರು ಇವರುಗಳ ಮಧ್ಯೆ ವೈವಾಹಿಕ ಸಂಬಂಧಗಳು ಏರ್ಪಟ್ಟಿರುವುದರಿಂದ ಈ ಜನಾಂಗದ ಆಚರಣೆಗಳಲ್ಲಿ ಸಾಮ್ಯತೆಯಿದೆ.

**ಮುತ್ತೆತ್ತರಾಯ ದೇವರು**

'ಮುತ್ತೆತ್ತರಾಯ ದೇವರನ್ನು ಮೇದ ಬುಡಕಟ್ಟು ಸಮುದಾಯದವರು ಆರಾಧಿಸುತ್ತಾರೆ. ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕಿನ ಹಲಗೂರು ಸಮೀಪದ ಕಾವೇರಿ ನದಿ ತೀರದಲ್ಲಿರುವ 'ದೊಡ್ಡ ಮತ್ತೋಡಿ' ಎನ್ನುವ ಗ್ರಾಮದಲ್ಲಿ ಮುತ್ತೆತ್ತರಾಯನ ದೇವಸ್ಥಾನವಿದೆ. ಮುತ್ತೆತ್ತರಾಯ ದೇವರಿಗೆ ಮೇದ ಜನಾಂಗದವರು ಮತ್ತು ಇತರೆ ಜನಾಂಗದವರು ಕೂಡ ಪೂಜೆ ಸಲ್ಲಿಸುತ್ತಾರೆ. ಇಲ್ಲಿ ಈ ದೇವರಿಗೆ ತುಂಬಾ ವೈಭವಯುತವಾಗಿ ಜಾತ್ರೆಯನ್ನು ಮಾಡುತ್ತಾರೆ. ಈ ಜಾತ್ರೆಯು ಶ್ರಾವಣ ಮಾಸದ ಮೂರನೇ ವಾರದ ಮಂಗಳವಾರದಿಂದ ಶನಿವಾರದವರೆಗೆ ನಡೆಯುತ್ತದೆ. ಈ ದೇವರ ಜಾತ್ರೆಗೆ ಚಿತ್ರದುರ್ಗ ಜಿಲ್ಲೆಯ ಮೇದ ಬುಡಕಟ್ಟು ಸಮುದಾಯದವರು ಹೋಗುತ್ತಾರೆ. ಮುತ್ತೆತ್ತರಾಯನೆಂದರೆ ಆಂಜನೇಯ ದೇವರು ಎಂದು ನಂಬುತ್ತಾರೆ. ಈ ಮುತ್ತೆತ್ತರಾಯ ದೇವರಿಗೆ ಆಧಾರವಾಗಿ ರಾಮಾಯಣದ ಈ ಕಥೆ ಮೇದ ಜನಾಂಗದವರಲ್ಲಿ ಚಾಲ್ತಿಯಲ್ಲಿದೆ. ರಾಮನು ತನ್ನ ಪತ್ನಿ ಸೀತೆ ಮತ್ತು ತಮ್ಮನಾದ ಲಕ್ಷ್ಮಣನೊಂದಿಗೆ ವನವಾಸದ ಕಾಲದಲ್ಲಿ ಪ್ರಯಾಣಿಸುತ್ತಾ ಕಾವೇರಿ ನದಿ ತೀರಕ್ಕೆ ಬಂದರು. ಕಾವೇರಿ ನದಿಯಲ್ಲಿ ಸೀತಾದೇವಿಯು ಸ್ನಾನಕ್ಕೆ ಹೋದಾಗ ಅವಳ ಮುತ್ತಿನ ಮೂಗುತಿ ಕಳಚಿಕೊಂಡು ಕಾವೇರಿ ನದಿಯಲ್ಲಿ ಬಿದ್ದಿತು. ಈ ರೀತಿಯಾದ ಸಂಗತಿಯನ್ನು ತಿಳಿದ ಆಂಜನೇಯನು ಕಾವೇರಿ ನದಿ ತೀರಕ್ಕೆ ತೆರಳಿ ಮುತ್ತಿನ ಮೂಗುತಿಯನ್ನು ತೆಗೆದುಕೊಂಡು ಬಂದು ಸೀತಾ ಮಾತೆಗೆ ಅರ್ಪಿಸುತ್ತಾನೆ ಮತ್ತು ತನ್ನ ಭಕ್ತಿಯನ್ನು ಸಮರ್ಪಿಸುತ್ತಾನೆ. ಈ ರೀತಿಯಾಗಿ ಸೀತಾಮಾತೆಯ ಮುತ್ತಿನ ಮೂಗುತಿಯನ್ನು ಎತ್ತಿಕೊಟ್ಟಿದ್ದಕ್ಕಾಗಿ ಸೀತಾಮಾತೆಯು ಆಂಜನೇಯನನ್ನು 'ಮುತ್ತು ಎತ್ತಿಕೊಟ್ಟರಾಯ' ಎಂದು ಸಂಬೋಧಿಸುತ್ತಾಳೆ. ಸೀತಾದೇವಿಯು ಸಂಬೋಧಿಸಿದ ಈ ಹೆಸರು ಕಾಲಾನುಕ್ರಮದಲ್ಲಿ 'ಮುತ್ತೆತ್ತರಾಯ' ಎಂದು ಪ್ರಚಾರವನ್ನು ಪಡೆಯಿತು. ಈ ಸ್ಥಳದಲ್ಲಿ ಮುತ್ತೆತ್ತರಾಯನ ದೇವಸ್ಥಾನವನ್ನು ಕಟ್ಟಿ ಮೇದ ಜನಾಂಗದವರು ಮತ್ತು ಇತರೆ ಜನಾಂಗದವರು ಆರಾಧಿಸಿಕೊಂಡು ಬಂದಿದ್ದಾರೆ. ದಟ್ಟವಾದ ಕಾಡಿನಲ್ಲಿ ಈ ದೇವಸ್ಥಾನವು ಇದ್ದುದರಿಂದ ಕಾಡಿನಲ್ಲೇ ವಾಸಮಾಡುವ ಮೇದ ಜನಾಂಗದವರಿಗೆ ಸಹಜವಾಗಿ ಪೂಜಿಸಲ್ಪಡುವ ದೇವರಾಗಿದ್ದಾನೆ.

ನಂಜನಗೂಡು ತಾಲೂಕು ಹುಣಸನಾಳು ಪ್ರದೇಶದಲ್ಲಿರುವ ಸಿದ್ದಪ್ಪಾಜಿ ದೇವರಿಗೆ ಮೇದ ಸಮಾಜದವರು ನಡೆದುಕೊಳ್ಳುತ್ತಾರೆ. ಈ ದೇವರ ಜಾತ್ರೆಗೆ ಮೇದರು ಸೇರಿದಂತೆ ಇತರೆ ಜನಾಂಗದವರು ಹೋಗಿ ಪೂಜೆಯನ್ನು ಸಲ್ಲಿಸುತ್ತಾರೆ. ಹಣ್ಣು-ಕಾಯಿ, ಹೂಗಳನ್ನು ಅರ್ಪಿಸಿ ಪೂಜೆಯನ್ನು ಸಲ್ಲಿಸುತ್ತಾರೆ. ಈ ದೇವರಿಗೆ ಕುರಿಬಲಿಗಳನ್ನು ಕೊಡಲಾಗುತ್ತದೆ. ದೇವಸ್ಥಾನದ ಪಕ್ಕದಲ್ಲಿ ಇರುವ ಬಲಿಕಂಬದ ಹತ್ತಿರ ಕುರಿಯನ್ನು ಕಡಿಯುತ್ತಾರೆ. ಮಾಂಸದ ಊಟವನ್ನು ತಯಾರಿಸಿ ಈ ದೇವರಿಗೆ ನೈವೇದ್ಯ ಅರ್ಪಿಸಿ ಸಾಮೂಹಿಕವಾಗಿ ಊಟಮಾಡುತ್ತಾರೆ. ಉಳಿದ ಮಾಂಸಾಹಾರವನ್ನು ಅಲ್ಲಿಯೇ ಬಿಟ್ಟು ಬರುತ್ತಾರೆ. ದೇವಸ್ಥಾನದಲ್ಲಿ ಕೊಟ್ಟಂತಹ ಹಣ್ಣು-ಹೂಗಳನ್ನು ಮಾತ್ರ ಮನೆಗೆ ತರುತ್ತಾರೆ. ಮೇದ ಬುಡಕಟ್ಟು ಸಮುದಾಯದವರು ಮಲ್ಲಿಕಾರ್ಜನ ದೇವರನ್ನು ಪೂಜಿಸುತ್ತಾರೆ. ಮಲ್ಲಿಕಾರ್ಜನ ದೇವರು ಶಿವನ ಅವತಾರವೆಂದು ನಂಬಿಕೆಯನ್ನು ಹೊಂದಿದ್ದಾರೆ. ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಸ್ನಾನವನ್ನು ಮಾಡಿ ಹೋಗಿ ಪೂಜೆ ಸಲ್ಲಿಸುತ್ತಾರೆ. ಮಲ್ಲಿಕಾರ್ಜುನ ದೇವರಿಗೆ ಬಲಿ ಕೊಡುವುದನ್ನು ಮಾಂಸಾಹಾರವನ್ನು ನೈವೇದ್ಯಕ್ಕೆ ಅರ್ಪಿಸುವುದನ್ನು ನಿಷೇಧಿಸಲಾಗಿದೆ. ಈ ದೇವರಿಗೆ ಸಿಹಿ ಅಡುಗೆ ಪದಾರ್ಥಗಳನ್ನು ಹಾಲು-ಹಣ್ಣುಗಳನ್ನು, ಹೂ ಕಾಯಿಗಳನ್ನು ಅರ್ಪಿಸುತ್ತಾರೆ. ಮೇದರ ಕೇರಿಗಳಲ್ಲಿ ಮಲ್ಲಿಕಾರ್ಜುನ ದೇವರನ್ನು ಪ್ರತಿಷ್ಠಾಪಿಸಿ ಪೂಜೆ ಸಲ್ಲಿಸುತ್ತಾರೆ. ಈ ಸಮುದಾಯದವರು ಶನೇಶ್ವರ ದೇವರನ್ನು ಪೂಜೆ ಮಾಡುತ್ತಾರೆ. ಶನಿವಾರಗಳಂದು ಹಾಗೂ ಶ್ರಾವಣ ಶನಿವಾರಗಳಂದು ವಿಶೇಷವಾದ ಪೂಜೆಯನ್ನು ಸಲ್ಲಿಸುತ್ತಾರೆ. ಶನಿಮಹಾತ್ಮೆ ಕಥೆಯನ್ನು ತಮ್ಮ ಮನೆಗಳಲ್ಲಿ ಓದಿಸುತ್ತಾರೆ.

**ಮೇದರ ಸಾಂಸ್ಕೃತಿಕ ವೀರರು**

ಮೇದ ಬುಡಕಟ್ಟು ಸಮುದಾಯದಲ್ಲಿ ಹನ್ನೆರಡನೇ ಶತಮಾನದ ವಚನಕಾರನಾದ ಮೇದರ ಕೇತಯ್ಯನಿಗೆ ವಿಶೇಷವಾದ ಪ್ರಾಧಾನ್ಯತೆಯನ್ನು ನೀಡುತ್ತಾರೆ. ಮೇದರ ಕೇತಯ್ಯ ಅವನ ಮಗನಾದ ಮೇದರಲಿಂಗಯ್ಯ ಮತ್ತು ಮೇದರ ಕೇತಯ್ಯನ ಹೆಂಡತಿಯಾದ ಶಾಂತಮ್ಮ ಇವರುಗಳು ಶಿವನ ಭಕ್ತರಾಗಿದ್ದು ತಮ್ಮ ಜೀವನದಲ್ಲಿ ಹಲವಾರು ಪವಾಡಗಳನ್ನು ಮಾಡಿದರೆಂದು ಮೇದ ಜನಾಂಗದವರು ನಂಬುತ್ತಾರೆ. ಹಲವಾರು ಜನರ ರೋಗ-ರುಜಿನಗಳನ್ನು, ಸಂಕಷ್ಟಗಳನ್ನು ಇವರು ನಿವಾರಿಸಿದರೆಂದು ಈ ಸಮುದಾಯದವರು ಭಕ್ತಿಯಿಂದ ನೆನೆಯುತ್ತಾರೆ. ಇವರ ಜೊತೆಗೆ ಮೇದಾರ ಚನ್ನಯ್ಯ, ಮೇದರ ತೋಡಯ್ಯ ಇವರುಗಳು ತಮ್ಮ ಕಾಲಾವಧಿಯಲ್ಲಿ ಸಾವಿರಾರು ಜನರಿಗೆ ಅನ್ನದಾನ ಮಾಡಿದ ದೈವಪುರುಷರೆಂದು ನಂಬುತ್ತಾರೆ. ಇವರೆಲ್ಲರೂ ಶ್ರೇಷ್ಠ ವಚನಕಾರಾರದ ಬಸವಣ್ಣನವರ ಸಮಕಾಲೀನರೆಂದು ಹೇಳುತ್ತಾರೆ. ಬಸವಣ್ಣನವರ ಅನುಭವ ಮಂಟಪದಲ್ಲಿ ಇತರೇ ವಚನಕಾರರ ಜೊತೆಗೆ ಮೇದರ ಕೇತಯ್ಯನವರು ವಚನಗಳನ್ನು ರಚಿಸಿದರೆಂದು ಹೇಳುತ್ತಾರೆ.

ಮೇದರ ಕೇತಯ್ಯನವರ ಬಗ್ಗೆ ಶಿವಶರಣರ, ಕಥಾರತ್ನಕೋಶ, ಭೀಮಕವಿಯ ಬಸವಪುರಾಣ, ಶಂಕರಲಿಂಗರಗಳೆ, ಬಸವೇಶ್ವರ ಕಥಾ ಸಾಗರ ಇತ್ಯಾದಿ ಗ್ರಂಥಗಳಲ್ಲಿ ವಿವರಗಳು ಲಭ್ಯವಾಗಿವೆ.

ಮೇದರ ಕೇತಯ್ಯನನ್ನು ಕೇತ, ಕೇತದೇವ, ಕೇತಯ್ಯ, ಕೇತಿತಂದೆ, ಕೇತದೇವಯ್ಯ ಎನ್ನುವ ಪರ್ಯಾಯ ನಾಮಗಳಿಂದ ಕರೆಯುಲಾಗುತ್ತಿತ್ತು. ಮೇದರ ಕೇತಯ್ಯನ ಕಾಲಾವಧಿ ಹನ್ನೆರಡನೇ ಶತಮಾನ ಎಂದು ಹೇಳಲಾಗಿದ್ದರೂ ಈತನ ಕಾಲಾಮಾನ ಸುಮಾರು ಕ್ರಿ.ಶ. ೧೧೬೦ ಎಂದು ತಿಳಿಯಲಾಗಿದೆ. ಮೇದರ ಕೇತಯ್ಯನ ಜನ್ಮಸ್ಥಳವು ಕಾರವಾರ ಜಿಲ್ಲೆಯ ಉಳವಿ ಸಮೀಪದ ಬೇಲೂರು ಎನ್ನುವ ಗ್ರಾಮವೆಂದು ತಿಳಿಯಲಾಗಿದೆ. ಮೇದರ ಕೇತಯ್ಯನು ದೈವಭಕ್ತ, ಕಾಯಕಯೋಗಿ, ಪ್ರಾಮಾಣಿಕ ಆಗಿದ್ದನೆಂದು ಅವನ ಸಮಕಾಲೀನ ವಚನಕಾರರು ತಿಳಿಸುತ್ತಾರೆ. ಇವನು ಮೇದ ಬುಡಕಟ್ಟಿವನಾಗಿ, ಶಿವಭಕ್ತ, ಧೀರ, ವಚನಕಾರ, ಶರಣ, ಆಗಿದ್ದನೆಂದು ತಿಳಿದುಬರುತ್ತದೆ. ಇವನು ಬಸವಣ್ಣನವರ ಅನುಭವ ಮಂಟಪದಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದ ವಚನಕಾರನಾಗಿದ್ದನು. ಮಡಿವಾಳ ಮಾಚಯ್ಯ, ಆಯ್ದಕ್ಕಿ ಮಾರಯ್ಯ, ಮೋಳಿಗಯ ಮಾರಯ್ಯ, ನುಲಿಯ ಚಂದಯ್ಯ, ಕೀಲಾರ ಭೀಮಣ್ಣ, ಢಕ್ಕೆಯ ಬೊಮ್ಮಣ್ಣ, ಶಿವಲೆಂಕಮಂಚಣ್ಣ, ತುರುಗಾಯಿ ರಾಮಣ್ಣ, ಗುಪ್ತಮಂಚಣ್ಣ, ಒಕ್ಕಲಿಗ ಮುದ್ದಣ್ಣ, ಶಿವದಾಸಿಮಯ್ಯ, ಕಲುಕಣ್ಣೀಯ ಕಾಯಮ್ಮ, ಕುರುಬಗೊಲ್ಲಾಳೇಶ, ಕೊಟ್ಟಣದ ಸೋಮವ್ವೆ, ಕಾಮಾಟ ಭೀಮಣ್ಣ, ಕಿನ್ನರ ಬೊಮ್ಮಯ್ಯ, ಶಾರ್ದೂಲ ಸಂಗಯ್ಯ, ಬ್ರಹ್ಮರೂಪಿ ಚೌಡಯ್ಯ, ಉಡುತಡಿಯ ಅಕ್ಕಮಹಾದೇವಿ, ಡೋಹಾರ ಕಕ್ಕಯ್ಯ, ಮಾದಿಗರ ಹರಳಯ್ಯ, ಹೊಲೆಯರ ನಾಗಿದೇವ, ಜ್ಞಾನನಿಧಿ ಚನ್ನಬಸವಣ್ಣ, ಆಯ್ದಕ್ಕಿ ಲಕ್ಕಮ್ಮ, ಅಲ್ಲಮ ಪ್ರಭುದೇವರು, ಶರಣೆ ಮಕ್ತಾಯಕ್ಕ ಇತ್ಯಾದಿ ಶಿವಶರಣರ ಸಮಕಾಲೀನನಾಗಿ ಕೇತಯ್ಯನು ತನ್ನ ಕಾಯಕವನ್ನು ಕೈಲಾಸವೆಂದು ಭಾವಿಸಿ ಬಿದಿರು ಕಾಯಕದಲ್ಲಿ ತನ್ನನ್ನು ನಿರಂತರವಾಗಿ ತೊಡಗಿಸಿಕೊಂಡನು. ಮೇದರ ಕೇತಯ್ಯನು ಹಲವಾರು ವಚನಗಳನ್ನು ರಚಿಸಿದ್ದಾನೆ. ಇವನ ವಚನದ ಅಂಕಿತ ನಾಮ ಗೌರವೇಶ್ವರ. ಗೌವರೇ ಎಂದರೆ ಬುಟ್ಟಿ ಹೆಣೆಯುವವನು ಎನ್ನುವ ಅರ್ಥವನ್ನು ಸೂಚಿಸುತ್ತದೆ. ಬಿದಿರು ಕಾಯಕದೊಂದಿಗೆ ಆಧ್ಯಾತ್ಮಿಕವಾಗಿ ಉನ್ನತವಾದ ಸಾಧನೆಯನ್ನು ಮಾಡಿದನು. ಎಂದು ಸಮಕಾಲೀನ ವಚನಕಾರರು ತಿಳಿಸುತ್ತಾರೆ. ತನ್ನ ಜೀವನದಲ್ಲಿ ಹಲವಾರು ಪವಾಡಗಳನ್ನು ಮಾಡಿದವನೆಂದು ಈ ಸಮುದಾಯದವರು ನಂಬುತ್ತಾರೆ. ಇವನ ಪವಾಡಗಳ ಬಗ್ಗೆ ಹಲವಾರು ಕಥೆಗಳಿವೆ. ಈ ಕಥೆಗಳು ತಲೆಮಾರಿನಿಂದ ತಲೆಮಾರಿನವರೆಗೂ ಹರಿದುಕೊಂಡು ಬಂದಿವೆ. ಮೇದ ಬುಡಕಟ್ಟು ಸಮುದಾಯದವರು ಮೇದರ ಕೇತಯ್ಯನನ್ನು ದೇವರೆಂದೇ ಪೂಜಿಸುತ್ತಾರೆ.

ಹನ್ನೆರಡನೇ ಶತಮಾನದ ಅನುಭವ ಮಂಟಪದಲ್ಲಿ ಬಸವಣ್ಣ ಮತ್ತು ಇತರೇ ಶಿವಶರಣರ ಜೊತೆಗೆ ಮೇದಾರ ಕೇತಯ್ಯನು ಶ್ರೇಷ್ಠ ವಚನಕಾರನಾಗಿದ್ದನು. ಪ್ರತಿನಿತ್ಯ ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಚರ್ಚೆಯಲ್ಲಿ ತಪ್ಪದೇ ಭಾಗವಹಿಸುತ್ತಿದ್ದನು. ಇವನ ಜೊತೆಗೆ ಇವನ ಹೆಂಡತಿಯಾದ ಶಾಂತಮ್ಮ ಮತ್ತು ಪುತ್ರನಾದ ಲಿಂಗಯ್ಯನು ಮೇದಾರ ಕೇತಯ್ಯನಿಗೆ ಸಹಕಾರ ನೀಡುತ್ತಿದ್ದರು. ಪ್ರತಿನಿತ್ಯ ಬಿದಿರು ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಪ್ರತಿದಿನವೂ ಕಾಡಿಗೆ ಹೋಗಿ ಅಲ್ಲಿಂದ ಬಿದಿರನ್ನು ತಂದು ಬಿದಿರು ಉತ್ಪನ್ನಗಳನ್ನು ಮಾಡಿ ಪ್ರಾಮಾಣಿಕವಾಗಿ ಜೀವನ

ನಡೆಸುತ್ತಿದ್ದರು. ಮೇದರ ಕೇತಯ್ಯನು ಒಂದು ನಿಗದಿತ ಸ್ಥಳದಲ್ಲಿನ ಬಿದಿರು ಮತ್ತು ಆ ಬಿದಿರಿನ ಒಂದು ತುದಿಗೆ ಗಂಟೆಯನ್ನು ಕಟ್ಟಿದ್ದನು. ಈ ಗಂಟೆಯನ್ನು ಪಕ್ಷಿಗಳು ಅಲುಗಾಡಿಸುವುದರ ಮೂಲಕ ಗಂಟೆಯ ಶಬ್ಧ ಉಂಟಾಗುತ್ತಿತ್ತು. ಪ್ರತಿದಿನ ಕಾಯಕಕ್ಕೆ ಹೋಗುವಂತಹ ಸಂದರ್ಭದಲ್ಲಿ ಮಂತ್ರಿಯಾದ ಮಂಚಣ್ಣನು ಮೇದರ ಕೇತಯ್ಯನ ಭಕ್ತಿಯನ್ನು ಟೀಕೆ ಮಾಡುತ್ತಾನೆ. ನಿನ್ನ ಗೌರವೇಶ್ವರನಾದ ಬಿದಿರಿಗೆ ಪೂಜೆ ಸಲ್ಲಿಸುವುದು ಮೂಢನಂಬಿಕೆ ಎಂದು ಹೇಳುತ್ತಾನೆ. ಪಕ್ಷಿಗಳು ಅಲ್ಲಿ ಬಂದು ಕುಳಿತಾಗ ಗಂಟೆಯ ಶಬ್ಧವಾಗುತ್ತದೆ. ಅದರಿಂದ ಭಕ್ತಿಯ ಮಾತು ಸುಳ್ಳು ಎನ್ನುತ್ತಾನೆ.

ರಾಜನಾದ ಬಿಜ್ಜಳನ ಮಗನಾದ ಸಿಂಗಣ್ಣ ಮತ್ತು ಮಂತ್ರಿಯಾದ ಮಂಚಣ್ಣನ ಮಗ ಮಹಾವೀರನು ಬಿಲ್ಲು ಅಭ್ಯಾಸದಲ್ಲಿ ತೊಡಗಿದ್ದಾಗ ಮಂತ್ರಿ ಮಂಚಣ್ಣನು ಗಂಟೆ ಬಾರಿಸುತ್ತಿರುವಾಗ ಪಕ್ಷಿಗೆ ಬಾಣವನ್ನು ಹೊಡೆಯುತ್ತಾನೆ. ಇದೇ ಸಂದರ್ಭದಲ್ಲಿ ಮಂತ್ರಿ ಮಂಚಣ್ಣನ ಮಗನಾದ ಮಹಾವೀರನ ತಲೆಯ ಮೇಲೆ ಇರುವ ಹಣ್ಣಿಗೆ ಗುರಿಯನ್ನು ಇಟ್ಟ ಬಾಣವು ಅವನ ತಲೆಯನ್ನು ಕತ್ತರಿಸುತ್ತದೆ. ಮಂತ್ರಿ ಮಂಚಣ್ಣನ ಮಗನ ತಲೆಯು ಉರುಳುತ್ತದೆ. ಇದೇ ಸಂದರ್ಭದಲ್ಲಿ ಪಕ್ಷಿಯು ಕೂಡ ನೆಲಕ್ಕೆ ಉರುಳುತ್ತದೆ. ಈ ಸಂದರ್ಭವನ್ನು ಶಿವ ಶರಣ ಮೇದಾರ ಕೇತಯ್ಯ ತನ್ನ ದಿವ್ಯ ದೃಷ್ಟಿಯಿಂದ ತಿಳಿಯುತ್ತಾನೆ. ಮಂತ್ರಿ ಮಂಚಣ್ಣನಿಗೆ ಮೇದಾರ ಕೇತಯ್ಯನು 'ಆಪತ್ತು ಒದಗಿ ಬಂದಿದೆ' ದಯವಿಟ್ಟು ತುರ್ತಾಗಿ ಹೋಗಬೇಕೆಂದು ವಿನಂತಿಸಿಕೊಳ್ಳುತ್ತಾನೆ. ಆದರೆ ಮಂತ್ರಿ ಮಂಚಣ್ಣನು ಉದಾಸೀನ ಮಾಡಿ ಮೇದಾರ ಕೇತಯ್ಯನನ್ನು ನೋಡಿ ನಗುತ್ತಾನೆ. ಈ ಸಂದರ್ಭದಲ್ಲಿ ಮೇದರ ಕೇತಯ್ಯನು ಈ ವಚನವನ್ನು ಹೇಳುತ್ತಾನೆ.

'ಮೂಲ ಹುಸಿಲಾಭದಿಟವೇ
ನಿರೀಕ್ಷಣೆಯು ಇಲ್ಲದೆ ಪರೀಕ್ಷಣೆಯು
ಉಂಟೆ ಈ ಅವಸರದಂಗವ
ಗವರೇಶ್ವರ ನೀನೆ ಬಲ್ಲೆ'

ಎನ್ನುತ್ತಾ ಸತ್ತುಹೋದ ಪಕ್ಷಿಗೆ ವಿಭೂತಿಯನ್ನು ಹಚ್ಚಿದಾಗ, ಆ ಪಕ್ಷಿಯು ಕಣ್ಣನ್ನು ತೆರೆದು ಹಾರಿ ಹೋಗುತ್ತದೆ. ಮಂತ್ರಿ ಮಂಚಣ್ಣನಿಗೆ ಆಶ್ಚರ್ಯವಾಗುತ್ತದೆ.

ಮಂತ್ರಿ ಮಂಚಣ್ಣನು ತನ್ನ ಮಗನ ಸಾವಿನ ಸುದ್ದಿಯನ್ನು ತಿಳಿದು ದಿಗ್ಭ್ರಾಂತನಾಗಿ ಅಳುತ್ತಾನೆ. ಜೊತೆಗೆ ಇವನ ಪತ್ನಿಯಾದ ಪ್ರಭಾದೇವಿಯು ಕೂಡ ದುಃಖಿತಳಾಗುತ್ತಾಳೆ. ಶಿವಶರಣರನ್ನು ಅವಮಾನಿಸಿದ ಮಂತ್ರಿ ಮಂಚಣ್ಣನ ಅವಿವೇಕವನ್ನು ಖಂಡಿಸುತ್ತಾಳೆ. ಇದಕ್ಕೆ ಪ್ರತಿಯಾಗಿ ಮಂತ್ರಿ ಮಂಚಣ್ಣನು ತನ್ನ ಹೆಂಡತಿಗೆ 'ನಿನ್ನ ಸತ್ಯನಿಷ್ಠರಾದ ಶಿವಶರಣರು ನಿನ್ನ ಮಗನನ್ನು ಬದುಕಿಸುತ್ತಾರೆ' ಎಂದು ವ್ಯಂಗ್ಯವಾಗಿ ಮಾತನಾಡುತ್ತಾನೆ. ತದನಂತರ ಶವವನ್ನು ತೆಗೆದುಕೊಂಡು ಪ್ರಭಾದೇವಿಯು ಅನುಭವ ಮಂಟಪಕ್ಕೆ ಬರುತ್ತಾಳೆ. ತನ್ನ ಮಗನ ಪ್ರಾಣವನ್ನು

ಬೇಡುತ್ತಾಳೆ. ಆದರೆ ಬಸವಾದಿ ಶಿವಶರಣರು ಮೇದರ ಕೇತಯ್ಯನನ್ನು ಈ ವಿಚಾರವಾಗಿ ಬೇಡಿಕೊಳ್ಳಲು ಹೇಳುತ್ತಾರೆ. ಆಗ ಅವಳು ಮೇದರ ಕೇತಯ್ಯನ ಹತ್ತಿರ ಬರುತ್ತಾಳೆ. ಅವಳ ಜೊತೆಗೆ ಬಸವಾದಿ ಶಿವಶರಣರು, ಮಂತ್ರಿ ಮಂಚಣ್ಣನು ಬರುತ್ತಾರೆ. ಮೇದರ ಕೇತಯ್ಯನನ್ನು ಕರೆದು ಮಂತ್ರಿ ಮಂಚಣ್ಣ ಮಗನ ಪ್ರಾಣವನ್ನು ಉಳಿಸಲು ನಿನ್ನ ಮಗನಾದ ಲಿಂಗಣ್ಣನ ಪ್ರಾಣ ನೀಡಬೇಕಾಗುತ್ತದೆ ಎಂದು ಹೇಳುತ್ತಾನೆ. ಮೇದರ ಕೇತಯ್ಯನ ಮಗನಾದ ಲಿಂಗಣ್ಣನು ತನ್ನ ಪ್ರಾಣವನ್ನು ಕೊಡಲು ಸಿದ್ಧನಾಗುತ್ತಾನೆ. ಆದರೆ ಪ್ರಭಾವತಿದೇವಿಯು ಲಿಂಗಣ್ಣನು ಬಲಿಯಾಗುವುದನ್ನು ಒಪ್ಪುವುದಿಲ್ಲ ನಂತರ ಮೇದರ ಕೇತಯ್ಯನು ಶಿವಶರಣರ ಸಂಪರ್ಕವು ನಿನ್ನ ಮಗನಿಗೆ ದೊರೆಯಬೇಕೆಂದು ತಿಳಿಸುತ್ತಾನೆ. ಗೌರವೇಶ್ವರಕ್ಕೆ ತನ್ನ ಪ್ರಾಣವನ್ನು ಲಿಂಗಣ್ಣನು ಅರ್ಪಿಸುತ್ತಾನೆ. ಮಂತ್ರಿ ಮಂಚಣ್ಣನ ಮಗನಾದ ಮಹಾವೀರನು ಜೀವ ಬಂದು ಎದ್ದು ನಿಲ್ಲುತ್ತಾನೆ. ಲಿಂಗಣ್ಣನು ಪ್ರಾಣವನ್ನು ಬಿಡುವ ಸಂದರ್ಭದಲ್ಲೇ ಜಂಗಮನಾದ ಬಸವಣ್ಣನು ತನ್ನ ಪ್ರಾಣವನ್ನು ಬಿಡುತ್ತಾನೆ. ಪ್ರಭಾದೇವಿಯು ನಾನು ಶರಣ ದ್ರೋಹವನ್ನು ಮಾಡಿದೆ ಎಂದು ಅಳುತ್ತಾಳೆ. ಉಳಿದ ಶಿವಶರಣರು ಲಿಂಗಣ್ಣನ ಸಾವಿನಿಂದ ಬಸವಣ್ಣನವರ ಪ್ರಾಣ ಹೋಗಿದ್ದು ತುಂಬಾ ನೋವನ್ನುಂಟು ಮಾಡಿತು. ಈ ಸಂದರ್ಭದಲ್ಲಿ ಮಡಿವಾಳ ಮಾಚಯ್ಯನು ಶಿವನನ್ನು ಕುರಿತುಕೊಂಡು 'ಈಗಲೇ ಲಿಂಗಣ್ಣ ಮತ್ತು ಬಸವಣ್ಣನವರ ಪ್ರಾಣವನ್ನು ಕೊಟ್ಟರೆ ಸರಿ, ಇಲ್ಲವೆಂದರೆ ನನ್ನ ತಲೆಯನ್ನು ಕಡಿದು ಕೊಳ್ಳುತ್ತೇನೆ' ಎಂದು ಖಡ್ಗವನ್ನೆತ್ತಿಕೊಂಡಾಗ ಲಿಂಗಣ್ಣ ಮತ್ತು ಬಸವಣ್ಣನವರ ಜೀವ ಬಂದಿತು. ಈ ಸಂದರ್ಭದಲ್ಲಿ ಎಲ್ಲ ಶಿವಶರಣರು ಜಯಘೋಷವನ್ನು ಮಾಡಿದರು. ಇವನ್ನೆಲ್ಲ ವೀಕ್ಷಿಸುತ್ತಿದ್ದ ಮಂತ್ರಿಮಂಚಣ್ಣನು ಆ ಸ್ಥಳವನ್ನು ಬಿಟ್ಟು ಹೊರಟು ಹೋದನು. ಶಿವಶರಣರ ಪವಾಡಕ್ಕೆ ಹೊಟ್ಟೆಕಿಚ್ಚುಪಟ್ಟುಕೊಂಡನು. ಪ್ರಭಾವತಿದೇವಿ, ಲಿಂಗಣ್ಣ ಇವರು ಶಿವದೀಕ್ಷೆಯನ್ನು ಪಡೆದುಕೊಂಡರು. ಈ ವಿಚಾರವನ್ನು ತಿಳಿದ ಮಂತ್ರಿ ಮಂಚಣ್ಣನು ತನ್ನ ಹೆಂಡತಿ ಪ್ರಭಾದೇವಿಯನ್ನು ಹಂಗಿಸಿ ಅವಳ ತಲೆಯನ್ನು ಕಡಿಯಲು ಹೊರಟ ಸಂದರ್ಭಕ್ಕೆ ರಾಜನಾದ ಬಿಜ್ಜಳನು ಅಲ್ಲಿಗೆ ಬಂದನು. ನಿನ್ನ ಹೆಂಡತಿಯನ್ನು ಕೊಂದರೆ ಸ್ತ್ರೀವಧೆ ಮಾಡಿದ್ದಕ್ಕೆ ಪ್ರತಿಯಾಗಿ ನಿನಗೆ ಶಿಕ್ಷೆಯಾಗುತ್ತದೆ ಎಂದು ಎಚ್ಚರಿಕೆಯನ್ನು ನೀಡಿದನು. ಮಂತ್ರಿ ಮಂಚಣ್ಣನು ಶಿವಶರಣರಿಗೆ ಅವಮಾನ ಮಾಡಲು ಉಪಾಯಗಳನ್ನು ಮಾಡಿದನು. ಒಂದು ಸಂದರ್ಭದಲ್ಲಿ ಬಂಧನದಲ್ಲಿದ್ದ ಕಳ್ಳನ ತಲೆಯನ್ನು ಬೋಳಿಸಿ ಖಾವಿ ಬಟ್ಟೆಯನ್ನು ಹಾಕಿ ಶಿವಶರಣನನ್ನಾಗಿ ರೂಪಿಸಿ 'ಉರಿಲಿಂಗ' ಎಂದು ಹೆಸರನ್ನು ಇಟ್ಟು ಮೇದರ ಕೇತಯ್ಯನವರ ಮನೆಯ ಪ್ರಸಾದಕ್ಕೆ(ಊಟಕ್ಕೆ) ಕಳುಹಿಸಿಕೊಟ್ಟನು.

ಮೇದರ ಕೇತಯ್ಯನವರ ಮನೆಯಲ್ಲಿ ಉರಿಲಿಂಗನು ತನ್ನ ಮಾತನ್ನು ನಡೆಸಿಕೊಡುವುದಾದರೆ ನಿನ್ನ ಮನೆಯಲ್ಲಿ ಊಟವನ್ನು ಮಾಡುತ್ತೇನೆ. ಇಲ್ಲದಿದ್ದರೆ ಊಟವನ್ನು ಮಾಡುವುದಿಲ್ಲ ಎಂದು ಹೇಳುತ್ತಾನೆ. ಈ ಸಂದರ್ಭದಲ್ಲಿ ಮೇದರಕೇತಯ್ಯನು ಅವನ ಮಾತಿಗೆ ಒಪ್ಪುತ್ತಾನೆ. ಈ ಸಂದರ್ಭದಲ್ಲಿ ಉರಿಲಿಂಗನು 'ನನ್ನ ಪಾಪವನ್ನು ಸ್ವೀಕರಿಸಿ ಪುಣ್ಯವನ್ನು ನನಗೆ ಧಾರೆ

ಎರೆಯಬೇಕೆಂದು ಕೇಳಿಕೊಳ್ಳುತ್ತಾನೆ. ಮೇದರ ಕೇತಯ್ಯನು ತನ್ನ ಪುಣ್ಯವನ್ನು ಧಾರೆಯನ್ನು ಎರೆದು ಶಿವಪೂಜೆಯನ್ನು ಮಾಡಲು ಉರಿಲಿಂಗನಿಗೆ ಹೇಳುತ್ತಾನೆ. ಕಳ್ಳನಾದ ಉರಿಲಿಂಗನು ತನ್ನ ಕುತ್ತಿಗೆಯಲ್ಲಿ ಕಟ್ಟಿಕೊಂಡಿರುವಂತಹ ಕಲ್ಲನ್ನು ಮೇದರ ಕೇತಯ್ಯನು ನೋಡಿದರೆ ಸುಮ್ಮನಿರುವುದಿಲ್ಲ ಎಂದು ಆ ಕಲ್ಲನ್ನು ಬಿಚ್ಚಿ ನೋಡಿದಾಗ ಆ ಕಲ್ಲು ಲಿಂಗವಾಗಿರುತ್ತದೆ. ಈ ಪವಾಡವನ್ನು ನೋಡಿದ ಕಳ್ಳ ಉರಿಲಿಂಗನು ತನ್ನ ಹಿನ್ನೆಲೆಯನ್ನು ಹೇಳಿದಾಗ ಮೇದರ ಕೇತಯ್ಯನು ಅವನಿಗೆ ಶಿವಶರಣ ಉರಿಲಿಂಗ ಎಂದು ಕರೆಯುತ್ತಾನೆ. ಮಂತ್ರಿ ಮಂಚಣ್ಣನು ಇದನ್ನೆಲ್ಲ ತಿಳಿದು ಕೆಂಡಮಂಡಲನಾಗುತ್ತಾನೆ. ತನ್ನ ಹೆಂಡತಿ ಪ್ರಭಾದೇವಿಯು ಶರಣೆಯಾಗಿ ಪ್ರತಿದಿನವು ಅನುಭವ ಮಂಟಪಕ್ಕೆ ಹೋಗುವುದನ್ನು ಮಂತ್ರಿ ಮಂಚಣ್ಣನು ಸಹಿಸಲಿಲ್ಲ. ಒಮ್ಮೆ ಬಸವಣ್ಣನ ವೇಷದಲ್ಲಿ ಬಂದ ಶಿವನು ದಿನನಿತ್ಯದಲ್ಲಿ ದಾಸೋಹಕ್ಕಾಗಿ ಮುತ್ತು-ರತ್ನಗಳನ್ನು ಕೊಡುತ್ತಾನೆ. ಆದರೆ ಮೇದರ ಕೇತಯ್ಯನ ಹೆಂಡತಿಯು ಅವುಗಳನ್ನು ಸ್ವೀಕರಿಸುವುದಿಲ್ಲ. ಬಸವಣ್ಣನ ರೂಪದಲ್ಲಿ ಬಂದಿರುವ ಶಿವನು ಆ ಹಣವನ್ನೆಲ್ಲ ಕೇತಯ್ಯನವರ ಮನೆಯಲ್ಲೇ ಸುರಿದು ಹೊರಟು ಹೋಗುತ್ತಾನೆ. ಮೇದರ ಕೇತಯ್ಯನವರು ಮನೆಗೆ ಬಂದಾಗ ಈ ವಿಚಾರವನ್ನೆಲ್ಲ ತಿಳಿದು ಬಸವಣ್ಣನವರ ಮನೆಗೆ ಹೋಗಿ ಆ ಮುತ್ತುರತ್ನಗಳನ್ನೆಲ್ಲ ಚೆಲ್ಲುತ್ತಾನೆ. ಈ ಸಂದರ್ಭದಲ್ಲಿ ಬಸವಣ್ಣನವರು ನಾನು ಹಣವನ್ನು ತಂದುಕೊಟ್ಟಿಲ್ಲ, ನನ್ನ ರೂಪದಲ್ಲಿ ಸಾಕ್ಷಾತ್ ಶಿವನು ಬಂದು ಈ ಕೆಲಸವನ್ನು ಮಾಡಿದ್ದಾನೆಂದು ಹೇಳುತ್ತಾನೆ. ಮೇದರ ಕೇತಯ್ಯನವರು ಬಸವಣ್ಣನವರ ಕ್ಷಮೆಯನ್ನು ಕೇಳಿ ಬಸವಾದಿ ಶಿವಶರಣರಿಗೆ ಅನ್ನದಾಸೋಹವನ್ನು ಮಾಡಿ ಈ ಪಾಪವನ್ನು ಕಳೆದುಕೊಳ್ಳುತ್ತಾರೆ.

ದೇವರಾದ ಶಿವನು ಮೇದಾರ ಕೇತಯ್ಯನವರನ್ನು ಪರೀಕ್ಷೆ ಮಾಡಲು ಒಂದು ಸಂದರ್ಭವನ್ನು ಸೃಷ್ಠಿಸುತ್ತಾನೆ. ಒಂದು ದಿನ ಮೇದಾರ ಕೇತಯ್ಯನವರು ಬಿದಿರುಗಳನ್ನು ಕಡಿಯುತ್ತಿರುವ ಸಂದರ್ಭದಲ್ಲಿ ಬಿದಿರಿನ ಗಳಗಳಿಂದ ಮುತ್ತು-ರತ್ನಗಳು ಸುರಿಯುತ್ತವೆ. ಆಗ ಮೇದಾರ ಕೇತಯ್ಯನವರು ಬಿದಿರಿಗೆ ಹುಳ ಹಿಡಿದಿರಬೇಕೆಂದುಕೊಂಡು ಮತ್ತೊಂದು ಕಡೆ ಬಿದಿರನ್ನು ಕಡಿಯಲಿಕ್ಕೆ ಹೋದಾಗ ಅಲ್ಲಿಯೂ ಮುತ್ತು-ರತ್ನಗಳು ಸುರಿದವು. ನಂತರ ಮೇದರಕೇತಯ್ಯನವರು ಬಿದಿರನ್ನು ಹತ್ತಿ ಬಿದಿರಿನ ತುದಿಯನ್ನು ಕಡಿಯಲು ಮುಂದಾದಾಗ ಭಯಂಕರವಾದ ಗಾಳಿಯು ಬೀಸಿ ಬಿದಿರು ಮುರಿದು ಮೇದರ ಕೇತಯ್ಯನವರು ಕೆಳಕ್ಕೆ ಬಿದ್ದಾಗ ಚೂಪಾದ ಬಿದಿರು ಬೆನ್ನಿಗೆ ಹೊಕ್ಕಿ ಹೊರಬಂದಿತು. ಆದರೆ ಮೇದಾರ ಕೇತಯ್ಯನವರು ಶಿವನನ್ನು ಪ್ರಾರ್ಥಿಸುತ್ತ ಇಂದು ಅನ್ನದಾಸೋಹಕ್ಕೆ ಅವಕಾಶ ಮಾಡಿಕೊಡು ಎಂದು ಕೇಳಿಕೊಳ್ಳುತ್ತಾರೆ. ಜಂಗಮರಿಗೆ ದಾಸೋಹವನ್ನು ಮಾಡುವುದಕ್ಕಿಂತ ಮುಂಚೆ ಪ್ರಾಣವನ್ನು ನೀನೇನಾದರು ತೆಗೆದುಕೊಂಡು ಹೋದರೆ 'ಜಂಗಮನ ಆಣೆ' ಎನ್ನುತ್ತಾ ಬೆನ್ನಿಗೆ ಹೊಕ್ಕಿದ್ದ ಬಿದಿರನ್ನು ಕತ್ತರಿಸಿ ಬಿಸಾಕಿ ಮನೆಗೆ ಬಂದು ಅನ್ನದಾಸೋಹವನ್ನು ಮಾಡಿದನು. ನಂತರ ತಾನು ಲಿಂಗೈಕ್ಯನಾಗುತ್ತಿದ್ದೇನೆ ಎನ್ನುವ ವಿಷಯವನ್ನು ಎಲ್ಲರಿಗೂ ತಿಳಿಸಿ ಪದ್ಮಾಸನದಲ್ಲಿ ಕುಳಿತುಕೊಂಡು ಕೈಯಲ್ಲಿ ಲಿಂಗವನ್ನು ಹಿಡಿದುಕೊಂಡು ಧ್ಯಾನಮಗ್ನನಾಗುತ್ತಿದ್ದಂತೆಯೇ

ಅವನ ಪ್ರಾಣ ಹೊರಟು ಹೋಯಿತು. ಶಿವಶರಣರಾಧಿಯಾಗಿ ಎಲ್ಲಾ ಶರಣರು ಕೇತಯ್ಯನವರ ಮನೆಗೆ ಬರುತ್ತಾರೆ. ಶಿವಶರಣ ಮಾಚಯ್ಯನು ಮೇದಾರ ಕೇತಯ್ಯನವರು ಲಿಂಗೈಕ್ಯರಾಗಿದ್ದರೂ ಬಸವಣ್ಣನವರು ಬದುಕಿದ್ದರೆ ಅಲ್ಲಿಗೆ ನಾನು ಬರುವುದಿಲ್ಲ ಎಂದು ಹೇಳಿದನು. ಈ ವಿಚಾರವನ್ನು ತಿಳಿದ ಬಸವಣ್ಣನವರ ಪ್ರಾಣ ಹೊರಟು ಹೋಯಿತು. ಮಾಚಯ್ಯನವರು ಈ ವಿಚಾರವನ್ನು ತಿಳಿದುಕೊಂಡು ತುಂಬಾ ಸಿಟ್ಟಾದನು. ಇವರಿಬ್ಬರ ಪ್ರಾಣಗಳು ಬರದಿದ್ದರೆ ಎಲ್ಲಾ ಶಿವಶರಣರು ಶಿವನನ್ನು ದೂರ ಮಾಡಬೇಕೆಂದು ವೀರಘೋಷಣೆ ಮಾಡುತ್ತಿರುವ ಸಂದರ್ಭದಲ್ಲೇ ಅವರ ಪ್ರಾಣಗಳು ಬಂದವು. ಮೇದಾರ ಕೇತಯ್ಯ, ಬಸವಣ್ಣ ಇಬ್ಬರು ಪ್ರಾಣವನ್ನು ಪಡೆದರು. ಮೇದಾರ ಕೇತಯ್ಯನವರ ಕೀರ್ತಿ ಮತ್ತು ಮಹಿಮೆ ಎಲ್ಲ ಕಡೆ ತಿಳಿಯಿತು. ಹೀಗೆ ಮೇದಾರ ಕೇತಯ್ಯನು ಶಿವನ ಭಕ್ತನಾಗಿ ತನ್ನ ಜೀವಿತದುದ್ದಕ್ಕೂ ಕಾಯಕ ಮತ್ತು ದಾಸೋಹ ಇವುಗಳನ್ನು ಮಾಡಿ ಮಹಾ ಶಿವಶರಣ ಎಂದು ಪ್ರಸಿದ್ಧನಾದನು.

ಮೇದ ಬುಡಕಟ್ಟಿನ ಇತರೆ ವೀರ ನಾಯಕರೆಂದರೆ ಮೇದಾರ ಚನ್ನಯ್ಯ ಮತ್ತು ಇವನ ಮೊಮ್ಮಗ ಮೇದಾರ ತೋಡಯ್ಯ. ಮೇದಾರ ಚನ್ನಯ್ಯನು ಒಂದು ಕುಡಿಕೆ ಅನ್ನದಿಂದ ಸಾವಿರಾರು ಜನರಿಗೆ ಅನ್ನದಾಸೋಹ ಮಾಡಿದ್ದನು. ಇವನ ಮೊಮ್ಮಗನಾದ ಮೇದಾರ ತೋಡಯ್ಯನು ಬುಟ್ಟಿ ಹೆಣೆಯುವ ಕಾಯಕವನ್ನು ಮಾಡಿ ಅನ್ನದಾಸೋಹ ಮಾಡುತ್ತಿದ್ದನು ಎನ್ನುವ ಪ್ರತೀತಿ ಇದೆ. ಒಂದು ಸಲ ಕುಷ್ಠರೋಗವನ್ನು ಹೊಂದಿದ ಬಡ ಬ್ರಾಹ್ಮಣನು ಕಳೆದುಕೊಂಡು ಹೋದ ಹಸಿವಿನ ಕರುವನ್ನು ಹುಡುಕಿಕೊಂಡು ಬಂದು ತೋಡಯ್ಯನವರು ಸ್ನಾನ ಮಾಡಿದ ನೀರು ತುಂಬಿರುವ ಗುಂಡಿಯಲ್ಲಿ ಬಿದ್ದನು ಆಗ ಆ ಬ್ರಾಹ್ಮಣನ ಕುಷ್ಠರೋಗವು ವಾಸಿಯಾಯಿತು. ಇದನ್ನು ತಿಳಿದ ಕುಷ್ಠರೋಗಿಗಳು ಚರ್ಮರೋಗದವರು ಮೇದಾರ ತೋಡಯ್ಯನು ಸ್ನಾನ ಮಾಡಿದ ನೀರಿನ ಗುಂಡಿಗೆ ಮುಳುಗಿ ತಮ್ಮ-ತಮ್ಮ ರೋಗಗಳುನ್ನು ಕಳೆದುಕೊಂಡರು.

ಮೇದ ಬುಡಕಟ್ಟು ಸಮುದಾಯದ ಒಬ್ಬ ಮೇದನು ಕಾಡಿನಲ್ಲಿ ಬಿದಿರುಗಳನ್ನು ಕಡಿದು ಜೀವನವನ್ನು ಮಾಡುತ್ತಿದ್ದನು. ಒಮ್ಮೆ ಶಿವ ಮತ್ತು ಪಾರ್ವತಿ ಒಟ್ಟಿಗೆ ಈ ಬಡ ಮೇದನ ಮನೆಗೆ ಬಂದು ಅವನ ಹೆಂಡತಿಗೆ ಒಂದು ತಂಬಿಗೆಯಲ್ಲಿ ಹಣವನ್ನು ತಂದು ಕೊಡುತ್ತಾರೆ. ಆದರೆ ಈ ಹಣವನ್ನು ಇವರು ಬಳಸುವುದಿಲ್ಲ. ಬಿದಿರುಗಳನ್ನು ಕಡಿಯುವಾಗ ಶಿವ ಪಾರ್ವತಿ ವಜ್ರಗಳನ್ನು ಸುರಿಯುತ್ತಾರೆ. ಆದರೆ ಆ ವಜ್ರಗಳನ್ನು ಕೂಡ ಈ ಮೇದನು ಮುಟ್ಟುವುದಿಲ್ಲ ಪಾರ್ವತಿಯ ಮಾತನ್ನು ಕೇಳಿ ಶಿವನು ತನಗೆ ಅವಮಾನವಾಯಿತೆಂದು ಕೋಪಗೊಂಡು, 'ಇನ್ನೂ ಮುಂದೆ ಕಡಿಯುವಂತಹ ಬಿದಿರಿನಲ್ಲಿ ಇರುವೆಗಳು ತುಂಬಿಕೊಳ್ಳಲಿ' ಎಂದು ಶಾಪವನ್ನು ಕೊಡುತ್ತಾನೆ. ಆದರೆ ಪಾರ್ವತಿಯು ಪ್ರಾರ್ಥನೆ ಮಾಡಿದಾಗ ಶಿವನು ಆ ಇರುವೆಗಳು ಬಿದಿರುಪ್ಪು ಆಗಲಿ ಎಂದು ಅನುಗ್ರಹಿಸುತ್ತಾನೆ. ನಂತರ ಮೇದರಿಗೆ ಬಿದಿರು ಉಪ್ಪು ಮತ್ತು ಬಿದಿರು ಅಕ್ಕಿ ನಿರಂತರವಾಗಿ ದೊರಕುತ್ತದೆ. ಮೇದಾರ ಕೇತಯ್ಯ, ಮೇದಾರ ಚನ್ನಯ್ಯ, ಮೇದಾರ ತೋಡಯ್ಯ ಇವರುಗಳು

ಮೇದರ ಬುಡಕಟ್ಟಿನ ಸಾಂಸ್ಕೃತಿಕ ವೀರನಾಯಕರಾಗಿದ್ದಾರೆ. ಶಿವಶರಣ ಮೇದಾರ ಕೇತಯ್ಯನವರ ಭಾವಚಿತ್ರವನ್ನು ಚಿತ್ರದುರ್ಗ ಜಿಲ್ಲೆಯ ಮೇದಾರ ಸಮುದಾಯದ ಎಲ್ಲರ ಮನೆಗಳಲ್ಲಿ ಪೂಜಿಸುತ್ತಾರೆ. ಬಿದಿರು, ಬಿದಿರಿನಿಂದ ಮಾಡುವ ಕಾಯಕಗಳು ತಮ್ಮ ಸಾಂಸ್ಕೃತಿಕ ಸಂಪ್ರದಾಯವೆಂಬಂತೆ ಮೇದ ಬುಡಕಟ್ಟಿನವರು ಅನುಸರಿಸಿಕೊಂಡು ಬಂದಿದ್ದಾರೆ. ಚಿತ್ರದುರ್ಗ ನಗರದ ಹೊಳಲ್ಕೆರೆ, ರಸ್ತೆಯಲ್ಲಿರುವ ಮೇದರ ಸಮುದಾಯ ಭವನದ ಆವರಣದಲ್ಲಿ ಮೇದರ ಕೇತಯ್ಯನವರನ್ನು ಪೂಜಿಸುವ ಸಂಪ್ರದಾಯವನ್ನು ಚಿತ್ರದುರ್ಗ ನಗರದ ಮೇದ ಬುಡಕಟ್ಟು ಸಮುದಾಯದವರು ಅನುಸರಿಸಿಕೊಂಡು ಬಂದಿದ್ದಾರೆ. ಚಿತ್ರದುರ್ಗ ನಗರದಲ್ಲಿ ಅಖಿಲ ಭಾರತ ಮೇದರ ಬುಡಕಟ್ಟು ಪಂಗಡದವರಿಗಾಗಿ ಮೇದರ ಗುರುಪೀಠ ಎನ್ನುವ ಮೇದರ ಮಠವನ್ನು ಸ್ಥಾಪನೆ ಮಾಡಲಾಗಿದೆ. ಈ ಮಠವು ಬೆಂಗಳೂರು–ಪುಣೆ ರಾಷ್ಟ್ರೀಯ ಹೆದ್ದಾರಿ–೪ರ ರಸ್ತೆಯಲ್ಲಿರುವ ಸೀಬಾರ ಎನ್ನುವ ಸ್ಥಳದಲ್ಲಿದೆ. ಈ ಮಠಕ್ಕೆ ಶ್ರೀ ಮುರುಘಾರಾಜೇಂದ್ರ ಮಠದಿಂದ ಐದು ಎಕರೆ ಜಮೀನನ್ನು ನೀಡಿ ಮಠವನ್ನು ಕಟ್ಟಿಕೊಳ್ಳಲು ಅವಕಾಶವನ್ನು ನೀಡಲಾಗಿದೆ. ಶ್ರೀ ಮುರುಘಾರಾಜೇಂದ್ರ ಮಠದ ಪೀಠಾಧ್ಯಕ್ಷರಾದ ಶ್ರೀ ಶಿವಮೂರ್ತಿ ಮುರುಘಾಶರಣರು, ಮೇದಾರ ಬುಡಕಟ್ಟು ಸಮುದಾಯದ ಮುಖಂಡರ ಸಮಾನ ಮನಸ್ಥಿತಿಯಲ್ಲಿ ಶ್ರೀ ಬಸವಪ್ರಭು ಕೇತೇಶ್ವರ ಸ್ವಾಮಿಗಳನ್ನು ನೇಮಕ ಮಾಡಲಾಗಿದೆ. ಶ್ರೀ ಬಸವಪ್ರಭುಕೇತೇಶ್ವರ ಸ್ವಾಮಿಗಳು ನಿರಂತರವಾಗಿ ಮೇದ ಬುಡಕಟ್ಟು ಸಮುದಾಯದ ಅಭಿವೃದ್ಧಿಗೆ ಶ್ರಮಿಸಲು ಭಾರತ ದೇಶದಾದ್ಯಂತ ಪ್ರವಾಸ ಕೈಗೊಂಡು ಈ ಸಮುದಾಯದ ಶಿಕ್ಷಣ, ಸಂಘಟನೆ, ಅಭಿವೃದ್ಧಿಗೆ ನಿರಂತರವಾಗಿ ಶ್ರಮಿಸಿದರು. ಇವರು ನಿರಂತರ ಹದಿನೈದು ವರ್ಷಗಳ ಕಾಲ ಈ ಸಮುದಾಯದ ಅಭಿವೃದ್ಧಿಗೆ ಶ್ರಮಿಸಿ ೨೦೧೪ನೇ ಇಸವಿಯಲ್ಲಿ ಲಿಂಗೈಕ್ಯರಾದರು. ಇವರನ್ನು ಮೇದಾರ ಗುರುಪೀಠದ ಪ್ರಾರ್ಥನಾ ಮಂದಿರದಲ್ಲಿ ಇವರ ದೇಹವನ್ನು ಸಮಾಧಿ ಮಾಡಲಾಗಿದೆ. ಈ ಸಮಾಧಿಯು ಮೇದ ಬುಡಕಟ್ಟು ಸಮುದಾಯದ ಗದ್ದುಗೆಯಾಗಿ ಪೂಜಾಕೇಂದ್ರವಾಗಿದೆ. ಈ ಪೂಜಾ ಕೇಂದ್ರಕ್ಕೆ ಭಾರತ ದೇಶದ್ಯಾಂತ ಇರುವ ಮೇದ ಬುಡಕಟ್ಟು ಸಮುದಾಯದವರು ಬಂದು ಪೂಜೆ ಸಲ್ಲಿಸುತ್ತಾರೆ.

**ಮೇದ ಬುಡಕಟ್ಟು ಸಮುದಾಯದ ಹಬ್ಬಗಳು**

ಮೇದ ಬುಡಕಟ್ಟು ಸಮುದಾಯದ ಜನರು ಯುಗಾದಿ, ದೀಪಾವಳಿ, ಶಿವರಾತ್ರಿ, ನವರಾತ್ರಿ, ಗಣಪತಿ ಹಬ್ಬ, ಮಾರನವಮಿ, ಮಾರಿಹಬ್ಬ, ಇತ್ಯಾದಿ ಹಬ್ಬಗಳನ್ನು ಆಚರಿಸುತ್ತಾರೆ. ಮೇದರ ಕುಲಕಸುಬಿಗೆ ಸಂಬಂಧಿಸಿದ ಕತ್ತಿಹಬ್ಬವನ್ನೂ ಆಚರಿಸುತ್ತಾರೆ. ಈ ಕತ್ತಿಹಬ್ಬವನ್ನು ಯಳಬಿಹಬ್ಬ ಎಂದೂ ಹೇಳುತ್ತಾರೆ. ಹಿಂಧೂ ಧರ್ಮದ ಸಂಪ್ರದಾಯದಂತೆ ಬಹುತೇಕ ಎಲ್ಲಾ ಹಬ್ಬಗಳನ್ನು ಇವರು ಆಚರಿಸುತ್ತಾರೆ. ಯುಗಾದಿ ಹಬ್ಬವನ್ನು ತುಂಬಾ ಸಂಭ್ರಮದಿಂದ ಆಚರಿಸುತ್ತಾರೆ. ತಮ್ಮ ಮನೆಗಳನ್ನು ಸ್ವಚ್ಛಗೊಳಿಸಿ, ಸುಣ್ಣ–ಬಣ್ಣಗಳನ್ನು ಬಳಿದು ಮನೆಯನ್ನು ಅಲಂಕರಿಸುತ್ತಾರೆ. ಮಾವಿನ ಸೊಪ್ಪು ಮತ್ತು ಬೇವಿನ ಸೊಪ್ಪುಗಳನ್ನು ತಂದು ಮನೆಯ ಬಾಗಿಲು, ಕಿಟಕಿಗಳನ್ನು ಅಲಂಕರಿಸುತ್ತಾರೆ.

ಮನೆಯ ಎಲ್ಲರೂ ಹರಳೆ ಎಣ್ಣೆಯನ್ನು ಹಚ್ಚಿಕೊಂಡು ಬಿಸಿನೀರಿನ ಸ್ನಾನ ಮಾಡುತ್ತಾರೆ. ಮನೆಯಲ್ಲಿ ಈಗಾಗಲೇ ತಯಾರಿಸಿದ ಸಿಹಿ ಅಡುಗೆಗಳಾದ ಕರಿಗಡಬು, ಹೋಳಿಗೆ, ಅನ್ನ-ಸಾಂಬಾರು, ಇತ್ಯಾದಿಗಳನ್ನು ದೇವರಿಗೆ ನೈವೇದ್ಯ ಮಾಡುತ್ತಾರೆ. ಕುಟುಂಬದ ಎಲ್ಲಾ ಸದಸ್ಯರು ಹೊಸಬಟ್ಟೆಗಳನ್ನು ತೊಡುತ್ತಾರೆ. ಬೇವು ಮತ್ತು ಬೆಲ್ಲವನ್ನು ಸೇವಿಸುತ್ತಾರೆ. ಯುಗಾದಿಯ ಹಬ್ಬದ ಸಂಭ್ರಮದಲ್ಲಿ ಜೂಜನ್ನು ಆಡುತ್ತಾರೆ. ಮಾಂಸಾಹಾರದ ಜೊತೆಗೆ ಮದ್ಯವನ್ನು ಸೇವಿಸುತ್ತಾರೆ. ಯುಗಾದಿ ಹಬ್ಬದ ದಿನದಂದು ಮರಣ ಹೊಂದಿದ ಹಿರಿಯರ ಸಮಾಧಿಗಳಿಗೆ ಹೋಗಿ, ಹೊಸಬಟ್ಟೆ, ಸಿಹಿಊಟವನ್ನು ಇಟ್ಟು ನೈವೇದ್ಯ ಮಾಡಿ ಪೂಜಿಸುವ ಸಂಪ್ರದಾಯವಿದೆ. ಈ ಸಮುದಾಯವು ದೀಪಾವಳಿ ಹಬ್ಬವನ್ನು ತುಂಬಾ ಅದ್ದೂರಿಯಾಗಿ ಆಚರಿಸುತ್ತಾರೆ. ಸಂಪ್ರದಾಯದಂತೆ ಮದುವೆ ಮಾಡಿಕೊಟ್ಟ ಹೆಣ್ಣುಮಕ್ಕಳನ್ನು ತವರಿಗೆ ಕರೆಯಿಸಿಕೊಂಡು ಉಡುಗೊರೆಗಳನ್ನು ಕೊಡುತ್ತಾರೆ. ಅರಿಶಿಣ, ಕುಂಕುಮ, ಬಳೆ, ಹಣ್ಣು ಇತ್ಯಾದಿಗಳನ್ನು ಕೊಡುತ್ತಾರೆ ಅಲ್ಲದೆ, ಅಳಿಯನನ್ನು ಕರೆಯಿಸಿಕೊಂಡು ಹೊಸಬಟ್ಟೆಯನ್ನು ಕೊಡುತ್ತಾರೆ. ಮಾಡಿದ ಸಿಹಿ ಅಡುಗೆಯನ್ನು ಎಲ್ಲರೂ ಸಾಮೂಹಿಕವಾಗಿ ಕುಳಿತುಕೊಂಡು ಊಟ ಮಾಡುತ್ತಾರೆ. ಹಿರಿಯರಿಗೆ ನಮಸ್ಕರಿಸಿ, ತಮ್ಮ ಊರಿನ ದೇವಸ್ಥಾನಕ್ಕೆ ಹೋಗಿ ಪೂಜೆಯನ್ನು ಸಲ್ಲಿಸುತ್ತಾರೆ. ಎತ್ತುಗಳಿಗೆ ನೈವೇದ್ಯವನ್ನು ಅರ್ಪಿಸಿ, ಅವುಗಳನ್ನು ಪೂಜಿಸಿ, ಮೆರವಣಿಗೆಯನ್ನು ಹೋಗಿ ಊರಿನ ಕೆಂಡದ ಸುತ್ತಲೂ ಅವುಗಳನ್ನು ಸುತ್ತುಹಾಕಿಸಿ ವಾಪಾಸು ಮನೆಗೆ ಕರೆತರುತ್ತಾರೆ. ಇವೆಲ್ಲವುಗಳನ್ನು ತುಂಬಾ ಸಂಭ್ರಮದಿಂದ ಅಚರಿಸುತ್ತಾರೆ. ಶಿವರಾತ್ರಿಯ ಹಬ್ಬವನ್ನೂ ಕೂಡ ಭಕ್ತಿ ಶ್ರದ್ಧೆಗಳಿಂದ ಆಚರಿಸುತ್ತಾರೆ. ಶಿವರಾತ್ರಿಯ ದಿನದಂದು ಶಿವನಿಗೆ ವಿಶೇಷವಾಗಿ ಭಕ್ತಿ ಸಮರ್ಪಣೆಯನ್ನು ಮಾಡುತ್ತಾರೆ. ಆ ದಿನದಂದು ಈ ಸಮುದಾಯದ ಜನರು ಉಪವಾಸ ವ್ರತವನ್ನು ಮಾಡುತ್ತಾರೆ. ಶಿವರಾತ್ರಿಯ ರಾತ್ರಿಯಂದು ಜಾಗರಣೆಯನ್ನು ಮಾಡುತ್ತಾರೆ. ಸಿಹಿ ಅಡುಗೆಯನ್ನು ತಯಾರಿಸಿ, ಶಿವನಿಗೆ ಅರ್ಪಿಸುತ್ತಾರೆ. ಶಿವರಾತ್ರಿಯ ದಿನದಂದು ಕೆಲವರು ಸಿಹಿ ಅಡುಗೆಯನ್ನು ಮಾಡಿ, ಶಿವನಿಗೆ ನೈವೇದ್ಯವನ್ನು ಅರ್ಪಿಸಿ ಸೇವಿಸಿದರೆ, ಕೆಲವರು ರಾತ್ರಿ ಜಾಗರಣೆ ನಂತರ ಸಿಹಿ ಅಡುಗೆಯನ್ನು ಸೇವಿಸುತ್ತಾರೆ. ಗಣಪತಿ ಹಬ್ಬವನ್ನು ಕೂಡ ಇವರು ತುಂಬಾ ಸಂಭ್ರಮದಿಂದ ಅಚರಿಸುತ್ತಾರೆ. ಹೋಳಿಗೆ ಗಡುಬು ಇತ್ಯಾದಿ ಸಿಹಿ ಅಡುಗೆ ಪದಾರ್ಥಗಳನ್ನು ತಯಾರಿಸಿ, ಗಣಪತಿಯನ್ನು ಪ್ರತಿಷ್ಠಾಪಿಸಿರುವ ಸ್ಥಳಕ್ಕೆ ಹೋಗಿ ನೈವೇದ್ಯವನ್ನು ಅರ್ಪಿಸಿ ಭಕ್ತಿಯಿಂದ ಪೂಜಿಸುತ್ತಾರೆ. ಎಲ್ಲರ ಮನೆಗಳಲ್ಲೂ ಸಿಹಿ ಅಡುಗೆಯನ್ನು ತಯಾರಿಸಿ ಸೇವಿಸುತ್ತಾರೆ. ನಂತರ ಕೆಲವು ದಿನಗಳ ನಂತರ, ಒಂಭತ್ತನೇ ದಿನದಂದು ಅಥವಾ ಹನ್ನೊಂದನೇ ದಿನದಂದು ಗಣಪತಿಯನ್ನು ಸಮೀಪದ ಕೆರೆ-ಕಟ್ಟೆ, ಅಥವಾ ನದಿಯಲ್ಲಿ ವಿಸರ್ಜಿಸುತ್ತಾರೆ. ಮಾರನವಮಿಯ ಹಬ್ಬವನ್ನು ಕೂಡ ಇವರು ತುಂಬಾ ಭಕ್ತಿ ಶ್ರದ್ಧೆಗಳಿಂದ ಆಚರಿಸುತ್ತಾರೆ. ಈ ದಿನದಂದು ಮಲ್ಲಾಳಮ್ಮ ಮತ್ತು ಚಾಮುಂಡಿ ದೇವಿಗೆ ವಿಶೇಷವಾದ ಪೂಜೆಯನ್ನು ಸಲ್ಲಿಸುತ್ತಾರೆ, ಕೋಳಿ, ಕುರಿಗಳನ್ನು ಬಲಿಕೊಡುತ್ತಾರೆ. ನಂತರ ಮಾಂಸಾಹಾರವನ್ನು ತಯಾರಿಸಿ ದೇವತೆಗಳಿಗೆ ನೈವೇದ್ಯವನ್ನು ಮಾಡಿ ಅರ್ಪಿಸಿ, ಸಾಮೂಹಿಕವಾಗಿ ಎಲ್ಲರೂ ಊಟವನ್ನು ಮಾಡುತ್ತಾರೆ. ನವರಾತ್ರಿಯ ಹಬ್ಬವನ್ನು ಕೂಡ ತುಂಬಾ ಚೆನ್ನಾಗಿ

ಆಚರಿಸುತ್ತಾರೆ. ತಮ್ಮ ಕುಲಕಸುಬಿನ ಆಯುಧಗಳನ್ನು ಮತ್ತು ಇತರೇ ಆಯುಧಗಳನ್ನು ಪೂಜಿಸುತ್ತಾರೆ. ನವದುರ್ಗೆಯರನ್ನು ಪೂಜಿಸುತ್ತಾರೆ.

ಆಯುಧಗಳಿಗೆ ವಿಭೂತಿ, ಅರಿಶಿಣ, ಕುಂಕುಮಗಳನ್ನು ಹಚ್ಚಿ, ತೆಂಗಿನಕಾಯಿಯನ್ನು ಹೊಡೆದು ಪೂಜಿಸುತ್ತಾರೆ. ಸಿಹಿ ಅಡುಗೆ ಪದಾರ್ಥಗಳು ಮತ್ತು ಮಾಂಸಹಾರ ಪದಾರ್ಥಗಳನ್ನು ತಯಾರಿಸಿ ಸಾಮೂಹಿಕವಾಗಿ ಸೇವಿಸುತ್ತಾರೆ. ಶ್ರಾವಣ ಶನಿವಾರಗಳಂದು ಆಂಧ್ರಮೇದರು ತಿಮ್ಮಪ್ಪನನ್ನು ವಿಶೇಷವಾಗಿ ಪೂಜಿಸುತ್ತಾರೆ. ಅಲ್ಲದೆ, ಶನಿದೇವರನ್ನೂ ಕೂಡ ಪೂಜೆ ಮಾಡುತ್ತಾರೆ.

**ಕತ್ತಿಯ ಹಬ್ಬ :** ಮೇದ ಬುಡಕಟ್ಟು ಸಮುದಾಯಕ್ಕೆ ಕತ್ತಿಯ ಹಬ್ಬವು ವಿಶೇಷವಾದದ್ದು ಆಗಿದೆ. ಕತ್ತಿಯ ಹಬ್ಬವೆಂದರೆ, ಮೇದರರು, ತಮ್ಮ ಕುಲ ಕಸುಬಿನ ಆಯುಧವನ್ನಾಗಿ ಕತ್ತಿಯನ್ನು ವಿಶೇಷವಾಗಿ ಪೂಜಿಸುವುದಾಗಿದೆ. ಮೇದ ಸಮುದಾಯವು ಮೂಲತಃವಾಗಿ ಬೊಂಬು, ಬಿದಿರು, ಬೆತ್ತಗಳಿಂದ ವಿವಿಧ ವಸ್ತುಗಳನ್ನು ತಯಾರಿಸಲು ಬಳಸುವ ಆಯುಧವಾಗಿದೆ. ಪ್ರತಿವರ್ಷದ ನವೆಂಬರ್-ಡಿಸೆಂಬರ್ ತಿಂಗಳಿನಲ್ಲಿ ಬಿದಿರನ್ನು ಕಡಿಯುವ ಪೂರ್ವದಲ್ಲಿ ಕತ್ತಿಯನ್ನು ವಿಶೇಷವಾದ ದಿನದಂದು ಪೂಜಿಸುತ್ತಾರೆ. ಈ ಹಬ್ಬವನ್ನು 'ಯಳಬಿಹಬ್ಬ'ವೆಂದೂ ಕೂಡ ಕರೆಯುತ್ತಾರೆ. ಮನೆಯ ಯಜಮಾನನು ತನ್ನ ಕುಟುಂಬದ ಸದಸ್ಯರಿಗೆ, ಪೂಜಿಸಿದ ಕತ್ತಿ ಮತ್ತು ಇತರೆ ಆಯುಧಗಳನ್ನು ಕೊಡುತ್ತಾನೆ. ಹತ್ತಿರದ ಕಾಡು ಅಥವಾ ಪ್ರದೇಶಕ್ಕೆ ಹೋಗಿ ಬೊಂಬು, ಬಿದಿರು, ಬೆತ್ತವನ್ನು ಕತ್ತರಿಸಿ ತರುವುದರ ಮೂಲಕ ಈ ಹಬ್ಬವನ್ನು ಆಚರಿಸುತ್ತಾರೆ. ಸಿಹಿ ಅಡುಗೆ ಹಾಗೂ ಮಾಂಸದ ಅಡುಗೆ ಪದಾರ್ಥವನ್ನೂ ಇವರು ಸೇವಿಸುತ್ತಾರೆ.

**ಮಾರಿಹಬ್ಬ :** ಮೇದ ಬುಡಕಟ್ಟು ಸಮುದಾಯವು ಮಾರಿಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ಮಾರಿದೇವತೆಗೆ ಪ್ರತಿಯೊಂದು ಮನೆಗಳಲ್ಲಿ ಕುರಿ, ಕೋಳಿಗಳನ್ನು ಬಿಟ್ಟಿರುತ್ತಾರೆ. ಮಾರಿಹಬ್ಬದ ದಿನದಂದು ಮಾರಿದೇವತೆಗೆ ಈ ಕುರಿ, ಕೋಳಿಗಳನ್ನು ಬಲಿಕೊಡುತ್ತಾರೆ. ನಂತರ ಕುಟುಂಬ ಸದಸ್ಯರು, ಸಂಬಂಧಿಗಳು, ಮಾಂಸಾಹಾರ ಮತ್ತು ಮದ್ಯವನ್ನು ಸೇವಿಸುತ್ತಾರೆ.

**ಹಿರಿಯರ ಪೂಜೆಯ ಹಬ್ಬದ ಆಚರಣೆ :** ಮೇದ ಬುಡಕಟ್ಟು ಸಮುದಾಯದಲ್ಲಿ ಹಿರಿಯರ ಪೂಜೆಯ ಹಬ್ಬವನ್ನು ತುಂಬಾ ಭಕ್ತಿ, ಗೌರವಗಳಿಂದ ಆಚರಣೆ ಮಾಡುತ್ತಾರೆ. ನಿಧನ ಹೊಂದಿದ ಅಥವಾ ಸತ್ತು ಹೋದ ಹಿರಿಯರನ್ನು ವಿಶೇಷವಾದ ದಿನದಂದು ಅಂದರೆ ದಸರಾ ಹಬ್ಬದ ಸಂದರ್ಭದಲ್ಲಿ ಪೂಜೆ ಮಾಡುವ ಮೂಲಕ ಹಬ್ಬದ ಆಚರಣೆ ಮಾಡುತ್ತಾರೆ. ಹಿರಿಯರ ಸಮಾಧಿಗಳಿಗೆ ಹೋಗಿ ಹೊಸ ಬಟ್ಟೆಯನ್ನು ಇಟ್ಟು ಪೂಜಿಸಿ ನೈವೇದ್ಯವನ್ನು ಅರ್ಪಿಸುತ್ತಾರೆ. ಮನೆಗಳಲ್ಲೂ ಕೂಡ ಹಿರಿಯರ ಭಾವಚಿತ್ರವನ್ನು ಇಟ್ಟು ಪೂಜೆಯನ್ನು ಸಲ್ಲಿಸಿ, ನೈವೇದ್ಯವನ್ನು ಅರ್ಪಿಸುತ್ತಾರೆ. ಹಿರಿಯರನ್ನು ಪೂಜಿಸುವುದರ ಮೂಲಕ ಸತ್ತು ಹೋದ ಅವರ ಆತ್ಮಕ್ಕೆ ಶಾಂತಿ ಸಿಗುತ್ತದೆ ಎಂದು ಭಾವಿಸುತ್ತಾರೆ. ಅಲ್ಲದೆ ಹಿರಿಯರ ಋಣವನ್ನು ತೀರಿಸಲು ಈ ಹಬ್ಬವನ್ನು ಆಚರಿಸುತ್ತಾರೆ.

**ಜಾನಪದ ನಂಬಿಕೆಗಳು:** ಮೇದರು ತಮ್ಮದೇ ಆದ ಜಾನಪದ ನಂಬಿಕೆಗಳು ಮತ್ತು ಸಾಂಪ್ರದಾಯಿಕ ನಂಬಿಕೆಗಳನ್ನು ಹೊಂದಿದ್ದಾರೆ. ತಮ್ಮ ದಿನನಿತ್ಯದ ಜೀವನದಲ್ಲಿ ಈ ನಂಬಿಕೆಗಳನ್ನು ಅನುಸರಿಸುತ್ತಾರೆ.

**ಜನನ**

೧. ಶಿವಗಣಗಳು ಮತ್ತು ಗಂಧರ್ವ ಸ್ತ್ರೀಯರು ಮೇದ ಬುಡಕಟ್ಟಿನ ಜನರ ಮೂಲ ಸ್ತ್ರೀ-ಪುರುಷರು.

೨. ಗೌರಿ ಮತ್ತು ಈಶ್ವರನ ಇಚ್ಛೆಯಂತೆ ಹುಟ್ಟಿದವರೆಂಬುದು.

೩. ಮಹೇಂದ್ರಾಚಲ ಪರ್ವತದಿಂದ ಬಂದವರು.

೪. ಶಿವನ ಆಭರಣವಾದ ಹಾವುಗಳು ಬಿದಿರುಗಳಾಗಿವೆ ಎಂಬುದು.

೫. ಶಿವ ಮತ್ತು ಪಾರ್ವತಿಗಾಗಿ ಬಿದಿರು ಕಡಿದು ಮೊರವನ್ನು ಮಾಡುವ ಶಿವಭಕ್ತರು ಎಂಬುದು.

**ದೇವ-ದೇವತೆಗಳು**

೧. ಗೌರಿ ಮತ್ತು ಶಂಕರರನ್ನು ಪೂಜಿಸಬೇಕು. ಇವರು ಮೇದರರ ಮೂಲದೇವತೆಗಳು.

೨. ಊರ ದೇವತೆಗೆ ಮತ್ತು ಕಾಡು ದೇವತೆಗೆ ಬಲಿ ಕೊಡಬೇಕು. ಇದರಿಂದ ದೇವ-ದೇವತೆಗೆ ಸಂತೃಪ್ತರಾಗಿ ಒಳ್ಳೆಯದಾಗುತ್ತದೆ.

೩. ಶಕ್ತಿ ದೇವತೆಯ ಪೂಜೆ-ಆರಾಧನೆಯಿಂದ ಮಾಟ ಮಂತ್ರಗಳು, ತಂತ್ರಗಳು ಪರಿಣಾಮವನ್ನು ಬೀರುವುದಿಲ್ಲ.

೪. ಮಾರಿಯಮ್ಮ, ಕೊಲ್ಲಾರಮ್ಮ, ಯಲ್ಲಮ್ಮ, ಗುಳ್ಯಮ್ಮ, ಮಲಿಯಮ್ಮ ದೇವತೆಗಳನ್ನು ಪೂಜಿಸಿದರೆ ದುಷ್ಟ ಪ್ರಾಣಿಗಳ ಕಾಟವಿರುವುದಿಲ್ಲ.

೫. ತಿರುಪತಿ ದೇವರ ಭಕ್ತರು ದಾಸಯ್ಯಗಳಿಗೆ ನೈವೇದ್ಯವನ್ನು ಕೊಟ್ಟರೆ ಸ್ವರ್ಗ ಪ್ರಾಪ್ತಿಯಾಗುತ್ತದೆ.

೬. ದೇವರಿಗೆ ಮತ್ತು ದೇವತೆಗಳಿಗೆ ಕೋಳಿ ಬಲಿಯನ್ನು ಕೊಟ್ಟರೆ ಅದರ ತಲೆಯನ್ನು ದೇವರ ಮರಕ್ಕೆ ಕಟ್ಟಬೇಕು ಎನ್ನುವ ನಂಬಿಕೆ.

೭. ಕೊಂಗಳ್ಳಿ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಹೆಂಗಸರು ಹೋಗಬಾರದು.

೮. ಹೆಂಗಸರ ಸೀರೆಯ ಬಟ್ಟೆಗಳಲ್ಲಿ ದೇವರಿಗೆ ಮುಡಿಪು ಹಣವನ್ನು ಕಟ್ಟಬಾರದು.

೯. ದೇವರು ಮತ್ತು ದೇವತೆಗಳ ಬಲಭಾಗದಿಂದ ಪ್ರಸಾದವು ಬಿದ್ದರೆ ಶುಭವಾಗುತ್ತದೆ ಎಡಭಾಗದಿಂದ ಬಿದ್ದರೆ ತೊಂದರೆಯಾಗುತ್ತದೆ. ಪ್ರಸಾದದಲ್ಲಿ ಬೆಸಸಂಖ್ಯೆ ಬಂದರೆ ಶುಭವಾಗುತ್ತದೆ. ಸರಿಸಂಖ್ಯೆ ಬಂದರೆ ಅಷ್ಟು ಒಳ್ಳೆಯದಲ್ಲ ಎನ್ನುವ ನಂಬಿಕೆ ಇದೆ.

೧೦. ಪ್ರತಿದಿನವೂ ಮಲಗುವಾಗ ಮನೆ ದೇವರನ್ನು ನೆನೆದು ಮಲಗಬೇಕು.

೧೧. ಮಲ್ಯಾಳಮ್ಮ ದೇವತೆಯನ್ನು ಪೂಜಿಸಿದರೆ, ಬಿದಿರು ವ್ಯಾಪಾರ - ವ್ಯವಹಾರದಲ್ಲಿ ನಷ್ಟವಿಲ್ಲ ಎನ್ನುವುದು.

೧೨. ಶಕ್ತಿದೇವತೆ ಮತ್ತು ಯಲ್ಲಮ್ಮದೇವತೆಗೆ ತಮ್ಮ ಮುಡಿ ಕೊಡುವುದು(ತಲೆಕೂದಲನ್ನು ಅರ್ಪಿಸುವುದು) ಮಾಡುವುದರಿಂದ ಮಕ್ಕಳ ಆರೋಗ್ಯ ಹೆಚ್ಚುತ್ತದೆ.

೧೩. ಹಿರಿಯರ ಪೂಜೆ ಮಾಡುವುದರಿಂದ ಅವರ ಆತ್ಮಕ್ಕೆ ಶಾಂತಿ ಸಿಗುತ್ತದೆ. ಸ್ವರ್ಗ ಪ್ರಾಪ್ತಿಯಾಗುತ್ತದೆ. ಹಿರಿಯರ ಆಶೀರ್ವಾದ ಲಭಿಸುತ್ತದೆ.

**ವೃತ್ತಿ ಬದುಕಿನ ನಂಬಿಕೆಗಳು**

೧. ಬಿದಿರು, ಬೊಂಬು, ಬೆತ್ತದ ಮನೆಗಳು ಶ್ರೇಯಸ್ಸು ತರುತ್ತವೆ.

೨. ಅಮವಾಸ್ಯೆ, ಪೌರ್ಣಿಮೆ ದಿನಗಳಂದು ಬಿದಿರು, ಬೊಂಬು, ಬೆತ್ತದ ಕಾರ್ಯಗಳನ್ನು ಮಾಡಬಾರದು.

೩. ಮೊದಲ ಸಲ, ಬಿದಿರುಗಳನ್ನು ಕಡಿಯುವಾಗ ದೇವತೆಗಳಿಗೆ ಬಲಿಯನ್ನು ಕೊಡಬೇಕು.

೪. ಎಳೆಯ ಬಿದಿರನ್ನು ಕಡಿಯಬಾರದು, ಕಡಿದರೆ ಸಂತಾನ ಪ್ರಾಪ್ತಿಗೆ ತೊಂದರೆಯಾಗುತ್ತದೆ.

೫. ಬಿದಿರು ಕಡಿಯುವುದರಿಂದ ಮುಂಚೆ ಆಯುಧಗಳನ್ನು ಪೂಜಿಸಬೇಕು.

೬. ಕಾಡು ದೇವತೆಗಳಿಗೆ ಪೂಜೆ ಸಲ್ಲಿಸಿ ಬಿದಿರು ಕಡಿಯಬೇಕು.

**ಕುಟುಂಬದ ನಂಬಿಕೆಗಳು**

೧. ಶಿವರಾತ್ರಿಯ ದಿನದಂದು ಜಾಗರಣೆಯನ್ನು ಮಾಡದಿದ್ದರೆ, ಕತ್ತೆಯ ಜನ್ಮ ಪ್ರಾಪ್ತಿಯಾಗುತ್ತದೆ.

೨. ಮಕ್ಕಳ ನಾಮಕರಣದ ಕಾಲದಲ್ಲಿ ಬಾಗಿಲಿಗೆ ಹಳ್ಳಿಯ ಪಾದರಕ್ಷೆಗಳನ್ನು ಕಟ್ಟುವುದರಿಂದ ಗಾಳಿ-ಭೂತದ ಕಾಟವಿರುವುದಿಲ್ಲ.

೩. ಮದುವೆಗೆ ಹಸಿಯಾದ ಬಿದಿರನ್ನು ಕಟ್ಟಬೇಕು. ಹನ್ನೆರಡು ಕಂಬಗಳನ್ನು ನೆಡಬೇಕು.

೪. ಮನೆ ಕಟ್ಟುವಾಗ ಮತ್ತು ಗೃಹಪ್ರವೇಶವನ್ನು ಮಾಡುವಾಗ ಕುರಿ, ಕೋಳಿಗಳನ್ನು ಬಲಿ ಕೊಡಬೇಕು.

೫. ಸತ್ತ ಹಿರಿಯರಿಗೆ ಪೂಜೆ ಸಲ್ಲಿಸಬೇಕು ಇಲ್ಲದಿದ್ದರೆ ಅವರ ಆತ್ಮಕ್ಕೆ ಶಾಂತಿ ಸಿಗುವುದಿಲ್ಲ.

೬. ಮದುವೆಯನ್ನು ಅಮವಾಸ್ಯೆ, ಹುಣ್ಣಿಮೆ ದಿನಗಳಂದು ಮಾಡಿಕೊಳ್ಳಬಾರದು.

೭. ಬಸುರಿ ಸಂಜೆಯ ಹೊತ್ತು ಮನೆಯಿಂದ ಹೊರಗೆ ಹೋದರೆ ದೆವ್ವ - ಭೂತಗಳ ಕಾಟ ಉಂಟಾಗುತ್ತದೆ.

೮. ಮೂಲಾನಕ್ಷತ್ರದಲ್ಲಿ ಹುಟ್ಟಿದ ಹೆಣ್ಣನ್ನು ಮದುವೆಯಾಗಬಾರದು.

೯. ಹೆಣ, ವಿಧವೆ, ಖಾಲಿಕೊಡ ಎದುರು ಬಂದರೆ ಅಶುಭವಾಗುತ್ತದೆ.

೧೦. ಉಡ, ಹಾವು, ಓತಗಳು ಅಡ್ಡಬರಬಾರದು.

೧೧. ಮಗುವನ್ನು ದುರುಗುಟ್ಟಿಕೊಂಡು ನೋಡಿದರೆ ಮತ್ತು ಬಂಜೆ ಮುಟ್ಟಿದರೆ ದೃಷ್ಟಿ ತಾಕುತ್ತದೆ.

೧೨. ಬಿದಿರು ಬುಟ್ಟಿ, ಹಣ್ಣು, ಹೂವು, ಕನ್ನಡಿ, ಛತ್ರಿ, ಎದುರಿಗೆ ಬಂದರೆ ಶುಭವಾಗುತ್ತದೆ.

೧೩. ಮೆಣ್ಣೆಗಣ್ಣು, ಮೂಲಕಣ್ಣು, ಕೂಸಕಣ್ಣು, ಹೀನಸುಳಿ, ಉಗ್ಗು ಮುಂತಾದವು ಇದ್ದರೆ ಮದುವೆ ಆಗಬಾರದು.

೧೪. ಅರಿಶಿಣ ಬಟ್ಟೆಯನ್ನು ಧರಿಸಿದರೆ ಮೈಗೆ ಯಾವುದೇ ನಂಜು ಹತ್ತುವುದಿಲ್ಲ.

೧೫. ಮನೆಯ ಸೂತಕವು ಹೋಗಲು ದೇವರ ತೀರ್ಥವನ್ನು ಸಿಂಪಡಿಸಬೇಕು.

೧೬. ಮೈನೆರೆದವಳು ಒಂಭತ್ತು ದಿನ ಮೈಲಿಗೆ ಗುಡಿಸಲಿನಲ್ಲಿ ಕಳೆಯಬೇಕು.

೧೭. ಮಂಡೆಯನ್ನು(ತಲೆಕೂದಲು)ಪುರುಷ ಮತ್ತು ಸ್ತ್ರೀಯರು ದೇವರಿಗೆ ಅರ್ಪಿಸಬೇಕು. ಇದರಿಂದ ಒಳ್ಳೆಯದಾಗುತ್ತದೆ.

**೩.೬. ಒಳಾಡಳಿತ ವ್ಯವಸ್ಥೆ**

ಮೇದರ ಬುಡಕಟ್ಟು ಸಮುದಾಯವು ತಮ್ಮದೇ ಆದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿದೆ. ವಿವಿಧ ಪ್ರದೇಶಗಳಿಗೆ ಅನುಗುಣವಾಗಿ ಒಳಾಡಳಿತ ವ್ಯವಸ್ಥೆಯು ಇರುತ್ತದೆ. ಈ ಸಮುದಾಯವು ತಮ್ಮ ಆಡಳಿತ ವ್ಯವಸ್ಥೆಗೆ ಅವರ ಸಮುದಾಯದಲ್ಲೇ ಹಿರಿಯ ಮುಖಂಡನನ್ನು ಆಯ್ಕೆ ಮಾಡುತ್ತಾರೆ. ಅವನಿಗೆ 'ಯಜಮಾನ' ಎಂದು ಕರೆಯುತ್ತಾರೆ. ಈ ಯಜಮಾನನು ತನಗೆ ಸಹಾಯಕವಾಗುವಂತೆ ಹಿರಿಯ ವ್ಯಕ್ತಿಗಳನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಮೇದರಲ್ಲಿ ಗೌಡ, ಬುದ್ಧಿವಂತ ಹಾಗೂ ದೊಡ್ಡಮನುಷ್ಯ ಎನ್ನುವ ಮುಖಂಡರನ್ನು ಆರಿಸುತ್ತಾರೆ. ಪಟೇಲ, ಗೌಡ, ಹಿರಿಯ ಯಜಮಾನ ಎಂದು ಹೆಸರಿಸುತ್ತಾರೆ. ಯಜಮಾನ (ಗೌಡ)ನಿಗೆ ಪೇಟವನ್ನು ಕಟ್ಟಿ, ಹಾರ ಹಾಕುವುದರ ಮೂಲಕ ಹಿರಿತನದ ಸ್ಥಾನವನ್ನು ಬಿಟ್ಟು ಕೊಟ್ಟು ಯಜಮಾನನನ್ನಾಗಿ ಆಯ್ಕೆ ಮಾಡುತ್ತಾರೆ. ಈ ಯಜಮಾನನು, ಈ ಸಮುದಾಯದಲ್ಲಿ ನಡೆಯುವ ಜಗಳಗಳು, ವ್ಯಾಜ್ಯಗಳನ್ನು ತೀರ್ಮಾನ ಕೊಡುತ್ತಾನೆ. ಪಂಚಾಯಿತಿಯನ್ನು ಕರೆದು ಸೂಕ್ತವಾದ ತೀರ್ಮಾನವನ್ನು ಯಜಮಾನ(ಗೌಡ) ನೀಡುತ್ತಾನೆ. ಈ ತೀರ್ಮಾನವನ್ನು ಎಲ್ಲರೂ ಒಪ್ಪಿಕೊಳ್ಳ ಬೇಕಾಗುತ್ತದೆ. ಕಳ್ಳತನ, ದರೋಡೆ, ಜಗಳ, ಹಾದರತನ, ವೈಷಮ್ಯಗಳನ್ನು ಇತ್ಯಾದಿ ಪ್ರಕರಣಗಳಲ್ಲಿ ಯಜಮಾನ(ಗೌಡ)ನು ಪಂಚಾಯಿತಿಯನ್ನು ನಡೆಸುವ ಮೂಲಕ ನ್ಯಾಯ ತೀರ್ಮಾನವನ್ನು ನೀಡುತ್ತಾನೆ. ಒಂದು ವೇಳೆ ಶಿಕ್ಷೆ ಮತ್ತು ದಂಡವನ್ನು ವಿಧಿಸಿದರೂ ಇಂತಹ ತೀರ್ಮಾನವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಈ ಪಂಚಾಯಿತಿ ಕಾರ್ಯವು ಆಧುನಿಕ ಕೋರ್ಟ್‌ನ ರೀತಿಯಲ್ಲಿ ಇರುತ್ತದೆ. ವಾದ, ವಿವಾದ, ತೀರ್ಮಾನಗಳು ಇರುತ್ತವೆ. ಮದುವೆಯ ಶುಭಕಾರ್ಯದ ವಿಚಾರವನ್ನು ಸಮುದಾಯದ ಯಜಮಾನ(ಗೌಡ)ನಿಗೆ ತಿಳಿಸಬೇಕಾಗುತ್ತದೆ. ಮದುವೆಯು ನಿಶ್ಚಯವಾಗಿರುವ ವಿಷಯವನ್ನು ಸಮುದಾಯದ ಸಭೆಯನ್ನು ಕರೆದು ಎಲ್ಲರಿಗೂ ಯಜಮಾನ(ಗೌಡ)ನು ತಿಳಿಸುತ್ತಾನೆ. ವೀಳ್ಯವನ್ನು ಸಮುದಾಯದ ಯಜಮಾನನಿಗೆ

ಕೊಟ್ಟು ಸಮುದಾಯದ ಇತರರಿಗೆ ವೀಳ್ಯವನ್ನು ನೀಡುತ್ತಾರೆ. ಗಂಡು ಮತ್ತು ಹೆಣ್ಣಿನ ಮದುವೆ ನಿಶ್ಚಿತಾರ್ಥದ ತಾಂಬೂಲವನ್ನು ಬದಲಾಯಿಸಿ ಕೊಳ್ಳುವಲ್ಲಿ ಯಜಮಾನನು ಮಧ್ಯವರ್ತಿಯಾಗಿ ಕಾರ್ಯ ನಿರ್ವಹಿಸುತ್ತಾನೆ. ದಿಬ್ಬಣವು ಹೊರಡಲು ಯಜಮಾನನು ತಿಳಿಸುತ್ತಾನೆ. ಯಜಮಾನನ ಆಜ್ಞೆಯನ್ನು, ತೀರ್ಮಾನವನ್ನು ಯಾರೂ ಕೂಡ ಪ್ರಶ್ನಿಸುವುದಿಲ್ಲ. ಮದುವೆಯ ಎಲ್ಲಾ ಸಂದರ್ಭಗಳಲ್ಲಿಯೂ ಯಜಮಾನನೇ ಮುಂದಾಳತ್ವ ವಹಿಸುತ್ತಾನೆ. ಯಜಮಾನನ ಮಾತನ್ನು ಯಾರೂ ಮೀರುವುದಿಲ್ಲ. ಮದುವೆ ನಿಶ್ಚಯದಿಂದ ಹಿಡಿದು ಗಂಡು ಹೆಣ್ಣಿನ ಮದುವೆ ಆಗುವವರೆಗೂ ಯಜಮಾನನು ಮಾರ್ಗದರ್ಶನ ನೀಡುತ್ತಾನೆ. ಮದುವೆಯ ನಂತರವೂ ಕೂಡ ಗಂಡ ಹೆಂಡತಿಯ ಮಧ್ಯೆ ಏನಾದರೂ ಕೌಟುಂಬಿಕ ಸಮಸ್ಯೆಗಳು ಉಂಟಾದರೆ ಯಜಮಾನನು ಬಗೆಹರಿಸುತ್ತಾನೆ. ಹೊಂದಾಣಿಕೆ ಮಾಡಿಕೊಂಡು ಹೋಗಲು ಮಾರ್ಗದರ್ಶನವನ್ನು ನೀಡುತ್ತಾನೆ.

**ಕೂಡಿಕೆ ಪದ್ಧತಿ:** ಮೇದ ಬುಡಕಟ್ಟಿನಲ್ಲಿ 'ಕೂಡಿಕೆ ಪದ್ಧತಿ' ಇದೆ. ಹೆಂಡತಿ ಸತ್ತು ಹೋದವಳು ಅಥವಾ ಗಂಡ ಸತ್ತು ಹೋದವನು ಮರು ಮದುವೆಯಾಗಲು ಅವಕಾಶವಿದೆ. ಗಂಡ ಮತ್ತು ಹೆಂಡತಿಯಾಗುವವರ ಪರಸ್ಪರ ಅನುಮತಿಯನ್ನು ಪಡೆದುಕೊಂಡು ಸಮುದಾಯದ ಮುಖಂಡನಾದ ಯಜಮಾನನು ಮರುಮದುವೆ ಮಾಡಿಸುತ್ತಾನೆ. ಅವರಿಗೆ ಹುಟ್ಟಿದ ಮಕ್ಕಳು ಸಮುದಾಯದಲ್ಲಿ ಎಲ್ಲರಂತೆಯೇ ಜೀವನವನ್ನು ನಡೆಸಲು ಅವಕಾಶ ನೀಡಲಾಗುತ್ತದೆ. ಮದುವೆಯ ನಂತರ ಸಮುದಾಯದ ಎಲ್ಲರಿಗೂ ಸಾಮೂಹಿಕವಾಗಿ ಭೋಜನದ ವ್ಯವಸ್ಥೆಯನ್ನು ಮಾಡುತ್ತಾರೆ. ಅಂತರ್‌ಜಾತಿಯ ವಿವಾಹಕ್ಕೆ ಮೇದ ಸಮುದಾಯದಲ್ಲಿ ಅವಕಾಶವನ್ನು ನೀಡುವುದಿಲ್ಲ. ಬೇರೆ ಜಾತಿಯ ಕನ್ಯೆಯನ್ನು ವರನು ವಿವಾಹವಾದರೆ ಅಥವಾ ಬೇರೆ ಜಾತಿಯ ವರನನ್ನು ಕನ್ಯೆ ವಿವಾಹವಾದರೆ ಮೇದ ಸಮುದಾಯದಿಂದ ಬಹಿಷ್ಕರಿಸಲಾಗುತ್ತದೆ. ಅವರನ್ನು ಮೇದರ ಕೇರಿಗೆ ಸೇರಿಸುವುದಿಲ್ಲ. ಅವರಿಗೆ ಹುಟ್ಟಿದ ಮಕ್ಕಳನ್ನು ಮೇದ ಸಮುದಾಯದವರು ವಿವಾಹವಾಗುವಂತಿಲ್ಲ. ಈ ಎಲ್ಲಾ ಪಂಚಾಯಿತಿಗಳನ್ನು ಯಜಮಾನನೇ ಮಾಡಿ ಆಜ್ಞೆಯನ್ನು ಹೊರಡಿಸುತ್ತಾನೆ. ಹೆಂಡತಿಯು ಪರ ಪುರುಷನೊಂದಿಗೆ ದೈಹಿಕ ಸಂಬಂಧವನ್ನು ಹೊಂದಿದ್ದರೆ ಅಥವಾ ಗಂಡನು ಪರ ಸ್ತ್ರೀಯೊಂದಿಗೆ ದೈಹಿಕ ಸಂಬಂಧವನ್ನು ಹೊಂದಿದ್ದರೆ ಅಥವಾ ಗಂಡನು ನಪುಂಸಕನಾಗಿದ್ದರೆ, ಈ ಎಲ್ಲಾ ವಿಷಯಗಳನ್ನು ಪಂಚಾಯಿತಿಯ ಮುಂದೆ ತಂದು ಗೌಡನು ಸರಿಯಾದ ತೀರ್ಮಾನವನ್ನು ಕೊಡುತ್ತಾನೆ. ವಿಧವೆಯನ್ನು ಮದುವೆಯಾದ ಗಂಡನು ವಿಧವೆಯ ಮಕ್ಕಳನ್ನು ತಮ್ಮ ಮಕ್ಕಳಂತೆಯೇ ನೋಡಿಕೊಳ್ಳಬೇಕಾಗುತ್ತದೆ. ವಿವಾಹಕ್ಕಿಂತ ಮೊದಲು ಕನ್ಯೆಯು ಗರ್ಭಿಣಿಯಾದರೆ ಅವಳನ್ನು ಗರ್ಭಿಣಿ ಮಾಡಿದವನಿಗೆ ಮದುವೆ ಮಾಡಿಸುತ್ತಾರೆ. ಅನ್ಯ ಜಾತಿಯವನಿಂದ ಗರ್ಭಿಣಿಯಾದ ಅವಳನ್ನು ಜಾತಿಯಿಂದ ಬಹಿಷ್ಕರಿಸುತ್ತಾರೆ. ವ್ಯಭಿಚಾರ, ಕುಲಭ್ರಷ್ಟತೆಯಂತಹ ಸಂದರ್ಭಗಳಲ್ಲಿ ದಂಪತಿಗಳಲ್ಲಿ ವಿರಸ ಮೂಡಿದಾಗ ವಿವಾಹ ವಿಚ್ಛೇದನವನ್ನೂ ಮಾಡಿಸುತ್ತಾರೆ. ಸಾಧ್ಯವಾದಷ್ಟು ಮಟ್ಟಿಗೆ ಒಳಜಗಳಗಳನ್ನು ರಾಜಿ ಸಂಧಾನದ ಮೂಲಕ ಹೊಂದಾಣಿಕೆ ಮಾಡಿಸುತ್ತಾರೆ. ಕಳ್ಳತನ, ದರೋಡೆ, ಹಿರಿಯರಿಗೆ ಅಗೌರವ ಸಮುದಾಯದ ನೀತಿ ನಿಯಮಗಳ ಉಲ್ಲಂಘನೆಯಂತಹ

ಸಂದರ್ಭಗಳಲ್ಲಿ ಸೂಕ್ತ ದಂಡ ಮತ್ತು ಶಿಕ್ಷೆಯನ್ನು ವಿಧಿಸಲಾಗುತ್ತದೆ. ತೀರ ಬಡವರು, ರೋಗಿಗಳು, ವೃದ್ಧರು, ಮಕ್ಕಳು, ಅಸಹಾಯಕ ಪರಿಸ್ಥಿತಿಯಲ್ಲಿದ್ದಾಗ ಸಹಾಯವನ್ನು ಮಾಡಲಾಗುತ್ತದೆ. ಮೇದ ಸಮುದಾಯದಲ್ಲಿ ಯಾರಿಗಾದರೂ ಮರಣ ಸಂಭವಿಸಿದಲ್ಲಿ ಮೇದ ಸಮುದಾಯದ ಯಜಮಾನನು ಮುಂದಾಳತ್ವವನ್ನು ವಹಿಸಿ ಸಂಬಂಧಿಸಿದ ಎಲ್ಲಾ ಕಾರ್ಯಗಳನ್ನು ಮಾಡಿಸುತ್ತಾನೆ. ಮನೆಗೆ ಒಬ್ಬರಂತೆ ಮರಣ ಹೊಂದಿದ ವ್ಯಕ್ತಿಯ ಮನೆಗೆ ಬಂದು ಸಾಂತ್ವನ ಹೇಳುವ ಪದ್ಧತಿ ಇದೆ. ಪ್ರತಿಯೊಂದು ಹಬ್ಬ ಹರಿದಿನಗಳನ್ನೂ ಸಮುದಾಯದ ಎಲ್ಲಾ ಜನರು ಒಟ್ಟಾಗಿ ಆಚರಿಸುವ ಪದ್ಧತಿ ಇದೆ. ಧಾರ್ಮಿಕ ಹಬ್ಬಗಳು, ಜಾತ್ರೆಗಳು, ದೇವರ ಕಾರ್ಯಗಳು, ವಿಶೇಷ ಹಬ್ಬಗಳು, ವಾರ್ಷಿಕ ಹಬ್ಬಗಳು, ಇತ್ಯಾದಿಗಳನ್ನು ಸಮುದಾಯದ ಯಜಮಾನನು ಎಲ್ಲಾ ಪಂಚಾಯಿತಿ ಮುಖಂಡರೊಂದಿಗೆ ಚರ್ಚಿಸಿ, ತೀರ್ಮಾನವನ್ನು ಕೈಗೊಳ್ಳುತ್ತಾನೆ. ಒಂದು ವೇಳೆ ಸಮುದಾಯದ ಯಜಮಾನನು ತೀರ್ಮಾನವನ್ನು ತೆಗೆದುಕೊಳ್ಳಲು ಆಗದಿದ್ದರೆ, ತಾಲೂಕು ಅಥವಾ ಜಿಲ್ಲಾ ಮುಖಂಡರನ್ನು ಕರೆಯಿಸಿಕೊಂಡು ತೀರ್ಮಾನವನ್ನು ಕೈಗೊಳ್ಳುತ್ತಾರೆ. ತಮ್ಮದೇ ಆದ ಸಂಘ-ಸಂಸ್ಥೆಗಳ ಮೂಲಕ ಸರ್ಕಾರದಿಂದ ಬರುವ ಸೌಲಭ್ಯಗಳನ್ನು ಪಡೆಯುತ್ತಾರೆ. ತಮ್ಮ ಸಮುದಾಯದ ಬುಡಕಟ್ಟು ಸಮುದಾಯದ ಉದ್ಯೋಗ, ವಿದ್ಯಾಭ್ಯಾಸ, ಕರಕುಶಲ ವಸ್ತುಗಳ ತಯಾರಿಕೆ ಇತ್ಯಾದಿ ಸಂದರ್ಭಗಳಲ್ಲಿ ಸಮುದಾಯದ ಯಜಮಾನನು ಪ್ರಗತಿ ಪರ ನಿರ್ಧಾರಗಳನ್ನು ಕೈಗೊಳ್ಳುತ್ತಾನೆ.

**೩.೭. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ**

ಮೇದ ಬುಡಕಟ್ಟಿನ ಮೂಲ ಉದ್ಯೋಗ ಮತ್ತು ಕುಲಕಸಬು, ಬಿದಿರು, ಬೊಂಬು, ಬೆತ್ತಗಳಿಂದ ವಿವಿಧ ಕರಕುಶಲ ವಸ್ತುಗಳು ಮತ್ತು ವಿವಿಧ ಸಾಮಗ್ರಿ ಮತ್ತು ಪೀಠೋಪಕರಣಗಳನ್ನು ತಯಾರಿಸುವುದು ಆಗಿದೆ. ಇಂದಿನ ಆಧುನಿಕ ಕಾಲದಲ್ಲಿ ಬಿದಿರು, ಬೊಂಬು, ಬೆತ್ತಗಳಿಂದ ಅಷ್ಟೇ ಜೀವನವನ್ನು ಸಾಗಿಸುವ ಸ್ಥಿತಿಯಲ್ಲಿ ಈ ಸಮುದಾಯ ಇಲ್ಲ. ಕಾರಣವೇನೆಂದರೆ, ತಮ್ಮ ಮೂಲ ಕುಲಕಸುಬಿಗೆ ಬೇಕಾದ ಕಚ್ಚಾವಸ್ತುಗಳು ಯತೇಚ್ಛವಾಗಿ ದೊರೆಯುತ್ತಿಲ್ಲ. ಸರ್ಕಾರದ ಅರಣ್ಯ ನೀತಿಯ ಫಲವಾಗಿ ಇಂದು ಯಾರು ಬೇಕಾದರೂ ಕಾಡಿಗೆ ಹೋಗಿ ಬಿದಿರು, ಬೊಂಬು, ಬೆತ್ತಗಳನ್ನು ತರುವಂತಿಲ್ಲ. ಅರಣ್ಯ ಇಲಾಖೆಯ ಮೂಲಕವಾಗಿಯೇ ತಮಗೆ ಬೇಕಾದ ಕಚ್ಚಾ ವಸ್ತುಗಳನ್ನು ಕೊಂಡುಕೊಳ್ಳಬೇಕಾಗಿದೆ. ಇಲ್ಲವೇ ಕಾನೂನು ಪರವಾಗಿ ಕೊಂಡುಕೊಳ್ಳಬೇಕಾಗಿದೆ. ಹಿಂದಿನ ಕಾಲದಲ್ಲಿ ಕಾಡಿನ ಅಂಚಿನಲ್ಲಿ ಜೀವನ ಸಾಗಿಸುತ್ತಿದ್ದಂತಹ ಸ್ಥಿತಿ ಈಗ ಕಡಿಮೆಯಾಗುತ್ತಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಬಿದಿರನ್ನು ಬೆಳೆಯುವ ಯಾವುದೇ ಕಾಡು ಇಲ್ಲ. ಬಿದಿರು, ಬೊಂಬು, ಬೆತ್ತಗಳಿಗಾಗಿ ಪಕ್ಕದ ಶಿವಮೊಗ್ಗ ಜಿಲ್ಲೆ, ಚಿಕ್ಕಮಗಳೂರು ಜಿಲ್ಲೆಯನ್ನು ಆಶ್ರಯಿಸಬೇಕಾಗಿದೆ. ಅಂದರೆ, ಅಲ್ಲಿಗೆ ಹೋಗಿ ಕಚ್ಚಾ ವಸ್ತುಗಳನ್ನು ಖರೀದಿ ಮಾಡಿ ಬಂದು ಇತರೆ ಸಿದ್ಧವಸ್ತುಗಳನ್ನು ತಯಾರಿಸಬೇಕಾಗಿದೆ. ಅಲ್ಲದೇ, ಮೇದ ಬುಡಕಟ್ಟು ಸಮುದಾಯವು ಇಂದು ಕೇವಲ ತಮ್ಮ ಪಾರಂಪರಿಕ ವೃತ್ತಿಯಲ್ಲಿ ತೊಡಗಿಸಿಕೊಂಡಿಲ್ಲ. ಬದಲಾಗಿ ವಿವಿಧ ರೀತಿಯ ಶಿಕ್ಷಣವನ್ನು

ಪಡೆದುಕೊಂಡು ಬೇರೆ-ಬೇರೆ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತಿದೆ. ಆದಾಗ್ಯೂ ಹಿರಿಯರು ತಮ್ಮ ಕುಲಕಸುಬನ್ನು ಮುಂದುವರೆಸಿಕೊಂಡೇ ಬರುತ್ತಿದ್ದಾರೆ. ಬಿದಿರು ಉದ್ಯಮವು ಇತ್ತೀಚಿನ ದಿನಗಳಲ್ಲಿ ಬೆಳೆಯುತ್ತಿರುವುದನ್ನೂ ಕಾಣುತ್ತೇವೆ. ಈ ಉದ್ಯಮವೂ ಕೂಡ ಲಾಭದಾಯಕವಾಗಿರುವುದನ್ನು ಕಾಣಬಹುದಾಗಿದೆ.

ಮೇದರು ಕೇವಲ ಬೊಂಬು, ಬಿದಿರುಗಳಿಂದ ವಸ್ತುಗಳನ್ನು ತಯಾರಿಸುವುದಷ್ಟೇ ಅಲ್ಲದೆ, ಕೃಷಿ, ವ್ಯಾಪಾರ ಹಾಗೂ ಇತರೇ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಬಿದಿರು, ಬೊಂಬು, ಬೆತ್ತಕ್ಕೆ ಸಂಬಂಧಿಸಿದ ಬಂಬೂ ಡಿಪೋಗಳನ್ನು ಮಾಡಿಕೊಂಡು ವ್ಯಾಪಾರ ಮತ್ತು ವ್ಯವಹಾರಗಳನ್ನು ಮಾಡುತ್ತಿದ್ದಾರೆ. ಜೊತೆಗೆ ಕಡಪದ ಕಲ್ಲು, ಸಿಮೆಂಟ್, ಇಟ್ಟಿಗೆ, ಇತರೆ ಕಲ್ಲುಗಳು ವ್ಯಾಪಾರದಲ್ಲಿಯೂ ಕೂಡ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಬೊಂಬು, ಬಿದಿರುಗಳಿಂದ ಪುಟ್ಟಿ, ಮೊರ, ಏಣಿ, ತಡಿಕೆ, ಬಾಗಿಲುಗಳು, ತೊಟ್ಟಿಲುಗಳು, ಕುರ್ಚಿಗಳು, ಮೇಜುಗಳು, ಮಂಚಗಳು ಇತ್ಯಾದಿಗಳನ್ನು ತಯಾರಿಸುತ್ತಾರೆ. ದಿನ ಬಳಕೆಯ ವಸ್ತುಗಳಾದ, ಗೂಡೆ, ಅನ್ನದ ಕುಕ್ಕೆ, ಕೋಳಿ ಕವಚು, ಅಡಿಕೆ ಚಾಪೆ, ಅಡಿಕೆ ಕೈತಟ್ಟೆ, ಮಂಕರಿ, ಮೀನು ಮಂಕರಿ, ಧಾನ್ಯದ ಕಣಜ, ಕೆರುವ ಮೊರ, ಬೇಲಿ ತಟ್ಟಿ, ದಾಡಿದಬ್ಬೆ, ಕಣಗೂಟ ಮಂಕರಿ, ಮಾವಿನ ಬುಟ್ಟಿ, ಏಣಿ, ಮಲಗುವ ಮಂಚಗಳು, ಕೈ ಬುಟ್ಟಿ, ಬೀಸಣಿಕೆ, ಹೂ ಬುಟ್ಟಿ, ಬಣ್ಣದ ತೊಟ್ಟಿಲುಗಳು, ಪಂಜರಗಳು, ಇತ್ಯಾದಿಗಳನ್ನು ತುಂಬಾ ಕುಶಲತೆಯಿಂದ ತಯಾರಿಸುತ್ತಾರೆ. ಇವುಗಳು ನೋಡುವುದಕ್ಕೆ ಸುಂದರವಾಗಿ ಕಾಣುತ್ತವೆ. ಅಲ್ಲದೇ, ಲೋಟ, ಚಮಚ, ಪಾವು, ಸೇರು, ಹೂಜಿ, ಸಂದೂಕ, ಗೊಟ್ಟಗಳನ್ನು ಕೂಡ ಬೊಂಬು ಮತ್ತು ಬಿದಿರುಗಳಿಂದ ವಿವಿಧ ರೀತಿಯ ವಸ್ತುಗಳನ್ನು ತಯಾರಿಸುತ್ತಾರೆ. ಬಿದಿರು, ಬೊಂಬು ಮತ್ತು ಬೆತ್ತಗಳನ್ನು ಕತ್ತರಿಸಲು ಕತ್ತಿ, ಸಿಬಿರು ತೆಗೆಯುವ ಕತ್ತಿ, ಚಾಕು, ಕುಡುಗೋಲು, ಮಚ್ಚು, ಉದ್ದದ ಕತ್ತಿ ಇತ್ಯಾದಿಗಳನ್ನು ಇವರು ಬಳಸುತ್ತಾರೆ. ವಿವಿಧ ರೀತಿಯ ವಸ್ತುಗಳನ್ನು ತಯಾರಿಸುವುದಕ್ಕಿಂತ ಮುಂಚೆ, ಬೊಂಬು, ಬಿದಿರು, ಬೆತ್ತಗಳನ್ನು ಹದಕ್ಕೆ ತಕ್ಕಂತೆ ನೆನೆಸುವುದು, ಬಿಸಿ ಮಾಡುವುದು ಇತ್ಯಾದಿ ಕಾರ್ಯಗಳನ್ನು ಮಾಡುತ್ತಾರೆ. ಮೇದರು ತಮ್ಮ ಮನೆಗಳನ್ನು ಕೆಲವು ಸಂದರ್ಭಗಳಲ್ಲಿ ಬಿದಿರು, ಬೆತ್ತ, ಬೊಂಬುಗಳಿಂದ ಕಟ್ಟಿಕೊಳ್ಳುತ್ತಾರೆ. ಇಂತಹ ಮನೆಗಳು ನೋಡಲು ಸುಂದರವಾಗಿರುತ್ತವೆ. ಇಂತಹ ಮನೆಗಳು ತುಂಬಾ ಅಪರೂಪಕ್ಕೆ ಕಂಡುಬರುತ್ತವೆ. ಈ ಮನೆಗಳು ನೈಸರ್ಗಿಕ ಹವಾನಿಯಂತ್ರಿತ ಮನೆಗಳ ರೀತಿಯಲ್ಲಿ ಇರುತ್ತವೆ. ಬೇಸಿಗೆ, ಮಳೆ, ಚಳಿಗಾಲಗಳ ವಾತಾವರಣಕ್ಕೆ ತಕ್ಕಂತೆ ಹೊಂದಿಕೊಳ್ಳುತ್ತವೆ. ತಮ್ಮ ವಿವಿಧ ದೇವತೆಗಳ ಜಾತ್ರೆಗಳಲ್ಲಿ ಅಂದರೆ ಚಾಮುಂಡೇಶ್ವರಿ ಉತ್ಸವ, ಕೊಲ್ಲಾಪುರ ಉತ್ಸವಗಳಲ್ಲಿ 'ಅಣಿ' ಕಟ್ಟಲು ಹಸಿರಾದ ಬಿದಿರನ್ನು ಬಳಸಿಕೊಳ್ಳುತ್ತಾರೆ. ಗಣಪತಿ ಉತ್ಸವಗಳಲ್ಲೂ ಅಣಿಕಟ್ಟಲು, ಗಣಪತಿ ಮಂಟಪವನ್ನು ಕಟ್ಟಲು, ಸುತ್ತಲೂ ತಡಿಕೆಗಳನ್ನು ಕಟ್ಟಲು ಬಳಸಿಕೊಳ್ಳುತ್ತಾರೆ. ಇಂದಿಗೂ ಕೂಡ ಬಿದಿರು ತುಂಬಾ ಶ್ರೇಷ್ಠವಾದ ವಸ್ತುವಾಗಿದೆ. ಆಧುನೀಕರಣಕ್ಕೆ ಇಂದಿನ ಸಮುದಾಯವು ಒಗ್ಗಿಕೊಳ್ಳುತ್ತಿದ್ದರೂ ಬಿದಿರಿನ ಕಾರ್ಯವು

ಮುಖ್ಯವಾಗಿದೆ. ಪಟ್ಟಣ, ನಗರಗಳಲ್ಲಿನ ಮನೆಗಳಲ್ಲೂ ವಿವಿಧ ರೀತಿಯ ಬೊಂಬು ಮತ್ತು ಬಿದಿರಿನ ಅಲಂಕಾರಗಳನ್ನು ಮಾಡುವುದು ಕಂಡುಬರುತ್ತದೆ. ಮೇದರರು ಇಂತಹ ಮನೆಗಳಿಗೆ ಹೋಗಿ, ವಿವಿಧ ರೀತಿಯ ಅಲಂಕಾರಿಕವಾದ ವಸ್ತುಗಳನ್ನು ತಯಾರಿಸಿ ಜೋಡಿಸಿಕೊಟ್ಟು ಬರುತ್ತಾರೆ. ಅದಕ್ಕೆ ತಕ್ಕಂತೆ ವೇತನ ಅಥವಾ ಶುಲ್ಕವನ್ನು ಪಡೆಯುತ್ತಾರೆ. ಬೇಸಾಯಕ್ಕೆ, ವ್ಯವಸಾಯಕ್ಕೆ ಬೇಕಾದ ಕಲಾತ್ಮಕವಾದ ವಸ್ತುಗಳನ್ನು ತಯಾರಿಸಿಕೊಡುತ್ತಾರೆ. ಚಂದ್ರಿಕೆ ತಟ್ಟಿ, ಚಾಪೆಗಳನ್ನು, ರೇಷ್ಮೆಚೌಕಿಗಳನ್ನು ತಯಾರಿಸಿ ಕೊಡುತ್ತಾರೆ. ದಿನನಿತ್ಯದ ತಮ್ಮ ಜೀವನದಲ್ಲಿ ಪ್ರತಿ ಮೇದರ ಕುಟುಂಬಗಳಲ್ಲಿ ಚಿಕ್ಕ ಚಿಕ್ಕ ಕರಕುಶಲ ವಸ್ತುಗಳನ್ನು ಮಕ್ಕಳ ಆಟಿಕೆ ಸಾಮಾನುಗಳನ್ನು ತಯಾರಿಸುವುದು ಕಂಡುಬರುತ್ತಿದೆ. ತಮ್ಮ ವ್ಯಾಪಾರ, ವ್ಯವಹಾರಕ್ಕೆ ಅನುಕೂಲವಾಗಲೆಂದು ಮೇದರರು ಬಹುತೇಕವಾಗಿ ಪಟ್ಟಣಗಳಲ್ಲಿ, ತಮ್ಮ ಪ್ರತ್ಯೇಕವಾದ ಮೇದಾರ ಕೇರಿಗಳಲ್ಲಿ ವಾಸಮಾಡುತ್ತಿರುವುದು ಕಂಡುಬರುತ್ತಿದೆ. ಕುಟುಂಬದ ಹಿರಿಯ ವ್ಯಕ್ತಿಗಳು ಬಿದಿರು, ಬೊಂಬು, ಬೆತ್ತದ ವ್ಯಾಪಾರ, ವ್ಯವಹಾರಗಳಲ್ಲಿ ತೊಡಗಿಕೊಂಡರೆ, ಮಕ್ಕಳು ವಿದ್ಯಾಭ್ಯಾಸ ಹಾಗೂ ಇತರೆ ಉದ್ಯೋಗಗಳಲ್ಲಿ ತೊಡಗಿಕೊಳ್ಳುತ್ತಿರುವುದು ಕಂಡುಬರುತ್ತಿದೆ. ಮೇದ ಬುಡಕಟ್ಟು ಸಮುದಾಯಗಳು ಹಿಂದಿನ ಕಾಲದಿಂದಲೂ ಕಾಡಿನ ಅಂಚಿನಲ್ಲಿ ವಾಸಿಸುತ್ತಿದ್ದರು. ಆದರೆ ಸ್ವಾತಂತ್ರ್ಯ ನಂತರದ ಕಾಲದಲ್ಲಿ ಸರ್ಕಾರದ ವಿವಿಧ ಕಾಯ್ದೆ ಕಾನೂನು ಮತ್ತು ಕಟ್ಟಳೆಗಳಿಂದಾಗಿ, ಮೇದ ಸಮುದಾಯವು ಕಾಡಿನ ಅಂಚಿನಿಂದ ಇತರೆ ಭೂಭಾಗಗಳಿಗೆ ವಲಸೆ ಹೋಗಿ ವಾಸಿಸತೊಡಗಿದರು. ತಾವು ತಯಾರಿಸಿದ ವಿವಿಧ ವಸ್ತುಗಳನ್ನು ಮಾರಾಟ ಮಾಡಲು ನಗರ, ಪಟ್ಟಣಗಳಿಗೆ ಬಂದು, ಕ್ರಮೇಣ ನಗರ, ಪಟ್ಟಣಗಳಲ್ಲಿ ವಾಸಮಾಡುವುದನ್ನು ರೂಢಿಸಿಕೊಂಡರು. ಕಾಡುಗಳ ಅಂಚಿನಲ್ಲಿ ವಾಸಮಾಡುತ್ತಿದ್ದ ಕಾಲದಲ್ಲಿ ಅವರು ತಮ್ಮ ಮಾಂಸಹಾರಕ್ಕಾಗಿ ಕಾಡಿನಲ್ಲಿರುವ ಮೊಲ, ಜಿಂಕೆ, ಕಾಡುಹಂದಿಗಳು ವಿವಿಧ ರೀತಿಯ ಪಕ್ಷಿಗಳನ್ನು ಬೇಟೆಯಾಡಿ ಮಾಂಸಹಾರ ಅಡುಗೆಯನ್ನು ಮಾಡಿ ತಿನ್ನುತ್ತಿದ್ದರು. ಆದರೆ ಸ್ವಾತಂತ್ರ್ಯ ನಂತರದ ಕಾಲದಲ್ಲಿ ಬೇಟೆಯಾಡುವುದನ್ನು ನಿಷೇಧಿಸಿರುವುದರಿಂದ ತಮ್ಮ ಮಾಂಸಹಾರದ ಅಡುಗೆಗಳಿಗಾಗಿ, ಮಾಂಸಹಾರಕ್ಕಾಗಿ, ಕೋಳಿ, ಕುರಿಗಳನ್ನು ಸಾಕುವುದರ ಮೂಲಕ ತಮ್ಮ ಮಾಂಸಹಾರದ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದಾರೆ. ಅಲ್ಲದೆ, ವಿವಿಧ ರೀತಿಯ ಮಾಂಸಹಾರಗಳನ್ನು ಖರೀದಿಸಿ ತಂದು ಮಾಂಸಹಾರ ಅಡುಗೆಯನ್ನು ಮಾಡಿ ಸೇವಿಸುತ್ತಾರೆ.

ಮೇದರು ತಮ್ಮ ಮೂಲ ವೃತ್ತಿಯ ಜೊತೆಗೆ ಕೃಷಿಯನ್ನು ಕೂಡ ಮಾಡುತ್ತಿದ್ದಾರೆ. ಈಗಲೂ ಕೂಡ ಅಲ್ಲಲ್ಲಿ ತಮ್ಮ ಕುಲಕಸುಬಿನ ಜೊತೆಗೆ ಕೃಷಿಯನ್ನೂ ಕೂಡ ಮಾಡುತ್ತಿದ್ದಾರೆ. ಕೃಷಿಯ ಜೊತೆಗೆ ಹೈನುಗಾರಿಕೆಯಲ್ಲೂ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಹಳ್ಳಿಗಳಲ್ಲಿನ ಮೇದರು ಹಸು, ಎಮ್ಮೆ, ಕುರಿ, ಕೋಳಿಗಳನ್ನು ಸಾಕುತ್ತಿರುವುದು ಕಂಡು ಬರುತ್ತಿದೆ. ಇತ್ತೀಚಿಗೆ ಸ್ವಂತ ಭೂಮಿಯನ್ನು ಖರೀದಿಸಿ ಅದರಲ್ಲಿ ಕೃಷಿ ಮಾಡುತ್ತಿರುವುದು, ವಾಣಿಜ್ಯ ಬೆಳೆಗಳನ್ನು, ತೋಟಗಾರಿಕೆ ಬೆಳೆಗಳನ್ನು ಬೆಳೆಯುತ್ತಿರುವುದು ಕಂಡುಬರುತ್ತಿದೆ. ಇದರಿಂದ ಲಾಭವನ್ನು ಪಡೆಯುತ್ತಿದ್ದಾರೆ. ರಾಗಿ,

ಭತ್ತ, ತೊಗರಿ ಇತ್ಯಾದಿ ಬೆಳೆಗಳು ಹಾಗೂ ತರಕಾರಿ ಬೆಳೆಗಳು ಮತ್ತು ಹೂವು ಹಣ್ಣುಗಳನ್ನು ಬೆಳೆಯುತ್ತಾರೆ.

ಬೇಸಾಯವನ್ನು ಮಾಡುವ ಮೇದರು ಭತ್ತ, ರಾಗಿ, ಜೋಳ, ತೊಗರಿ, ಅವರೆ ಇತ್ಯಾದಿ ಬೆಳೆಗಳನ್ನು ಬೆಳೆದು ಸಂಗ್ರಹಣೆ ಮಾಡುತ್ತಾರೆ. ರಾಗಿ, ಭತ್ತವನ್ನು ಬಿದಿರುಗಳ ಬಿದಿರಿನ ಕಣಜಗಳಲ್ಲಿ ತುಂಬಿ ಇಟ್ಟಿರುತ್ತಾರೆ ಹಾಗೂ ಇತರೆ ಪದಾರ್ಥಗಳನ್ನು ಚೀಲಗಳಲ್ಲಿ ಸಂಗ್ರಹಿಸಿ ಇಟ್ಟುಕೊಳ್ಳುತ್ತಾರೆ. ಮೇದರರು ತಾವು ತಯಾರಿಸಿದ ವಸ್ತುಗಳನ್ನು ಕೊಟ್ಟು ಇತರರಿಂದ ದವಸ, ಧಾನ್ಯಗಳನ್ನು ಪಡೆಯುತ್ತಾರೆ. ಇಲ್ಲವೇ ಬೇರೆಯವರಿಂದ ಕೊಂಡುಕೊಳ್ಳುತ್ತಾರೆ. ಕಾಡಿನ ಅಂಚಿನಲ್ಲಿ ಸಿಗುವ ಜೇನು, ಗೆಡ್ಡೆಗೆಣಸು, ನೆಲ್ಲಿಕಾಯಿ, ಮಾವಿನಕಾಯಿ, ಮಾವಿನಹಣ್ಣುಗಳು, ಅಮಟೆಕಾಯಿ ಇತ್ಯಾದಿಗಳನ್ನು ಬಳಸುತ್ತಾರೆ. ಮಾವಿನ ಕಾಯಿಯಿಂದ ಉಪ್ಪಿನಕಾಯಿಗಳನ್ನು ತಯಾರಿಸಿಕೊಳ್ಳುತ್ತಾರೆ. ತಮ್ಮ ಜಮೀನಿನಲ್ಲಿ ಹಾಗೂ ಮನೆಯ ಹತ್ತಿರ ಹಾಗಲಕಾಯಿ, ಬೆಂಡೆಕಾಯಿ, ಹಲಸಂದೆ, ಬಸಳೆಸೊಪ್ಪು, ಹರಿವೆಸೊಪ್ಪು, ಬದನೆಕಾಯಿ, ಟೊಮ್ಯಾಟೊ, ಸೋರೆಕಾಯಿ, ಹೀರೆಕಾಯಿ, ಸೌತೆಕಾಯಿ ಮುಂತಾದ ತರಕಾರಿಗಳನ್ನು ಬೆಳೆಯುತ್ತಾರೆ ಮತ್ತು ಬಳಸುತ್ತಾರೆ. ಕಾಡಿನ ಪರಿಸರದಲ್ಲಿ ಸಿಗುವ ಗೆಡ್ಡೆಗೆಣಸುಗಳನ್ನು ಬಳಸುತ್ತಾರೆ.

ಮೇದರು ತಮ್ಮ ಜೀವನವನ್ನು ಮಾಡಲು ಬೇರೆ ಬೇರೆ ಕೆಲಸ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ನಗರ, ಪಟ್ಟಣಗಳಲ್ಲಿ ವಾಸ ಮಾಡುತ್ತಿರುವ ಮೇದರು ನಗರ ಸಂಪರ್ಕಕ್ಕೆ ಬಂದು ಆಧುನಿಕ ಸಮಾಜದಲ್ಲಿ ವಿವಿಧ ರೀತಿಯ ಉದ್ಯೋಗಗಳಲ್ಲಿ ದುಡಿಯುತ್ತಿದ್ದಾರೆ. ಗಾರೆಕೆಲಸ, ಬಣ್ಣ ಬಳಿಯುವುದು, ಗೃಹೋಪಯೋಗಿ ವಸ್ತುಗಳನ್ನು ಮಾರುವುದು, ಬ್ಯಾಂಕ್ ಉದ್ಯೋಗಗಳು, ಫ್ಯಾಕ್ಟರಿ ಉದ್ಯೋಗಗಳು, ಬಟ್ಟೆ ವ್ಯಾಪಾರ, ಸೀಮೆ ಎಣ್ಣೆ ವ್ಯಾಪಾರ, ಆಟೋಗಳ ಬಾಡಿಗೆ ಸಂಚಾರ, ಶಿಕ್ಷಕ ವೃತ್ತಿ, ವೈದ್ಯ ವೃತ್ತಿ, ನರ್ಸಿಂಗ್ ವೃತ್ತಿಗಳು, ಮೇಸ್ತ್ರಿಗಳು, ಕಾರು, ಲಾರಿಗಳನ್ನು ಓಡಿಸುವುದು, ಕಾರುಗಳನ್ನು ಬಾಡಿಗೆಗಾಗಿ ಓಡಿಸುವುದು, ವಿವಿಧ ಅಂಗಡಿಗಳಲ್ಲಿ ಕೆಲಸ ಮಾಡುವುದು, ಸರ್ಕಾರಿ ಕೆಲಸಗಳು, ಖಾಸಗಿ ಕೆಲಸಗಳು, ಕಂಟ್ರಾಕ್ಟ್ ಕೆಲಸಗಳು ಇತ್ಯಾದಿ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಲ್ಲದೆ, ಪೋಲೀಸ್ ಪೇದೆ, ಜವಾನ, ಡ್ರೈವರ್, ಗುಮಾಸ್ತ ಇತ್ಯಾದಿ ಕೆಲಸಗಳನ್ನು ಮಾಡುತ್ತಿದ್ದಾರೆ. ಹಳ್ಳಿಗಳಲ್ಲಿ ವಾಸಮಾಡುವವರು, ಹೈನುಗಾರಿಕೆಯನ್ನು ಮಾಡುತ್ತಿದ್ದಾರೆ. ಸರ್ಕಾರದಿಂದ ವಿವಿಧ ಸಾಲ, ಸೌಲಭ್ಯಗಳನ್ನು ಪಡೆದುಕೊಂಡು ಹಸುಸಾಕಾಣಿಕೆ, ಕೋಳಿ ಸಾಕಾಣಿಕೆ, ಕುರಿ ಸಾಕಾಣಿಕೆ ಇತ್ಯಾದಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಾರೆ. ಮೇದರು ತಮ್ಮದೇ ಆದ ಸಂಘ, ಸಂಸ್ಥೆಗಳನ್ನು ಮಾಡಿಕೊಂಡು ಅದರ ಮೂಲಕ ತಮ್ಮ ಕರಕುಶಲ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ತಾಲ್ಲೂಕು, ನಗರ ಪಟ್ಟಣಗಳು, ಜಿಲ್ಲಾ ನಗರ ಪಟ್ಟಣಗಳು, ವ್ಯಾಪಾರ ವಹಿವಾಟು ನಡೆಯುವ ಪ್ರದೇಶಗಳಲ್ಲಿ ವಾಸಿಸುತ್ತಿರುವ ಇವರು ತಮ್ಮದೇ ಆದ ಮೇದರ ಕೇರಿ, ಬೊಂಬು ಬಜಾರ್‌ಗಳನ್ನು ಸ್ಥಾಪಿಸಿಕೊಂಡು ವಾಸಿಸುತ್ತಿದ್ದಾರೆ. ಇಂತಹ ವ್ಯಾಪಾರ, ವ್ಯವಹಾರಗಳಿಂದಲೇ

ಮೇದರರಲ್ಲಿ ಕೆಲವರು ಶ್ರೀಮಂತರಾಗಿದ್ದಾರೆ. ಮಧ್ಯಮ ವರ್ಗದವರು, ಸಾಮಾನ್ಯ ವರ್ಗದವರೂ ಇದ್ದಾರೆ. ಬದಲಾದ ಕಾಲಘಟ್ಟಗಳಿಗೆ ಅನುಗುಣವಾಗಿ ಮೇದರರು ಕೂಡ ಬದಲಾಗುತ್ತಿದ್ದಾರೆ.

**೩.೮. ಸಾಹಿತ್ಯ ಮತ್ತು ಭಾಷೆ**

ಮೇದರು ಆಯಾ ಪ್ರದೇಶಕ್ಕೆ ಅನುಗುಣವಾಗಿ ತಮ್ಮ ಭಾಷೆಯನ್ನು ಬಳಸುತ್ತಾರೆ. ಮೇದರರು ಬಹುತೇಕವಾಗಿ ಕನ್ನಡ ಭಾಷೆಯನ್ನೇ ಮಾತನಾಡುತ್ತಾರೆ. ಅಲ್ಲಲ್ಲಿ ತೆಲುಗು, ತಮಿಳು, ಮಲೆಯಾಳಿ ಭಾಷೆಗಳನ್ನು ಬಳಸುತ್ತಿರುವುದು ಕಂಡುಬರುತ್ತಿದೆ. ಯತೇಚ್ಛವಾಗಿ ಕನ್ನಡ ಭಾಷೆಯನ್ನೇ ಮೇದರರು ಬಳಸುತ್ತಾರೆ. ತಮ್ಮ ಸಮುದಾಯದ ಕುಟುಂಬಗಳಲ್ಲಿ ಕನ್ನಡ ಭಾಷೆಯನ್ನೇ ಹಿರಿಯರಾದಿಯಾಗಿ, ಕುಟುಂಬದ ಸದಸ್ಯರೆಲ್ಲರೂ ಬಳಸುತ್ತಾರೆ. ಆಧುನಿಕ ಶಿಕ್ಷಣ ಪದ್ಧತಿಯ ಮೂಲಕ ಪಡೆದ ಶಿಕ್ಷಣದ ಪ್ರಭಾವದಿಂದಾಗಿ, ಇಂಗ್ಲೀಷ್, ಹಿಂದಿ ಹಾಗೂ ಇತರೆ ಭಾಷೆಗಳನ್ನೂ ಕೂಡ ಬಳಸುತ್ತಾರೆ. ಮೇದರು ತಮ್ಮದೇ ಆದ ಜಾನಪದ ಸಾಹಿತ್ಯವನ್ನು ಹೊಂದಿದ್ದಾರೆ. ವಿವಿಧ ಹಬ್ಬ ಹರಿದಿನಗಳಲ್ಲಿ ಹಾಡುವುದು, ಹಾಡುವುದರ ಮೂಲಕ ಕುಣಿಯುವುದನ್ನು ಮಾಡುತ್ತಾರೆ. ಜಾನಪದ ಹಾಡುಗಳು, ಜಾನಪದ ಲಾವಣಿ, ಹಾಡುಗಳು, ಕಥೆಗಳು, ಒಗಟುಗಳು, ಗಾದೆಗಳು ಇತ್ಯಾದಿಗಳನ್ನು ತಮ್ಮ ದಿನನಿತ್ಯದ ಮನರಂಜನೆಗೆ ಜಾನಪದ ಸಾಹಿತ್ಯವನ್ನು ಬಳಸಿಕೊಳ್ಳುತ್ತಿದ್ದಾರೆ. ಆಧುನಿಕ ಕಾಲದಲ್ಲಿ ಇಂತಹ ಜಾನಪದ ಸಾಹಿತ್ಯವು ಕಣ್ಮರೆಯಾಗುತ್ತಿರುವುದು ಕಂಡುಬರುತ್ತಿದೆ. ಮಂಡ್ಯದ ಕೆ.ಎ. ಪರಾಂಡೆಯವರು ತಮ್ಮ 'ಕೇತೇಶ್ವರ ವಾಣಿ' ಪತ್ರಿಕೆಯಲ್ಲಿ ಇಂತಹ ಹಲವಾರು ಸಾಹಿತ್ಯಗಳನ್ನು ಪ್ರಕಟಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಮೇದಾರ ಕೇತಯ್ಯನಿಂದ ರಚಿತವಾದ ವಚನಗಳೂ ಕೂಡ ಮೇದರರ ಸಾಹಿತ್ಯವೆಂದು ಕರೆಸಿಕೊಳ್ಳುತ್ತದೆ. ಮೇದರುಗಳ ಸಾಹಿತ್ಯವು ಜಾನಪದ ಸಂಪ್ರದಾಯದಂತೆ, ಬಾಯಿ ಮಾತಿನಿಂದ ಬಾಯಿ ಮಾತಿಗೆ ಪ್ರಸರಣಗೊಂಡು ಬಂದಿವೆ. ಜಾನಪದ ಸಾಹಿತ್ಯದ ಬರವಣಿಗೆಯ ಕಾರ್ಯವು ಕೂಡ ನಡೆದುಕೊಂಡು ಬಂದಿದೆ. ಈ ಸಮುದಾಯದ ಆಚಾರ ವಿಚಾರಗಳನ್ನು ಸಂಪ್ರದಾಯಗಳನ್ನು ಇವರ ಸಾಹಿತ್ಯವು ಪ್ರತಿಬಿಂಬಿಸುತ್ತದೆ.

**ಮೇದರ ಕೇತಯ್ಯನವರ ವಚನಗಳು**

ಮೇದರ ಕೇತಯ್ಯನವರು ಹನ್ನೆರಡನೇ ಶತಮಾನದಲ್ಲಿನ ವಚನಕಾರರಲ್ಲಿ ಪ್ರಮುಖರು. ಬಸವಣ್ಣನವರು ಪ್ರಾರಂಭಿಸಿದ ಅನುಭವ ಮಂಟಪದಲ್ಲಿ ವಚನಕಾರ ಅಲ್ಲಮ ಪ್ರಭುದೇವರು ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದರು. ಮೇದರ ಕೇತಯ್ಯನವರು ಈ ವಚನಗಳನ್ನು ರಚಿಸಿದ್ದಾರೆ. ಅನೇಕ ಶತಮಾನಗಳಿಂದ ಈ ವಚನಗಳು ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ.

೧. ಅರಿವಿನ ಕುಳವನರಿಯೆ
ಮರಹಿನ ತೆರನನರಿಯೆ
ಅರಿವು, ಮರಹಳಿದ
ಗವರೇಶ್ವರ ಲಿಂಗಕ್ಕೆ ಅರಿವೇ

ಅರ್ಪಿತ, ಮರವೇ ಅನರ್ಪಿತ
ಮೊರನ ಹೆಣೆವ ಗೌರ,
ನಾನೆತ್ತ ಬಲ್ಲೆನಯ್ಯಾ

೨. ಇಂದ್ರಿಯಂಗಳ
ಕೊಂದೆನೆಂದೆಡೆ, ಅವು
ಕಂದರ್ಪನ ಹಂಗು
ಕಂದರ್ಪನ ಕೊಂದೆನೆಂದಡೆ,
ಅವು ಕಂಗಳ ಲಾಭ
ಕಂಗಳು ಮುಚ್ಚಿಯಲ್ಲದೆ ಲಿಂಗವ
ಕಾಣಬಾರದು
ಅದು ನಿರಂಗಂಗಲ್ಲದೆ, ಜಗದ
ಹಂಗಿನವರಿಗಿಲ್ಲಾ ಎಂದೆ,
ಗವರೇಶ್ವರಾ

೩. ಎನ್ನ ಘ್ರಾಣದಲ್ಲಿ ಆಚಾರ ಲಿಂಗವಾಗಿ
ಮೂರ್ತಿಗೊಂಡನಯ್ಯಾ, ಬಸವಣ್ಣನು
ಎನ್ನ ಜಿಹ್ವೆಯಲ್ಲಿ ಗುರುಲಿಂಗವಾಗಿ
ಮೂರ್ತಿಗೊಂಡನಯ್ಯಾ ಚನ್ನಬಸವಣ್ಣನು
ಎನ್ನ ನೇತ್ರದಲ್ಲಿ ಶಿವಲಿಂಗವಾಗಿ ಮೂರ್ತಿಗೊಂಡನಯ್ಯಾ,
ಘಟ್ಟಿವಾಳ ಮುದ್ದಯ್ಯನು ಎನ್ನ ತ್ವಕ್ಕಿನಲ್ಲಿ ಜಂಗಮಲಿಂಗವಾಗಿ
ಮೂರ್ತಿಗೊಂಡನಯ್ಯಾ, ಸಿದ್ದರಾಮಯ್ಯನು
ಎನ್ನ ಶ್ರೋತ್ರದಲ್ಲಿ ಪ್ರಸಾದಲಿಂಗವಾಗಿ
ಮೂರ್ತಿಗೊಂಡನಯ್ಯಾ, ಮರುಳಶಂಕರದೇವರು,
ಎನ್ನ ಹೃದಯದಲ್ಲಿ ಮಹಾಲಿಂಗವಾಗಿ
ಮೂರ್ತಿಗೊಂಡನಯ್ಯಾ, ಪ್ರಭುದೇವರು
ಎನ್ನ ಸರ್ವಾಂಗದಲ್ಲಿ ಮೂರ್ತಿಗೊಂಡರು ಪ್ರಮಥರು.
ಗವರೇಶ್ವರಲಿಂಗದಲ್ಲಿ ಸುಖಿಯಾಗಿ ಬದುಕಿದೆನು
ಕಾಣಾ, ಮಡಿವಾಳ ಮಾಚಯ್ಯ.

೪. ಎನ್ನ ಭಕ್ತಿ, ಬಸವಣ್ಣನಲ್ಲಿ ಬಯಲಾಯಿತ್ತು
ಎನ್ನ ಜ್ಞಾನ ಚೆನ್ನಬಸವಣ್ಣನಲ್ಲಿ ಬಯಲಾಯಿತ್ತು
ಎನ್ನ ವೈರಾಗ್ಯ ಪ್ರಭುದೇವರಲ್ಲಿ ಬಯಲಾಯಿತ್ತು
ಇಂತೀ ಮೂವರು ಒಬ್ಬರೊಂದ ಬಯಲ ಮಾಡಿದವರಾಗಿ
ಗವರೇಶ್ವರ ಲಿಂಗದಲ್ಲಿ ನಿಶ್ಚಿಂತವಾಯಿತ್ತು

೫. ಎನ್ನ ಪ್ರಾಣಕ್ಕೆ ಆಚಾರಲಿಂಗವಾದಾತ ಬಸವಣ್ಣ
ಎನ್ನ ಜಿಹ್ವೆಗೆ ಗುರುಲಿಂಗವಾದಾತ ಬಸವಣ್ಣ
ಎನ್ನ ನೇತ್ರಕ್ಕೆ ಶಿವಲಿಂಗವಾದಾತ ಬಸವಣ್ಣ
ಎನ್ನ ಶ್ರೋತ್ರಕ್ಕೆ ಪ್ರಸಾದಲಿಂಗವಾದಾತ ಬಸವಣ್ಣ
ಎನ್ನ ಹೃದಯಕ್ಕೆ ಮಹಲಿಂಗವಾದಾತ ಬಸವಣ್ಣ

ಇಂತಿದನರಿದೆನಾಗಿ ಗವೇಶ್ವರಲಿಂಗದಲ್ಲಿರ್ದೆನಯ್ಯಾ

೬. ಎನ್ನ ಆಧಾರಚಕ್ರದಲ್ಲಿ ಆಚಾರಲಿಂಗವಾದಾತ ಬಸವಣ್ಣ
ಎನ್ನ ಸ್ವಾಧಿಷ್ಠಾನ ಚಕ್ರದಲ್ಲಿ ಗುರುಲಿಂಗವಾದಾತ ಬಸವಣ್ಣ
ಎನ್ನ ಮಣಿಪೂರಕ ಚಕ್ರದಲ್ಲಿ ಶಿವಲಿಂಗವಾದಾತ ಬಸವಣ್ಣ
ಎನ್ನ ಪಾಣಿಯಲ್ಲಿ ಜಂಗಮಲಿಂಗವಾದಾತ ಬಸವಣ್ಣ
ಎನ್ನ ವಾಕ್ಕಿನಲ್ಲಿ ಪ್ರಸಾದಲಿಂಗವಾದಾತ ಬಸವಣ್ಣ
ಎನ್ನ ನಿಃಪ್ರಪಂಚದಲ್ಲಿ ಮಹಾಲಿಂಗವಾದಾತ ಬಸವಣ್ಣ
ಇಂತಿದನರಿದೆನಾಗಿ ಗವಶ್ವೇರಲಿಂಗದಲ್ಲಿರ್ದೆನಯ್ಯಾ

೭. ಎನ್ನ ಕಾಯದ ಕಳವಳವ ನಿಲಿಸಿ, ಗುರುಲಿಂಗವ ತೋರಿದ
ಎನ್ನ ಮನದ ವ್ಯಾಕುಳವ ನಿಲಿಸಿ, ಜಂಗಮಲಿಂಗವ ತೋರಿದ
ಇಂತು ಅಂತರಂಗ ಬಹಿರಂಗದಲ್ಲಿ ತಾನೆಯಾಗಿ, ಎನ್ನ ಪಾವನವ ಮಾಡಿದ,
ಅಮರ ಗಣಂಗಳು ಮುನಿದು ಎನ್ನ ಕೈಲಾಸಕ್ಕೆ ಒಯ್ದಡೆ ಸದ್ಯೋನ್ಮುಕ್ತಿಯ
ತೋರಲೆಂದು ಮರ್ತ್ಯಕ್ಕೆ ಮರಳಿ ತಂದ
ಸಂಗನಬಸವಣ್ಣನೆ ಗುರುವೆನೆಗೆ, ಸಂಗನ ಬಸವಣ್ಣನೆ ಪರವೆನಗೆ
ಸಂಗನ ಬಸವಣ್ಣನ ಕರುಣದಿಂದ, ಘನಕ್ಕೆ ಘನಮಹಿಮ ಅಲ್ಲಮಪ್ರಭುವಿನ
ಶ್ರೀಪಾದವ ಕಂಡು ಬದುಕಿದೆನು ಕಾಣ ಗವರೇಶ್ವರಾ.

೮. ಎನ್ನ ಚಿತ್ತಕ್ಕೆ ಆಚಾರಲಿಂಗವಾದಾತ, ಬಸವಣ್ಣ
ಎನ್ನ ಬುದ್ಧಿಗೆ ಗುರುಲಿಂಗವಾದಾತ, ಬಸವಣ್ಣ
ಎನ್ನ ಅಹಂಕಾರಕ್ಕೆ ಶಿವಲಿಂಗವಾದಾತ, ಬಸವಣ್ಣ
ಎನ್ನ ಮನಕ್ಕೆ ಜಂಗಮಲಿಂಗವಾದಾತ, ಬಸವಣ್ಣ
ಎನ್ನ ಜೀವಕ್ಕೆ ಪ್ರಸಾದಲಿಂಗವಾದಾತ, ಬಸವಣ್ಣ
ಎನ್ನ ಅರುವಿಂಗೆ ಮಹಾಲಿಂಗವಾದಾತ, ಬಸವಣ್ಣ
ಎನ್ನ ಸ್ಥೂಲತನುವಿಂಗೆ ಇಷ್ಟಲಿಂಗವಾದಾತ, ಬಸವಣ್ಣ
ಎನ್ನ ಸೂಕ್ಷ್ಮತನುವಿಂಗೆ ಪ್ರಾಣಲಿಂಗವಾದಾತ, ಬಸವಣ್ಣ
ಎನ್ನ ಕಾರಣತನುವಿಂಗೆ ತೃಪ್ತಿಲಿಂಗವಾದಾತ, ಬಸವಣ್ಣ
ಇಂತೆಂದರಿದೆನಾಗಿ ಗವರೇಶ್ವರ ಲಿಂಗದಲ್ಲಿ
ಆನು ಸುಖಿಯಾಗಿರ್ದೆನಯ್ಯಾ.

೯. ಒಂದು ಬಿದಿರಿಂಗೆ ಕವೆ ಮೂರು
ಆ ಕವೆಯ ಒಳಗೆ ಲಕ್ಷ ಸಿಬಿರು
ಮೂರು ಕವೆಯ ಕೊಚ್ಚಿಸಿ ಬಿಲ್ಲ ಸಿಕ್ಕ ಬಿಡಿಸಿ,
ಸೀಳಿದ ಬಿದಿರ
ಹೊರೆಹೊರೆಯಲ್ಲಿ ನೆಯಿದೆ, ತೊಟ್ಟಿಲ ಸಂದ ಕಾಣದಂತೆ
ನಾಲ್ಕು ಕಾಲನಿಕ್ಕಿ ಅಂದ ಅಂದವಾದ ತೊಟ್ಟಿಲ ದಂಡೆಯ ನಿಕ್ಕಿ
ಕಟ್ಟುವುದಕ್ಕೆ ಶ್ರುತ ದೃಷ್ಟವೆಂಬೆರಡು ದಾರದಲ್ಲಿ ತೊಟ್ಟಿಲಕಟ್ಟಿ
ಗವರೇಶ್ವರಲಿಂಗಕ್ಕೆ ಹುಟ್ಟುಗೆಟ್ಟುಹೋಗೋ ಎಂದು ಜೋಗುಳವಾಡಿದೆ

೧೦. ಕರಣದ ಶರಣನ ಕಂಡಿಹೆ ಕೇಳಿಹೆ
ಉಂಡುಟ್ಟುದ್ದವಾಗಿ ಹೇಳಿ ಜೋಗೈಸಿಹೆನೆಂಬ

ಬಾಲರಿಗಿನ್ನೆಲ್ಲಿಯ ಅನುಭಾವ
ಪರಮಗುರುವೆ ಗವರೇಶ್ವರಾ.

೧೧. ಗುರು ಹುಸಿ, ಲಿಂಗ ದಿಟವೆನಲಿಲ್ಲ
ಲಿಂಗಹುಸಿ, ಜಂಗಮ ದಿಟವೆನಲಿಲ್ಲ
ಜಂಗಮಹುಸಿ, ಪಂಚಾಚಾರ ದಿಟವಿನಲಿಲ್ಲ
ಇಂತಿವರಂಗವನು ಗವರೇಶ್ವರ ಬಲ್ಲ

೧೨. ಪ್ರಾಣಸ್ಥಾನದಲ್ಲಿ ಆಪ್ಯಾಯನವಾಯಿತ್ತು, ಲಿಂಗ ಜಂಗಮ
ತನುಸ್ಥಾನದಲ್ಲಿ ಆಪ್ಯಾಯನವಾಯಿತ್ತು
ಆಚಾರ ಲಿಂಗಸ್ಥಲ, ಗುರುಲಿಂಗಸ್ಥಲ
ಈ ಉಭಯಸ್ಥಲ ನಿಃಸ್ಥಲವಾಗಿ
ತಾನೊಂದೇ ತೋರುತ್ತಿರ್ದಿತ್ತು
ಈ ತೋರುವ ತೋರಿಕೆಯ ಬಸವಣ್ಣನೆನಗೆ
ಆ ಬಸವಣ್ಣನ ಕರುಣದಿಂದ ಪ್ರಭುದೇವರ ಶ್ರೀಪಾದವ ಕಂಡು
ನಾನು ಬದುಕಿದೆನು ಕಾಣ ಗವರೇಶ್ವರಾ

೧೩. ಭಕ್ತಂಗೆ ಸುಖವೂ ಸರಿ, ದುಃಖವೂ ಸರಿ
ಉರಿ ಸಿರಿ ಉಭಯವೂ ಸರಿ ಎನ್ನದಿರ್ದಡೆ
ಭಕ್ತನಿಗದೇ ಹಾನಿ
ಜಂಗಮವೆಂದು ಪ್ರಮಾಣಿಸಿ
ತನ್ನ ಕಂಗಳ ಮುಂದೆ ಕಂಡವರ ಭಂಜಿಸಲಿಕ್ಕೆ
ತನ್ನಂಗವ ಹೊರೆದಡೆ ತೀರ್ಥ ಪ್ರಸಾದಕ್ಕೆ
ಅವನಂದೇ ಹೊರಗು ಗವರೇಶ್ವರಾ.

೧೪. ಮೊರನ ಹೊಲಿವ ಗವರ ನಾನೆತ್ತ ಬಲ್ಲೆನು?
ಕಟ್ಟಿಕೊಂಡಾತ ಭಕ್ತನಪ್ಪನೆ ಕೆಡಹಿದಾತ ದ್ರೋಹಿಯಪ್ಪನೆ?
ಆ ಲಿಂಗವು ಕಟ್ಟಲಿಕ್ಕೆ ತನ್ನ ಕೈಯಲ್ಲಿಪ್ಪುದೆ?
ಕೆಡಹಲಿಕೆ ಬೀಳಲು ಬಲ್ಲುದೆ?
ಆ ಲಿಂಗ ಬಿದ್ದ ಬಳಿಕ ಜಗತ್ತು ಉಳಿಯಬಲ್ಲುದೆ
ಆ ಪ್ರಾಣಲಿಂಗ ಬಿದ್ದ ಬಳಿಕ ಆ ಪ್ರಾಣ ಉಳಿಯಬಲ್ಲುದೆ
ಆ ಲಿಂಗ ಬಿದ್ದಿತ್ತೆಂಬ ಸೂತಕದ ಶಬ್ಧ ಬ್ರಾಂತುವಿನ ಮಂಜ
ಅಂತು ಅದ ಕೇಳಲಾಗದು
ಯುಗಜುಗಂಗಳು ಗತವಹವಲ್ಲದೆ ಲಿಂಗಕ್ಕೆ ಗತಉಂಟೆ?
ಲಿಂಗ ಬಿದ್ದಿತ್ತೆಂದು ನಿಂದಿಸಿ ನುಡಿವ ದ್ರೋಹಿಗಳ
ಮಾತಕೇಳಲಾಗದು ಗವರೇಶ್ವರಾ

೧೫. ಮೊದಲಿಲ್ಲದೆ ಲಾಭವುಂಟೆ?
ನಿರೀಕ್ಷಣೆಯಿಲ್ಲದೆ ಪರೀಕ್ಷೆಯುಂಟೆ?
ಗುರುವಿಲ್ಲದೆ ಲಿಂಗವುಂಟೆ?

ಇಂತೀ ವೇಷದ ಭಾಷೆಗೆ
ಹೇಸಿದೆನು ಕಾಣ ಗವರೇಶ್ವರಾ.

೧೬. ಮೊದಲು ಹುಸಿ ಲಾಭದಿಟವೆ?
ನಿರೀಕ್ಷಣೆಯಿಲ್ಲದೆ ಪರೀಕ್ಷೆ ಉಂಟೆ?
ಈ ಯಾವ ಸರದಂಗವ
ಗವರೇಶ್ವರಾ ಲಿಂಗ ನೀನೆ ಬಲ್ಲೆ?

**ಮಾದಪ್ಪನ ಕುರಿತ ಹಾಡು**

ಮಲ್ಲಿಗೆ ಹೂವಾಗಿ ಚೆಲ್ಲಿತು ನಿನ್ನ ಪರುಶೆ
ಚೆಲ್ಲಾಟಗಾರ ಮಾದಪ್ಪ। ಓಹೋ ಚೆಲ್ಲಾಟಗಾರ ಮಾದಪ್ಪ
ನಿನ್ನ ಪರುಷೆ ಕಲ್ಲತ್ತಿ ಕಣಿವೆ ಇಳಿದಾವು ।
ಮಾದಪ್ಪ ಬರುವಾಗ ಮಾಳೆಲ್ಲ ಘಂ ಎಂದು
ಮಾಳದಲ್ಲಿ ಗರಿಕೆ ಚಿಗುರ್‍ಯಾವೂ । ಹೋ
ಮಾದಪ್ಪ ಗರಿಕೆ ಚಿಗುರ್‍ಯಾವೋ ಮೇದಲ್ಲಿ ಮಳೆಯು
ಸುರಿದಾವೋ ।
ಹೊತ್ತು ಮುಳುಗಿದರೇನು ಕತ್ತಲಾದರೇನು
ಅಪ್ಪ ನಿನಗುಡಿಗೆ ಬರುವೇವು । ಅಪ್ಪ ನಿನ ಗುಡಿಗೆ
ಬರುವೇವೂ ಮಾದಪ್ಪ ಮುತ್ತಿನ ಬಾಗಿಲು ತೆರೆದೇವೋ ।
ಮಾದಪ್ಪನ ಮ್ಯಾಲೆ ಗಂಡುಲಿಯ ಬಿಗಿದಾನೆ
ಕುಂಡಲಿನ ಗೊಂಡೆಯ ಕಾವಿ ಬಿಗಿ ಮಾಡಿ
ಕುಂಡಲಿನ ಗೊಂಡೆಯ ಕಾವಿ ಬಿಗಿಮಾಡಿ ಮಾದಪ್ಪ
ಗಂಡುಲಿಯ ಮ್ಯಾಲೆ ಮೆರೆದಾನೆ ।

**ಸುಗ್ಗಿಯ ಹಾಡುಗಳು**

೧. ಹಂತಿಪದ ಕೊಂದಲನಿಂತು ಬೆನಕದ ಪೂಜೆ
ಹಂತಿಯೊಳು ಪೂಜೆ ಶರಣರಿಗೊಂದು ಹಂತೀಯ
ಶರಣರಿಗೆ ಒಕ್ಕಲಿಗ ಸ್ವಂತ ನೆನೆಯಿರಿ ಗಣಪನಿಗೆ

೨. ಮೂಡಣ ದಿಕ್ಕಿಗೆ ಮೂಡ್ಯಾವು ಎಂಬತ್ತು
ಕೂಡ್ಯಾವು ಎರಡು ಕೊನೆ ಹೋರಿ
ಕೂಡ್ಯಾವು ಎರಡು ಕೊನೆ ಹೋರಿ ಬಸವಣ್ಣ
ಮಾಡ್ಯಾವು ಎರಡು ಹಣೆ ಕೊಟ್ಟು

೩. ಬೆಳ್ಳನ್ನು ಎರಡೆತ್ತು ಬೆಳ್ಳಿಯ ಭಾರಹೊತ್ತು
ಬಂಗಾರದ ಬಲಗೈಯ್ಯಾಗ ಬಂಗಾರದ ಕಡ್ಡಿ

ಬಂಗಾರದ ಕಡ್ಡಿ ಬಲಗೈಯ್ಯಾಗ ಹಿಡಕೊಂಡು
ಹೊನ್ನ ಬಿತ್ತರು ಹೊಳಿಸಾಲು

೪. ತುಂಬಿದ ಹೊಳ್ಯಾಗ ಕುಂಬಾ ಕಾಣಿಸ್ತಾವು
ಬಂಗಾರದ ಏಣಿಯ ಬಸವಣ್ಣ ಬರುವಾಗ
ರಂಬ್ಯಾರರು ಆರತಿ ಬೆಳಗ್ಯಾರು

೫. ಅಕ್ಕ ತಂಗ್ಯಾರು ನಾವು ಹೆಚ್ಚೇನು ಕಡಿಮೇನು
ಸತ್ತ ಹೆತ್ತವರ ಸುರಗಿಯ ಸತ್ತ ಹೆತ್ಯವ್ವ
ಸುರಣೀಯ ಮೂಗುತಿ ನೀಡು ನನ್ನ ಹೆತ್ತಮ್ಮನ
ಎಡಬಲಕ

೬. ಅಕ್ಕ ತಂಗ್ಯೆರ ಜಗಳ ರೊಕ್ಕ ಬಾರಿಸಿದಾಂಗೆ
ಉಕ್ಕೇರಿ ನಲಿದು ಕುಣಿದಾಂಗೆ ಉಕ್ಕೇರಿನಲಿದು
ಕುಣಿದಾಂಗೆ ಸಂಜ್ಞಾನ ಗದುಗಿನ ತಾಸೆ ಒಡಿದಾಂಗೆ

೭. ಬೆಳ್ಳಾನ ಎರಡೆತ್ತು ಬೆಳ್ಳಿಯ ಬಾರಕೋಲು
ಬೆಳದಾಷ್ಟು ಹೊಲವ ಹಂಗ್ಯಾರಿ
ಬೆಳೆದಷ್ಟು ಹೊಲ ಹರಿಗ್ಯಾನ ನನ ತಮ್ಮ
ತೆಳ್ಳನ ನೋಟ ಹಸಿದಾವ

೮. ಬಸರೀಯ ಕಟ್ಟೇಲಿ ಬ್ಯಾವಿನ ಮರ ಎಲ್ಲಿ
ನ್ಯಾಯ ಹೇಳುವರ ಮನೆಯಲ್ಲಿ
ನ್ಯಾಯ ಹೇಳುವರ ಮನೆಯಲ್ಲಿ ನನ ತಮ್ಮ
ಮೂರು ಮುಕ್ಕಾಲೆ ಮುಗಿಸಾನ

೯. ಹಡೆದವ್ವ ಹಾಳೆಂದು ದಡದಡ ನಾ ಬಂದೆ
ಬಳಗ ಅಣ್ಣಯ್ಯನ ಮಡದೀಯ
ಬಳಗ ಅಣ್ಣಯ್ಯ ಮಡದೀಯ ದನಿ ಕೇಳಿ
ತಲೆಬಾಗಿಲಿಂದ ತಿರುಗೇನೆ

**ಬಸವಣ್ಣನ ಕುರಿತ ಹಾಡು**

ಗುಡ್ಡದ ಹುಲ್ಲಮೇದ ಗುಂಡಿ ನೀರ ಕುಡಿದು
ಗುತ್ತಿ ಕಂಡಲ್ಲಿ ಮಲಗವ್ನೆ । ಗುತ್ತಿ ಗಂಡಲ್ಲಿ ಮಲಗೋ
ಬಸವೇಶ್ವರನ ಬಸುಮ ತಿಂದಿರಿಸಿ ನಡುಮನೀಗೇ
ಹಸೆಯಕ್ಕರು ಮನೇಲಿ ಕಪ್ಪಿಲ್ಲ ಕಸ ಇಲ್ಲ
ಹೆಣ್ಣು ಮಕ್ಕಳೆಷ್ಟು ಚೆಲುವೇರು
ರದ ಹುಲ್ಲ ಮೈದು ಹಳ್ಳದ ನೀರ ಕುಡಿದು
ಹಾದಿ ಕಂಡಲ್ಲಿ ಮಲಗವ್ನೆ ಬಸವಣ್ಣ

ಹಸೆಯಕ್ಕರ ಮನೇಲಿ ಕಪ್ಪಿಲ್ಲ ಕಸ ಇಲ್ಲ
ಸೊಸೆಯೇರು ಇನ್ನೆಷ್ಟು ಚೆಲುವೇರು

**ಚಳ್ಳಕೆರೆಯ ಸುಶೀಲಾ ರಾಮದಾಸ್, ಲೇಖಕಿಯ ಕವಿತೆ**

**'ಬಿದಿರಮ್ಮನ ತಾರೆ'**

ಬಿದಿರಮ್ಮನ ತಾರೆ ಕೇಳಿ
ನಾನಾರಿಗಲ್ಲದವಳೇ ಬಿದಿರಮ್ಮನ ತಾರೆ ಕೇಳ
ಹುಟ್ಟುತ ಹುಲ್ಲನಾದೆ ಬೆಳೆಯುತ್ತ ಬಿದಿರನಾದೆ
ನಾನಾರಿಗಲ್ಲದವಳೆ ಬಿದಿರಮ್ಮನ ತಾರೆ ಕೇಳೆ
ಹುಟ್ಟುವ ಮಕ್ಕಳಿಗೆ ತೂಗುವ ತೊಟ್ಟಿಲಾದೆ
ಮುತ್ತೈದೆಯರಿಗೆ ಕೇರುವ ಮೊರನಾದೆ
ನಾನಾರಿಗಲ್ಲದವಳೆ ಬಿದಿರಮ್ಮನ ತಾರೆ ಕೇಳೆ
ಮದುವೆಯ ಮಾಡುವವರಿಗೆ ಹಂದರದ ಕಂಬವಾದೆ
ಮನೆ ಮಾರು ಕಟ್ಟುವವರಿಗೆ ಪದ ಜಂತಿ ನಾನಾದೆ
ನಾನಾರಿಗಲ್ಲದವಳೆ ಬಿದಿರಮ್ಮ ತಾರೆ ಕೇಳೆ
ಓದುವ ಮಕ್ಕಳಿಗೆ ಬರೆಯುವ ಪುಸ್ತಕವಾದೆ
ಮುಪ್ಪಾದ ಮುದುಕರಿಗೆ ಊರುಗೋಲಾದೆ
ಸಿದ್ಧಾರೂಡ ಸ್ವಾಮಿಗೆ ಬೆತ್ತದ ಛಡಿಯಾದೆ
ನಾನಾರಿಗಲ್ಲದವಳೆ ಬಿದಿರಮ್ಮನ ತಾರೆ ಕೇಳೆ
ಶೇಷಾದ್ರಿ ಶೇಷನಿಗೂ
ಮುರಳಿಯ ಮೋಹನನಿಗೂ ಊದುವ ಕೊಳಲನಾದೆ
ನಾನಾರಿಗಲ್ಲದವಳೆ ಬಿದಿರಮ್ಮನ ತಾರೆ ಕೇಳೆ

**ಲಕ್ಷ್ಮಣ ಮಲ್ಲಪ್ಪ ಮೇದ ಚಂದಾಪುರ, ಅವರ ಕವನ**

**'ಬಿದುರೆ'**

ಬಿದಿರು ಅಂದರೆ ತಿಳಿಕೊಳ್ಳು
ಅದರಲ್ಲೇ ನೀನು ಇರುತೀಯಲ್ಲ
ಜೀವನವನ್ನು ನಡೆಸುತೀಯಲ್ಲ
ಅದರಲ್ಲೆ ನೀ ಬದುಕುತೀಯಲ್ಲ
ಹುಟ್ಟಿದಾಗ ಇದು ಹುಲ್ಲಾಗಿರುತೈತ
ಬೆಳೆದು ನಿಂತಾಗ ಇದು ಬಿದುರಾಗತೈತಿ
ಮೇದನಿಗೆ ಇದು ಆಶ್ರಯ ಆಗತೈತಿ
ಜೀವನದುದ್ದಕ್ಕೂ ಇದು ಬೇಕಾಗತೈತಿ
ಮನುಷ್ಯ ಇದನ್ನು ಕಡಿತಾನ

ಮನೆಮಠ ಕಟ್ಟತಾನ
ಅದನ್ನ ಮಾರಿ ಬದುಕ್ತಾನ
ಜೀವನ ಅದರಿಂದ ಸಾಗಸ್ತಾನ
ಶರಣ ಮೇದಾರ ಕೇತಯ್ಯ
ಜೀವನ ನಡೆಸ್ದಾ ಬಿದಿರಿನಿಂದ
ಜಗಶ್ರೇಷ್ಠ ಕಾರ್ಯ ಇದೆಂದ
ಮೇದ ಜನಾಂಗದ ಆಧಾರೆಂದ
ನಾಡಿನ ತಾಯಿಗಳೆಲ್ಲ ಅಂತಾರ್ರೀ
ತನ್ನ ಕಂದನ ತೂಗುವಾರರ್ರೀ
ಮೇದರ ಕೇತಯ್ಯನ ತೊಟ್ಟಿಲಾರ್ರೀ
ಅದರಾಗ ನನ್ನ ಕಂದ ಆಡತೈತ್ರೀ
ಮೇದಾರ ಕ್ಯಾತಯ್ಯಗಳವನು ತಂದು
ಗಳದಿಂದ ಮಾಡಿದ ಬಂದದ ಒಂದು
ಕಂದನು ಆಡಲು ತೊಟ್ಟಿಲು ಒಂದು
ತಂದಳು ತಾಯಿ ಹೊಸ ತೊಟ್ಟಿಲೊಂದ
ನೂರು ವರ್ಷ ಬಾಳಬೇಕೇ
ತೊಟ್ಟಿಲ ಮಾಡಿದವರ್ರೀ
ಸಾರಿಸಾರಿ ಹೇಳನೇನ್ರೀ
ಚಂದಾಗಿ ಸಾಕ್ರಿ ಮಕ್ಕಳನ್ನಾರ್ರೀ.

**ಡಾ. ವೈ.ಟಿ. ಮೇದಾರ ಇವರ ಗೌರೇಶ್ವರನ ಕುರಿತ ಹಾಡು**

ನಿನ್ನಯ ಕಡುಬಡತನವಂ ನೋಡಿ
ಪೊಠಡಿಯೊಳು ಕನಕ(ದ್ರವ್ಯಂ) ಸುರಿದುಪೋಗೆ
ಕಾಯಕದಿಂ ಮರಳಿ ಬಂದು ನೋಡುತಿರೇ
ಇದೇನು ಪಾಪದ ಹುಳುವು ಬಿದ್ದಿದೆಯಲ್ಲಾ
ಐವಗಾಲ ಹಿಂಗುಪ್ಪದಿಂ ಪೊಗೆಯೇ ಸತಿಗೆ ಪೇಳಿ
ಪಾದೋದಕವ ಸಿಂಪಡಿಸಿ
ಕಾಯಕ ನಿಷ್ಠೆಯಂ ತೋರಿದ ಮಹಾ ಮಹಿಮನು ನೀನ್ಯೆ ॥
ಎಲೆ । ಬಸವನೇ ಹೊನ್ನು ಹೆಚ್ಚಾದರೆ ಹೀಗೆ ಮಾಡಬೇಕೇ
ಬಸವನ ಮೇಲೆ ರೇಗುತಿರೇ
ಇದೆಲ್ಲಾ ಶಿವನ ಸಂಕಲ್ಪವೆಂದು ಬಗೆದು
ಬಿದಿರಂ ಸೀಳಿ ಬುಟ್ಟಿಯಂ ಮಾಡಿ
ದಾಸೋಹ ಕೊಠಡಿಗೆ ನೀಡಿ
ಕಾಯಕದ ಪ್ರಸಾದವಂ ಕೊಂಡು ಕುಠಿರಕೆ ಬಂದು
ಶಿವಗಣಂಗಳ ಸಂತೃಪ್ತಿ ಪಡಿಸಿ

ಮಿಕ್ಕ ಪ್ರಸಾದವಂ ಶಿವ ಪ್ರಸಾದವೆಂದು
ಬಗೆದು ಜೀವಿಸಿದ್ದನ್ನ ಆ ವರಕೇತ ।
ಕಾಯಕ ನಿಷ್ಠೆಯಂ ಪರೀಕ್ಷಿಲೋಸುಗ
ಬಿದಿರು ಪೊಳೊಳ ಪೇಳಿಯಳು
ತುಂಬಿದನಾ ಮಹಾಶಕ್ತಿಂ ಹೊನ್ನನು ॥
ಪ್ರಾತಃಕಾಲ ಅಡವಿಗೆ ಹೋದನಾ ಕೇತ
ಬಿದಿರು ಕಡೆಯೇ ಇದೇನು ಹುಳುವು
ಎನಗೆ ಶಿವ ಪೂಜೆ
ಸಮಯವಾದರೂ ಗೋವರಿಸುತ್ತಿರುವುದಲ್ಲಾ ॥
ಅಯ್ಯೋ! ದೇವಾ
ನಿನಗೆ ಎಸಗಿದ ಪಾಪವಾದರೂ ಏನು?
ಪಸರಿದ ಪೊಳೆಯೊಳು ಪೊಕ್ಕು
ತಿಮಿರನೇ ಬೆಳೆದ ಬಿದಿರನೇ ಕಡಿಯೇ
ಆಯತಪ್ಪಿ ಜಾರಿ ಬೀಳುತಿರೆ ಬಿದಿರು
ಎದೆಯಾಳು ನಡುತಿರೇ
ಹಾ! ಎಂದು ನೆಲಕ್ಕೆ ಉರುಳಿದನಾ ಕೇತಾ ॥
ಪ್ರಾಣ ಹೋದರೆ ಪ್ರಮಥರಾಣೆ ।
ಎಂದು ಕುಟೀರಕ್ಕೆ ಬಂದು ಸಾಧ್ವಿಸತಿಯ
ತೊಡೆಯ ಮೇಲೆ ಎರಗುತಿರೇ
ಶೋಕ ಕಲ್ಪಿತವಾಯಿತು ಕಲ್ಯಾಣ ಪುರವು ॥
ಹಗಾರ ಮಾದಣನಿಂ
ರುದ್ರಶಕ್ತಿಯ ಮಾಚಯ್ಯನಿಗೆ ಸುದ್ಧಿ ತಲುಪುತಿರೇ
ಉರಿಪೆದ್ದನಾ! ಬಸವನ ಮೇಲೆ ರುದ್ರ ಅವತಾರದಿಂ
ಇಂತು ಶರಣನ ಪ್ರಾಣ ಪಕ್ಷಿ ಹೊರಡುತಲೀ
ಇನ್ನೂ ಜೀವಿಸಿದ್ದನಾ ಆ ಬಸವಾ
ವೀರಗಂಟಿ ಆಕಾಶಕ್ಕೆ ಬೀಡುತಿರೇ
ಶಿವಪುರವು ನಡುಗಿತು ಶಿವಶರಣರ
ಸಮೂಹವು ಕೂಡಿ ಬಸವ ಮೂರ್ಛೆವಾಗುತಿರೆ
ಇದಾವ ಪ್ರಸಂಗ ದೇವಾ
ಪಾರ್ವತಿಯು ಶಿವಗೆ ಕೇಳುತಿರೇ ಶರಣರು ಉರಿದೆದ್ದರೇ ಉಳಿದೀತೆ
ಶಿವಪುರವು ನೋಡು ಪ್ರಿಯೆ ಭಕ್ತರ ಕಾಯಕ ನಿಷ್ಠೆಯಾ
ಶಿವನು ಪ್ರತ್ಯಕ್ಷವಾಗಿ ಹರಸಿದನು
ಶಿವಭಕ್ತರನು ಕೇತಯ್ಯ ಬಸವನು ಶಿವಯೋಗ ನಿದ್ರೆಯಿಂ
ಎದ್ದು ಪ್ರಾರ್ಥಿಸುತಿರೇ ಕೇತನು ಅಮರ ಗಣಂಗಳು ಮುನಿದು
ಎನ್ನ ಕೈಲಾಸಕ್ಕೆ ಒಯ್ದಿರೇ ಮರ್ತ್ಯಕ್ಕೆ ಮರಳಿ ತಂದೆ

ಸಂಗನ ಬಸವಣ್ಣನ ಅಲ್ಲಿಯ ಪ್ರಭುವಂ ಸ್ತುತಿಸಿ
ಕಾಣಾ ಗೌರೇಶ್ವರಾ॥
ಶರಣ ಶಿವ ಕಾಯಕವ ಒರೆಗೆ ಹಚ್ಚುವರಾರು
ವರಸಹಿತ ಸೋಲು ಬದುಕಿನ ಮೇದಾರ
ವರಕೇತ ನಿನಗೆ ಸರಿಯಾರು?

ಮೇದರು ಈ ರೀತಿಯ ಅನೇಕ ಸಾಹಿತ್ಯಕೃತಿಗಳನ್ನು ರಚಿಸಿದ್ದಾರೆ. ಮೇದ ಸಮಾಜದ ಪತ್ರಿಕೆಗಳಾದ 'ಮೇದ ಗರ್ಜನೆ' 'ಕೇತೇಶ್ವರ ವಾಣಿ' ಪತ್ರಿಕೆಗಳಲ್ಲಿ ಕಾಲ, ಕಾಲಕ್ಕೆ ಅನೇಕ ಕವಿತೆ, ಕವನಗಳು, ಪದ್ಯಗಳು, ಹಾಡುಗಳು ಪ್ರಕಟವಾಗುತ್ತಿರುತ್ತವೆ. ಮೇದ ಸಮುದಾಯವು ಪಾರಂಪರಿಕವಾಗಿ ತನ್ನದೇ ಆದ ಬುಡಕಟ್ಟು ಸಾಹಿತ್ಯವನ್ನು ಹೊಂದಿದೆ. ಅಲ್ಲದೇ ಆಧುನಿಕ ಶಿಕ್ಷಣ ಪಡೆದ ಈ ಸಮುದಾಯದ ಜನರು, ವಿದ್ಯಾವಂತರು ಅನೇಕ ಸಾಹಿತ್ಯ ಕೃತಿಗಳನ್ನು ರಚಿಸುತ್ತಿದ್ದಾರೆ. ಪತ್ರಿಕೆಗಳಿಗೆ ಬರೆಯುತ್ತಿದ್ದಾರೆ.

**ಗಾದೆಗಳು**

ಹಿರಿಯರ ಅನುಭವದ ಮಾತುಗಳು

೧. ಮೇದ ಬದ್ಕು ಚಾಪ್ಯಾಗೈತಿ
೨. ಬಿದಿರು ಕುದ್ರೆ ಕೈಗಟ್ಟಿ
೩. ಬಿದ್ರಿಕಾಯ್ಕ ಶರಣ ಬದ್ಕು
೪. ಹೆಂಡ ಕುಡಿದಾಗ ಮೀಸೆಮ್ಯಾಲೆ ಕೈ ಮಳೆಬಿದ್ದಾಗ ಮನೆಮ್ಯಾಲೆ ಕೈ
೫. ಎಂಜಲಿಗೆ ಹೇಳ್ದವಳು ತಂಗಳು ಬಿಟ್ಟಾಳ
೬. ದೊಡ್ಡವ ತಿಂದ್ರೆ ಮದ್ದಿಗೆ ತಿಂದ ಬಡ್ವ ತಿಂದ್ರೆ ಹೊಟ್ಟಿಗಿಲ್ದೆ ತಿಂದ
೭. ಬೆಳೆದ್ರೆ ಬಾಳು ಬೆಳೆಯದಿದ್ರೆ ಹಾಳು
೮. ಶನಿಗೇಡಿ ಸಂತೆಗೋದ್ರೆ ಆಲಿಕಲ್ಲು ಮಳೆ ಬಂತು
೯. ಬೆಕ್ಕು ಹೋದ ಹಾದೀಲಿ ದೊಡ್ಡ ಹಾಡಿ ಹೋದೀತಾ
೧೦. ಕುಂತು ಉಂಡ್ರೆ ಕುಡಿಕೆ ಹೊನ್ನು ಸಾಲ್ದು

**ಕೆಲವು ನೀತಿವಾಕ್ಯಗಳು**

೧. ಆತ್ಮ ಕಾದು ಧರ್ಮ ತಲೆಕಾದುಮರ್ಮ
೨. ಜಿಮಣ ಗಳಿಸಿದ್ರೆ ಜಾಣ ಉಣ್ಣುತಾನೆ
೩. ನಿದ್ರೆ ಮರಣದ ಮರಿ
೪. ಶ್ರದ್ದೆ ಇದ್ದಲ್ಲಿ ಪ್ರಶಸ್ತಿ
೫. ಬಡವ ಬಡವನಿಗೇಕೆ ಒಡವೆ ಚಿಂತೆ
೬. ತಾನು ಬಾಳಲಾರದೆ ವಿಧಿಯ ಬೈದನಂತೆ
೭. ಅವತಾರ ಹೆಚ್ಚಿದಷ್ಟೂ ಅನಾಚಾರ ಹೆಚ್ಚು
೮. ತಾನೂ ತಿನ್ನ ಪರರಿಗೂ ಬಿಡ

೯. ಜಾತಿ ಬಿಟ್ರೂ ಸುಖ ಪಡಬೇಕು

೧೦. ಕಿಡಿ ಕಾಡು ಸುಡ್ತು

**ಮನುಷ್ಯರಿಗೆ ಸಂಬಂಧಿಸಿದ ಅನುಭವದ ಮಾತುಗಳು**

೧. ಗಾಯದ ಬನ್ನಿಗೆ ಗಾಯ್ವಾಗ್ತದೆ

೨. ಕಸ್ಬು ಮಾಡ್ತಾ ಮಾಡ್ತಾ ಹಾಳಾಗ್ತಾನಾ

೩. ಮನುಸ್ರ ನಂಬಿ ಉದ್ದಾರಾದಾನಾ

೪. ಜನ್ರ ರೊಕ್ಕ ಊರವ್ವನ ಪೂಜೆ

೫. ಅಮಾಸೇಲಿ ಬಂದವ್ನ ತಮಾಸೇ ನೋಡಾ

೬. ಪಟೇಲಿ ಮಾಡಂದ್ರೆ ಪ್ಯಾಟ್ಗೋದ್ನಂತೆ

೭. ನೀ ನಂಗಿದ್ರೆ ನಾ ನಿಂಗೆ

೮. ನೆಂಟರೊಳಗಣ ಸಾಲ ಮೆಟ್ಟಿನೊಳಗಣ ಕಲ್ಲಂಗೆ

**ಪ್ರಾಣಿ ಪಕ್ಷಿಗಳ ಬಗೆಗಿನ ನಂಬಿಕೆಗಳ ಮಾತುಗಳು**

೧. ನಾಯಿ ಬಾಲ ಡೊಂಕು

೨. ಹಂದಿ ಹೈದನಾ

೩. ಕತ್ತೆ ಹುಲಿವೇಷ ತೊಟ್ಟಂಗೆ

೪. ಮೊಲ ಹಿಡಿಯೋ ನಾಯಿ ಹೇಲು ಕಂಡು ಓಡ್ತು

೫. ಬಯಕೆ ತೀರ್ಸಾಕೆ ಮುಳ್ಳು ಮೀನು ತಿಂದ್ನಂತೆ

೬. ಹಳ್ದು ಹಳ್ದು ಹಳೆ ಹಂದಿ ತಿಂದ್ನಂತೆ

೭. ಬೆಕ್ಕು ಹೋಗೋ ಹಾದೀಲಿ ಗಾಡಿ ಹೋದೀತಾ

**ಒಗಟುಗಳು**

೧. ಅಕ್ಕ ತಂಗಿಯ ಮನೆಗೆ ಹೋಗುವ ಹಾಗಿಲ್ಲ
ತಂಗಿ ಅಕ್ಕನ ಮನೆಗೆ ಹೋಗುವ ಹಾಗಿಲ್ಲ
ಆದ್ರೆ ಇಬ್ಬರ ಮನೇನೂ ಅಕ್ಕಪಕ್ಕದಲ್ಲೇ– ಕಣ್ಣುಗಳು

೨. ಬಣ್ಣವಿದೆ ವರ್ಣಪಕ್ಷಿಯಲ್ಲ
ನಾಲಿಗೆಗಳೆರಡಿವೆ ಜಗಳಗಂಟಿಯಲ್ಲ
ಹೊಟ್ಟೆಯೊಳಗೆ ವಿಷವಿದೆ ನಾಗ ಸರ್ಪವಲ್ಲ
ಎಲ್ಲರ ಮನೋಗತ ತಿಳಿಸುವೆನು ನಾನ್ಯಾರು?– ಲೇಖನಿ

೩. ಅಗಸ ಮಾಡದ ಮಡಿ
ಸೂರ್ಯ ಕಾಣದ ಗಂಗೆ
ಕುಂಬಾರ ಮಾಡದ ಮಡಕೆ– ತೆಂಗಿನಕಾಯಿ

೪. ಹರಕು ಸೀರೆ ಉಟ್ಟುಕೊಂಡು
ಹತ್ತು ಮಕ್ಕಳ ಎತ್ತಿಕೊಂಡು
ದೊರೆ ಜೊತೇಲಿ ಊಟ ಮಾಡ್ತಾಳೆ- ಬೆಳ್ಳುಳ್ಳಿ

೫. ಅಡಿಕಂಚಿನ ತೇರು
ಮೇಲೆ ಹೂವಿನ ತೇರು
ಐದು ಜನ ಅಕ್ಕ ತಂಗೇರೆ
ಅದರಲ್ಲಿ ಆಟಾವಾಡ್ತಾರೆ- ಗಂಗಳ, ಅನ್ನ, ಕೈ ಬೆರಳು (ಊಟದ ತಟ್ಟೆ)

೬. ನಾಲ್ಕು ಜನ ಮುತ್ತೈದೇರು, ಆಲಿಕಲ್ಲು ಮಳೆಹೋದು
ಕೋರ್ಕಲ್ಲು ಕೆರೆತುಂಬಿದರೂ ನೆನೆಯದೇ ಮನೆಸೇರ್ತಾರೆ- ಹಸುವಿನ ಕೆಚ್ಚಲು

೭. ಅವ್ವನಿಗೆ ನಾಲ್ಕು ಪುಟ್ಟಿ
ಮಗಳಿಗೆ ಎರಡು ಪುಟ್ಟಿ
ಮೊಮ್ಮಳಿಗೆ ಒಂದೇ ಪುಟ್ಟಿ-ಗೆರಸೆ, ಮೊರ, ಕೊಂಗ

೮. ಇದ್ದರೆ ಒಂದೇ ಹೆಸರು
ಸತ್ತರೇ ಸಾವಿರ ಹೆಸರು - ಬಿದಿರು

೯. ಅಕ್ಷರವಿದ್ದರೂ ಪುಸ್ತಕವಲ್ಲ
ಸಿಂಹವಿದ್ರೂ ಅರಣ್ಯವಲ್ಲ
ದುಂಡಗಿದ್ದರೂ ಚಕ್ರವಲ್ಲ ನಾನ್ಯಾರು? - ನಾಣ್ಯ

೧೦. ಗುಡ್ಡ ಬೆಟ್ಟಗಳುಂಟು ಮರಗಳಲ್ಲ
ಸಮುದ್ರ ಉಂಟು ಹೊಳೆಯುಂಟು ನೀರಲ್ಲ
ಹೆಸರುಂಟು ಊರಲ್ಲ - ಭೂಪಟ

೧೧. ಬಂಡಿ ಹೋಗ್ತದೆ ಭಂಡಾರ ಚೆಲ್ಲುತ್ತದೆ- ಬೀಸೋಕಲ್ಲು

೧೨. ಕೊಳದ ಒಳಗೆ ಒಂದು ಮರ ಹುಟ್ಟಿದೆ
ಬೇರು ಇಲ್ಲ ನೀರು ಇಲ್ಲ- ಎಣ್ಣೆದೀಪ

೧೩. ಊರೆಲ್ಲಾ ತಿರುಗಿ ಮೂಲ್ಯಾಗೆ ಮಲಗ್ತಾನೆ- ಚಪ್ಪಲಿ

೧೪. ಸಾಮೆ ಹುಲ್ಲಿನಲ್ಲಿ ಸರಸರ ಜಂಗ
ನಾನೂ ಜಂಗ ನಿನ್ನ ಮನೆಯವರೂ ಜಂಗ - ಶಾವಿಗೆ

೧೫. ಬೆಟ್ಟದ ಸುತ್ತಾ ಬೆಳ್ಳಿದಾರ -ಬೀಸುಗಲ್ಲು - ಹಿಟ್ಟು

೧೬. ಕೆಂಪಗಿದ್ದವನ ಮುಟ್ಟಿದ್ರೆ ಉರಿ ಕಾರ್ತಾನೆ - ಕೆಂಪು ಮೆಣಸು

೧೭. ತುಂಬಿದಷ್ಟೂ ಖಾಲಿಯಾಗುತ್ತದೆ - ಹೊಟ್ಟೆ

೧೮. ಪುಟ್ಟ ಮನೇಲಿ ಚಿಕ್ಕ ತಮ್ಮರು - ಬೆಂಕಿಪೊಟ್ಟಣ

೧೯. ಮೈಯ್ತುಂಬಾ ಮುಳ್ಳು ಹಂದಿಯಲ್ಲ
ಮೈಯನ್ನ ಕೋದ್ರೂ ರಕ್ತ ಇಲ್ಲ- ಬಿದಿರು

೨೦. ಗೊಚ್ಚೀಲಿ ಬಿದ್ರೂ ತಾಕತ್ತ ಕೊಡ್ತದೆ – ಹಂದಿ

೨೧. ನಮ್ಮತೆ ಬಿಸಿಲಲ್ಲಿ ಗೆಳೆಯ ಹಿಂಬಾಲಿಸುತ್ತಾನೆ – ನೆರಳು

೨೨. ನಮ್ಮ ಕೈಗೂಟ ಹಸಿವಿನ ಹೊಟ್ಟೆ ಹರಿತದೆ – ಗೊಟ್ಟ

೨೩. ಮೂಸಿ ಮೂಸಿ ಹೊರಟ ಕರಿ ಕಂಬ್ಳಿ ನೆಂಟ – ಹೆಗ್ಗಣ

ಒಗಟುಗಳಲ್ಲಿ ನೀತಿಪಾಠ, ಹಾಸ್ಯ, ವಿಡಂಬನೆ, ತರ್ಕ, ಆಲೋಚನಾ ಲಹರಿ, ಬುದ್ಧಿಮತ್ತೆಯ ಪರೀಕ್ಷೆ, ಮನರಂಜನೆ, ಇತ್ಯಾದಿಗಳು ಇರುತ್ತವೆ. ಮೇದ ಬುಡಕಟ್ಟು ಸಮುದಾಯದಲ್ಲಿ ಒಗಟುಗಳನ್ನು ಸಂಜೆಯ ಹೊತ್ತು ಕೆಲಸದಲ್ಲಿ ಬಿಡುವು, ವಿರಾಮ ದೊರೆತಾಗ ಅಜ್ಜ-ಅಜ್ಜಿಯರು, ಮಕ್ಕಳು, ಮೊಮ್ಮಕ್ಕಳನ್ನು ಜೊತೆಯಲ್ಲಿ ಕೂರಿಸಿಕೊಂಡು ಒಗಟುಗಳನ್ನು ಹೇಳುತ್ತಾ ಉತ್ತರಗಳನ್ನು ಪಡೆಯುತ್ತಾ ಮನರಂಜನೆಯ ಭಾಗವಾಗಿ ಉಪಯೋಗಿಸುತ್ತಾರೆ.

### ೩.೯. ಪ್ರದರ್ಶನಾತ್ಮಕ ಕಲೆಗಳು

ಮೇದ ಬುಡಕಟ್ಟು ಸಮುದಾಯದಲ್ಲಿ ವಿಭಿನ್ನ ಪ್ರದರ್ಶನಾತ್ಮಕ ಕಲೆಗಳು ಇವೆ. ಹಬ್ಬ ಹರಿದಿನಗಳಲ್ಲಿ, ಧಾರ್ಮಿಕ ವಿಧಿವಿಧಾನಗಳಲ್ಲಿ, ಪೂಜಾ ವಿಧಿಗಳಲ್ಲಿ, ವಿರಾಮದ ವೇಳೆಗಳಲ್ಲಿ ಹಲವು ಮನರಂಜನೆಯ ಆಟಗಳನ್ನು ಆಡುತ್ತಾರೆ. ಈ ರೀತಿಯ ಕಲೆಯ ಆಟಗಳನ್ನು ಈ ಸಮುದಾಯದ ಜೀವನದಲ್ಲಿ ದಿನನಿತ್ಯವೂ ಆಚರಿಸಿಕೊಂಡು ಬರುತ್ತಿದ್ದಾರೆ. ಹಿರಿಯರು, ಕಿರಿಯರು, ವಯಸ್ಕರು, ಸ್ತ್ರೀಯರು, ಮಕ್ಕಳು ಇತ್ಯಾದಿಯಾಗಿ ಕ್ರೀಡೆಗಳಲ್ಲಿ, ಆಟಗಳಲ್ಲಿ ಪಾಲ್ಗೊಳ್ಳುತ್ತಾರೆ. ಈ ಕ್ರೀಡೆಗಳು ನೋಡುಗರಿಗೆ ಮತ್ತು ಆಟವಾಡುವವರಿಗೆ ಮನಸ್ಸು ಮತ್ತು ದೇಹಕ್ಕೆ ಚೈತನ್ಯವನ್ನು ನೀಡುತ್ತವೆ. ದೈಹಿಕ ಮತ್ತು ಮಾನಸಿಕ ಸಮರ್ಥನೆಯನ್ನು ಈ ಕ್ರೀಡೆಗಳು ನೀಡುತ್ತವೆ.

ಮಕ್ಕಳು, ಗಿರಿಗಿಟಲೆ, ಹಗ್ಗ ಎಳೆಯೋ ಆಟ, ಮರಕೋತಿ ಆಟ, ಕುಂಟಬಿಲ್ಲೆ ಆಟ, ಮೂಲೆ ಆಟ. ಕುಂಟಾಟ, ಜೂಟಾಟ, ಚಿನ್ನಿದಾಂಡು, ಬುಗುರಿ, ಆಣಿಕಲ್ಲು ಆಟ, ನೆಲದಾಟ, ಗೋಲಿಯಾಟ, ಗಜ್ಜಗದಾಟ, ಬುಗುರಿ ಆಟ, ಕಣ್ಣುಮುಚ್ಚು ಆಟ, ಗುಂಡಿಯಾಟ, ಹಾಲವಾಣ ಬೀಜದ ಆಟ, ತೂರುಚೆಂಡು ಆಟ, ಬಟ್ಟೆಯ ಚೆಂಡಾಟ, ಕೊಕ್ಕೊ ಆಟ, ಕಬ್ಬಡ್ಡಿ ಆಟ, ಕಳ್ಳ ಪೋಲಿಸ್ ಆಟ, ಕೋಲಾಟ, ಟೋಪಿ ಆಟ, ಚೌಕಾಬಾರ ಆಟ, ಹಗ್ಗದ ಆಟ ಇತ್ಯಾದಿ ಆಟಗಳನ್ನು ಮಕ್ಕಳು ಗುಂಪಿನಲ್ಲಿ ಹಾಗೂ ಒಟ್ಟಾಗಿ ಆಡಿ ಸಂತೋಷಪಡುತ್ತಾರೆ.

ವಯಸ್ಕ ಸ್ತೀ-ಪುರುಷರು, ಭಾರ ಎತ್ತುವುದು, ಈಜುವುದು, ಮರಹತ್ತುವ ಆಟ, ಹಗ್ಗ ಜಗ್ಗಾಟ, ಕುಸ್ತಿ ಆಟ, ಬುಗುರಿ ಆಟ, ಇತ್ಯಾದಿಗಳನ್ನು ಆಡುತ್ತಾರೆ. ವಯಸ್ಕ ತರುಣರು ಕುಸ್ತಿಯ ಆಟದಲ್ಲಿ ಆಡುತ್ತಾರೆ. ಕೋಲು ಹೊಯ್ಯುವುದು, ಕೋಲಾಟ ಇತ್ಯಾದಿ ಆಟಗಳನ್ನು ಆಡುತ್ತಾರೆ. ಹಬ್ಬ ಹರಿದಿನಗಳು, ಜಾತ್ರೆಗಳು, ಉತ್ಸವಗಳು, ದೇವರು, ಮತ್ತು ದೇವತೆಗಳ ಪೂಜಾ ಕಾರ್ಯ ಸಂದರ್ಭಗಳಲ್ಲಿ ಹಲವು ರೀತಿಯ ಸಾಂಪ್ರಾದಾಯಿಕವಾದ, ಜಾನಪದದ ಆಟಗಳನ್ನು ಆಡುತ್ತಾರೆ. ಆಷಾಢದ ಹಬ್ಬದ ಸಂದರ್ಭದಲ್ಲಿ 'ಆಡಿಪಂಡಿಗೆ ಆಟ'ವನ್ನು ಆಡುತ್ತಾರೆ. ಈ ಆಟದಲ್ಲಿ

ತೆಂಗಿನಕಾಯಿಗೆ ಎಳ್ಳು-ಬೆಲ್ಲ, ಕಾಯಿಯನ್ನು ಸುಡುವುದರ ಮೂಲಕ ದೇವರಿಗೆ ಅರ್ಪಿಸಲು ಯಾರು ಮೊದಲಿಗೆ ಎಂದು ಸ್ಪರ್ಧೆ ನಡೆಸುತ್ತಾರೆ. ಈ ಆಟದ ಮೂಲಕ ತಮ್ಮ ಸಮುದಾಯದ ದೇವರು-ದೇವತೆಗಳಿಗೆ ತಮ್ಮ ಭಕ್ತಿಯನ್ನು ಅರ್ಪಿಸುವ ಪದ್ಧತಿ ರೂಢಿಯಾಗಿ ಬೆಳೆದು ಬಂದಿದೆ. ಶಕ್ತಿ ದೇವತೆಗಳ ಪೂಜೆಗಳ ಸಮಯದಲ್ಲಿ ಕೋಲುವರಸೆ, ಬೆಂಕಿಕೋಲಾಟ, ಕುಸ್ತಿ, ಬೆಂಕಿಯಲ್ಲಿ ಓಡುವುದು, ಅಗ್ನಿಕುಂಡದಲ್ಲಿ ಹೋಗುವುದು ಇತ್ಯಾದಿಯಾಗಿ ಆಚರಣೆಗಳನ್ನು ಮಾಡುತ್ತಾರೆ. ಮದುವೆಗಳ ಸಂದರ್ಭಗಳಲ್ಲಿ ವಿವಿಧ ಮನರಂಜನಾತ್ಮಕ ಆಟಗಳನ್ನು ಆಡುತ್ತಾರೆ. ಪರಸ್ಪರ ನೆಂಟರುಗಳು ನೀರನ್ನು ಎರಚುವ ಆಟವನ್ನು ಆಡುತ್ತಾರೆ. ಕನ್ಯೆ, ವರನನ್ನು ಹಾಸ್ಯಮಾಡುವ, ಅವರನ್ನು ಹಾಸ್ಯಕ್ಕೆ ಒಳಪಡಿಸುವ ಆಟಗಳನ್ನು ಆಡಿಸುತ್ತಾರೆ.

**ಚಿತ್ರದುರ್ಗ ಜಿಲ್ಲೆಯ ಮೇದ ಬುಡಕಟ್ಟು ಸಮುದಾಯದ**

**ಮಾದರಿ(ನಮೂನೆ)ಗಳ ಆಯ್ಕೆಯ ವಿವರಗಳು**

**ಕೋಷ್ಟಕ-೨**

| ಕ್ರಸಂ. | ತಾಲ್ಲೂಕುಗಳು | ಕುಟುಂಬಗಳು | ಕುಟುಂಬದ ಸದಸ್ಯರ ಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧. | ಚಿತ್ರದುರ್ಗ | ೪೦ | ೮೬ | ೬೮ | ೧೫೪ |
| ೨. | ಹಿರಿಯೂರು | ೨೦ | ೫೨ | ೪೦ | ೯೨ |
| ೩. | ಹೊಸದುರ್ಗ | ೨೦ | ೪೪ | ೨೮ | ೭೨ |
| ೪. | ಹೊಳಲ್ಕೆರೆ | ೧೦ | ೨೪ | ೧೮ | ೪೨ |
| ೫. | ಚಳ್ಳಕೆರೆ | ೬ | ೧೦ | ೦೮ | ೧೮ |
| ೬. | ಮೊಳಕಾಲ್ಮೂರು | ೪ | ೧೨ | ೧೦ | ೨೨ |
| | ಒಟ್ಟು | ೧೦೦ | ೨೨೮ | ೧೭೨ | ೪೦೦ |

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿಯೂ ಮೇದ ಬುಡಕಟ್ಟು ಸಮುದಾಯದವರು ಕಂಡುಬರುತ್ತಾರೆ. ಚಿತ್ರದುರ್ಗ ಜಿಲ್ಲೆಗೆ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳು ಪಕ್ಕದ ಜಿಲ್ಲೆಗಳಾಗಿರುವುದರಿಂದ ಬಂಧುತ್ವ ಮತ್ತು ವ್ಯವಹಾರ ಸಂಬಂಧಿ ಚಟುವಟಿಕೆಗಳನ್ನು ಹೊಂದಿದ್ದಾರೆ. ಮೇದರು ಬಹುತೇಕವಾಗಿ ಪಟ್ಟಣ, ನಗರ ಪ್ರದೇಶಗಳ ಪ್ರತ್ಯೇಕ ಮೇದರ ಬೀದಿಗಳಲ್ಲಿ ವಾಸಿಸುತ್ತಾರೆ. ಸಂಶೋಧನಾ ಕಾರ್ಯಕ್ಕೆ ಯಾದೃಚ್ಛಿಕ ಮಾದರಿ(Rondom Sampling)ಯ ನಮೂನೆಗಳನ್ನು ಆಯ್ದುಕೊಳ್ಳಲಾಗಿದೆ.

ಚಿತ್ರದುರ್ಗ ತಾಲ್ಲೂಕಿನಲ್ಲಿ ೪೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ೪೦ ಕುಟುಂಬಗಳಲ್ಲಿ ೮೬ ಗಂಡು, ೬೮ ಹೆಣ್ಣು, ಒಟ್ಟು ೧೫೪ ಕುಟುಂಬ ಸದಸ್ಯರಿದ್ದಾರೆ. ಹಿರಿಯೂರು ತಾಲ್ಲೂಕಿನಲ್ಲಿ ೨೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ.

ಈ ೨೦ ಕುಟುಂಬಗಳಲ್ಲಿ ೫೨ ಗಂಡು, ೪೦ ಹೆಣ್ಣು, ಒಟ್ಟು ೯೨ ಕುಟುಂಬ ಸದಸ್ಯರಿದ್ದಾರೆ. ಹೊಸದುರ್ಗ ತಾಲ್ಲೂಕಿನಲ್ಲಿ ೩೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ೪೪ ಗಂಡು, ೨೮ ಹೆಣ್ಣು, ಒಟ್ಟು ೭೨ ಕುಟುಂಬ ಸದಸ್ಯರಿದ್ದಾರೆ. ಹೊಳಲ್ಕೆರೆ ತಾಲ್ಲೂಕಿನಲ್ಲಿ ೧೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ೧೦ ಕುಟುಂಬಗಳಲ್ಲಿ ೨೪ ಗಂಡು, ೧೮ ಹೆಣ್ಣು, ಒಟ್ಟು ೪೨ ಕುಟುಂಬ ಸದಸ್ಯರಿದ್ದಾರೆ. ಚಳ್ಳಕೆರೆ ತಾಲ್ಲೂಕಿನಲ್ಲಿ ೬ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ೧೦ ಗಂಡು, ೮ ಹೆಣ್ಣು, ಒಟ್ಟು ೧೮ ಕುಟುಂಬ ಸದಸ್ಯರಿದ್ದಾರೆ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೪ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ೧೨ ಗಂಡು, ೧೦ ಹೆಣ್ಣು, ಒಟ್ಟು ೩೩ ಸದಸ್ಯರಿದ್ದಾರೆ. ಒಟ್ಟು ಆರು ತಾಲ್ಲೂಕುಗಳಿಂದ ೧೦೦ ಕುಟುಂಬಗಳನ್ನು ಮಾದರಿಗಳನ್ನಾಗಿ ಆಯ್ದುಕೊಳ್ಳಲಾಗಿದೆ. ಅದರಲ್ಲಿ ೨೨೮ ಗಂಡು, ೧೭೨ ಹೆಣ್ಣು, ಒಟ್ಟು ೪೦೦ ಸದಸ್ಯರಿದ್ದಾರೆ.

**ಕೋಷ್ಟಕ ೨.೧.**

**ವೈವಾಹಿಕ ಸ್ಥಾನಮಾನ:** ಮೇದ(ಮೇದಾರ) ಬುಡಕಟ್ಟು ಸಮುದಾಯದಲ್ಲಿ ಏಕಪತ್ನಿತ್ವ ಮತ್ತು ಏಕಪತಿತ್ವದ ವಿವಾಹಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಈ ಸಮುದಾಯದ ವೈವಾಹಿಕ ವಿವರಗಳು ಈ ಕೆಳಕಂಡಂತಿವೆ.

| **ವಿವರ** | **ಪ್ರಮಾಣ** | **ಶೇಕಡ** |
|---|---|---|
| ವಿವಾಹಿತರು | ೨೫೪ | ೬೩.೫೦ |
| ಅವಿವಾಹಿತರು | ೬೮ | ೧೭.೦೦ |
| ವಿಧವೆ/ವಿಧುರರು | ೭೮ | ೧೯.೫೦ |
| **ಒಟ್ಟು** | **೪೦೦** | **೧೦೦** |

ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಒಟ್ಟು ೧೦೦ ಕುಟುಂಬಗಳ ಒಟ್ಟು ೪೦೦ ಸದಸ್ಯರಲ್ಲಿ ವಿವಾಹಿತರು ಶೇಕಡ ೬೩.೫೦ರಷ್ಟು, ಅವಿವಾಹಿತರು ಶೇಕಡ ೧೭.೦೦ರಷ್ಟು, ವಿಧವೆ/ವಿಧುರರು ಶೇಕಡ ೧೯.೫೦ರಷ್ಟು ಕಂಡುಬರುತ್ತಾರೆ.

**ಕೋಷ್ಟಕ ೨.೨.**

**ಶೈಕ್ಷಣಿಕ ಸ್ಥಾನಮಾನ:** ಚಿತ್ರದುರ್ಗ ಜಿಲ್ಲೆಯ ಮೇದ ಬುಡಕಟ್ಟು ಸಮುದಾಯದಲ್ಲಿ ಶಿಕ್ಷಣ ಪಡೆಯಲು ಆಸಕ್ತಿ ಕಂಡುಬರುತ್ತಿದೆ. ಶಿಕ್ಷಣ ಪಡೆದವರು ತಮ್ಮ ಮೂಲ ವೃತ್ತಿಯನ್ನು ಬಿಟ್ಟು ಬೇರೆ ಬೇರೆ ಉದ್ಯೋಗಗಳನ್ನು ಮಾಡುತ್ತಿರುವುದು ಕಂಡುಬಂದಿದೆ. ಶಿಕ್ಷಣ ಪಡೆದ ವ್ಯಕ್ತಿಗಳು ತಮ್ಮ ಮೂಲ ಸ್ಥಳವನ್ನು ಬಿಟ್ಟು ಉದ್ಯೋಗಗಳಿಗಾಗಿ ಬೇರೆ ಬೇರೆ ಊರುಗಳಿಗೆ ಹೋಗಿರುವುದು ಕಂಡುಬಂದಿದೆ. ಶಿಕ್ಷಣ ಪಡೆಯದೇ ಇರುವವರು ತಮ್ಮ ಮೂಲ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ.

| ವಿವರ | ಪ್ರಮಾಣ | ಶೇಕಡ |
|---|---|---|
| ಶಿಕ್ಷಣ ಪಡೆದವರು (ಪ್ರಾಥಮಿಕ, ಪ್ರೌಢ, ಪದವಿ) | ೨೨೫ | ೫೬.೨೫ |
| ಶಿಕ್ಷಣ ಪಡೆಯದೇ ಇರುವವರು | ೧೭೫ | ೪೩.೭೫ |
| **ಒಟ್ಟು** | **೪೦೦** | **೧೦೦** |

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳ ಒಟ್ಟು ೧೦೦ ಕುಟುಂಬಗಳ ಒಟ್ಟು ೪೦೦ ಸದಸ್ಯರಲ್ಲಿ ಶಿಕ್ಷಣ ಪಡೆದವರು ಶೇಕಡ ೫೬.೨೫ರಷ್ಟು, ಶಿಕ್ಷಣ ಪಡೆಯದೇ ಇರುವವರು ಶೇಕಡ ೪೩.೭೫ರಷ್ಟು ಕಂಡುಬಂದಿದ್ದಾರೆ.

**ಕೋಷ್ಟಕ ೨.೩.**

**ವೃತ್ತಿಯ ಸ್ಥಾನಮಾನ:** ಚಿತ್ರದುರ್ಗ ಜಿಲ್ಲೆಯ ಮೇದ(ಮೇದಾರ) ಬುಡಕಟ್ಟು ಸಮುದಾಯದಲ್ಲಿ ಶಿಕ್ಷಣ ಪಡೆಯುವ ಜಾಗೃತಿ ಮತ್ತು ಉತ್ಸಾಹ ಕಂಡುಬರುತ್ತಿದೆ. ತಮ್ಮ ಮೂಲ ವೃತ್ತಿಯ ಜೊತೆಗೆ ಬೇರೆ ಬೇರೆ ಉದ್ಯೋಗ, ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿಸಿಕೊಂಡಿದ್ದಾರೆ.

| ವಿವರ | ಪ್ರಮಾಣ | ಶೇಕಡ |
|---|---|---|
| ಮೂಲ ಕುಲ ಕಸುಬು | ೧೫೩ | ೩೮.೨೫ |
| ಸಣ್ಣ ವ್ಯಾಪಾರಿಗಳು | ೧೬೭ | ೪೧.೭೫ |
| ಖಾಸಗಿ ಉದ್ಯೋಗ | ೬೦ | ೧೫.೦೦ |
| ಸರ್ಕಾರಿ ಉದ್ಯೋಗ | ೨೦ | ೦೫.೦೦ |
| **ಒಟ್ಟು** | **೪೦೦** | **೧೦೦** |

ಮೇದ(ಮೇದಾರ) ಬುಡಕಟ್ಟು ಸಮುದಾಯದಲ್ಲಿ ಶೇಕಡ ೩೮.೭೬ರಷ್ಟು ಜನರು ಮೂಲ ಕುಲಕಸುಬುಗಳಲ್ಲಿ ತಮ್ಮ ತೊಡಗಿಸಿಕೊಂಡಿದ್ದಾರೆ. ಶೇಕಡ ೪೧.೭೫ರಷ್ಟು ಸಣ್ಣ ವ್ಯಾಪಾರಿಗಳಾಗಿದ್ದಾರೆ. ಶೇಕಡ ೧೫.೦೦ರಷ್ಟು ಖಾಸಗಿ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಶೇಕಡ ೦೫.೦೦ರಷ್ಟು ಜನರು ಸರ್ಕಾರಿ ಉದ್ಯೋಗಗಳನ್ನು ಮಾಡುತ್ತಿದ್ದಾರೆ.

**ಕೋಷ್ಟಕ ೨.೪.**

**ವಯೋಮಾನ :** ಮೇದ(ಮೇದಾರ) ಬುಡಕಟ್ಟು ಸಮುದಾಯಗಳ ೧೦೦ ಕುಟುಂಬಗಳ ೪೦೦ ಸದಸ್ಯರುಗಳನ್ನು ಅವರ ವಯಸ್ಸಿನ ಅನುಗುಣವಾಗಿ ವಯೋಮಾನದ ವಿವರಗಳನ್ನು ಈ ಕೆಳಕಂಡಂತೆ ತಿಳಿಸಲಾಗಿದೆ.

| ವಯೋಮಾನ | ಪ್ರಮಾಣ | ಶೇಕಡ |
|---|---|---|
| ೦-೧೪ ವರ್ಷ | ೪೦ | ೧೦.೦೦ |
| ೧೪-೧೮ ವರ್ಷ | ೪೯ | ೧೨.೨೫ |
| ೧೯-೨೫ ವರ್ಷ | ೯೬ | ೨೪.೦೦ |
| ೨೬-೪೦ ವರ್ಷ | ೬೦ | ೧೫.೦೦ |
| ೪೧-೫೦ ವರ್ಷ | ೮೦ | ೨೦.೦೦ |
| ೫೦ ವರ್ಷದ ಮೇಲ್ಪಟ್ಟು | ೭೫ | ೧೮.೭೫ |
| **ಒಟ್ಟು** | **೪೦೦** | **೧೦೦** |

ಮೇದ(ಮೇದಾರ) ಒಟ್ಟು ೧೦೦ ಕುಟುಂಬಗಳ ೪೦೦ ಸದಸ್ಯರುಗಳಲ್ಲಿ ೦-೧೪ ವರ್ಷಗಳಲ್ಲಿ ಇರುವವರು ಶೇ.೧೦.೦೦ರಷ್ಟು, ೧೪-೧೮ ವರ್ಷಗಳಲ್ಲಿ ಇರುವವರು ಶೇ.೧೨.೨೫ರಷ್ಟು, ೧೯-೨೫ ವರ್ಷಗಳಲ್ಲಿ ಇರುವವರು ಶೇ.೨೪.೦೦ರಷ್ಟು, ೨೬-೪೦ ವರ್ಷಗಳಲ್ಲಿ ಇರುವವರು ಶೇ.೧೫.೦೦ರಷ್ಟು, ೪೧-೫೦ ವರ್ಷಗಳಲ್ಲಿ ಇರುವವರು ಶೇ.೨೦.೦೦ರಷ್ಟು, ೫೦ ವರ್ಷದ ಮೇಲ್ಪಟ್ಟವರು ಶೇ.೧೮.೭೫ರಷ್ಟು ಇರುವುದು ಕಂಡುಬಂದಿದೆ.

### ೩.೧೦. ಸಮಸ್ಯೆಗಳು ಮತ್ತು ಸವಾಲುಗಳು

ಮೇದ ಬುಡಕಟ್ಟು ಸಮುದಾಯವು ಇಂದು ನಗರಗಳಿಗೆ ವಲಸೆ ಬಂದು ನೆಲೆಸುತ್ತಿದೆ. ಕಾರಣವೇನೆಂದರೆ, ಗ್ರಾಮೀಣ ಮತ್ತು ಹಳ್ಳಿ ಭಾಗಗಳಲ್ಲಿ ಅವರ ಕುಲಕಸುಬಿಗೆ ಬೇಕಾದ ಕಚ್ಚಾವಸ್ತುಗಳ ಕೊರತೆ ಕಂಡುಬರುತ್ತಿದೆ. ನಗರ ಪಟ್ಟಣಗಳ ಪ್ರತ್ಯೇಕ ಕೇರಿಗಳಲ್ಲಿ ಇವರು ಇಂದು ವಾಸಿಸುತ್ತಿದ್ದಾರೆ. ಇವು 'ಮೇದಾರ ಕೇರಿ' ಗಳಂದೇ ಕರೆಯಲ್ಪಡುತ್ತಿವೆ. ಸ್ವಾತಂತ್ರ್ಯ ನಂತರದ ಕಾಲದಿಂದಲೂ, ಈ ಸಮುದಾಯದ ಆಧುನಿಕ ಶಿಕ್ಷಣವನ್ನು ಪಡೆಯುತ್ತಾ ಬಂದಿದೆ. ಈ ಸಮುದಾಯದ ಎಲ್ಲಾ ಜನರು ತಮ್ಮ ಮೂಲ ಉದ್ಯೋಗವನ್ನು ಮುಂದುವರೆಸಿಕೊಂಡು ಬರುತ್ತಿಲ್ಲ. ಶಿಕ್ಷಣವನ್ನು ಪಡೆದ ವಿದ್ಯಾವಂತರು, ಶಿಕ್ಷಕರು, ವಕೀಲರು, ಡಾಕ್ಟರ್‌ಗಳು ವಿವಿಧ ಇಲಾಖೆಗಳಲ್ಲಿ ಪ್ರಥಮದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಉನ್ನತ ಅಧಿಕಾರಿಗಳು, ಪೋಲಿಸ್ ಇಲಾಖೆಯಲ್ಲಿ ಪೋಲಿಸ್ ಹಾಗೂ ಪೋಲಿಸ್ ಅಧಿಕಾರಿಗಳು ಆಗಿದ್ದಾರೆ. ಅಲ್ಲದೇ, ವಿವಿಧ ಉದ್ಯೋಗಗಳಾದ ಡ್ರೈವರ್, ಪೇಂಟರ್, ಮೇಸ್ತ್ರಿ, ಕಟ್ಟಡ ಕಂಟ್ರ್ಯಾಕ್ಟರ್, ಗಾರೆಕೆಲಸ, ಬಡಗಿ ಕೆಲಸ, ದಿನನಿತ್ಯದ ಕೂಲಿಕೆಲಸ, ಇತ್ಯಾದಿ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಪಾರಂಪರಿಕ ವೃತ್ತಿಯಾದ ಬಿದಿರು, ಬೆತ್ತ, ಬೊಂಬುಗಳಿಂದಲೇ ಜೀವನ ನಡೆಸುವ ಅಗತ್ಯತೆಯಲ್ಲಿ ಈ ಸಮುದಾಯವು ಇಲ್ಲ. ತಾಲ್ಲೂಕು ಮಟ್ಟ, ಜಿಲ್ಲಾ ಮಟ್ಟಗಳಲ್ಲಿ ಮೇದರ

ಸಂಘಗಳು ಅಸ್ತಿತ್ವಕ್ಕೆ ಬಂದಿವೆ. ಈ ಸಂಘಗಳ ಮೂಲಕ ಸರ್ಕಾರದಿಂದ ವಿವಿಧ ಸಾಲ ಸೌಲಭ್ಯಗಳು ಹಣಕಾಸಿನ ಸೌಲಭ್ಯಗಳು ಸಹಾಯಧನಗಳನ್ನು ಪಡೆದುಕೊಳ್ಳುತ್ತಿದ್ದಾರೆ.

ಚಿತ್ರದುರ್ಗ ನಗರದಲ್ಲಿ ಅಖಿಲ ಕರ್ನಾಟಕ ಶ್ರೀಗುರು ಮೇದಾರ ಕೇತೇಶ್ವರ ಟ್ರಸ್ಟ್(ರಿ). ಈ ಹೆಸರಿನಲ್ಲಿ ರಾಷ್ಟ್ರೀಯ ಹೆದ್ದಾರಿ-೪ರಲ್ಲಿನ ಸೀಬಾರ ಎಂಬ ಗ್ರಾಮದಲ್ಲಿ ಈ ಟ್ರಸ್ಟ್ ಕಾರ್ಯ ನಿರ್ವಹಿಸುತ್ತಿದೆ. ಈ ಟ್ರಸ್ಟ್‌ನ ಮೂಲಕ 'ಮೇದಾರ ಮಠ'ವು ಸ್ಥಾಪನೆಯಾಗಿದೆ. ಬಸವಪ್ರಭು ಶ್ರೀಕೇತೇಶ್ವರ ಸ್ವಾಮಿಯವರು ಈ ಟ್ರಸ್ಟ್‌ನ್ನು ಮುನ್ನಡೆಸಿಕೊಂಡು ಹೋಗುತ್ತಿದ್ದರು. ಶ್ರೀಕೇತೇಶ್ವರ ಸ್ವಾಮೀಜಿಯವರು ನಿಧನವಾಗಿದ್ದಾರೆ. ಮೇದಾರ ಮಠದ ಮೂಲಕ ಚಿತ್ರದುರ್ಗ ಜಿಲ್ಲೆಯ ಮೇದರ ಸಮುದಾಯದ ಅಭಿವೃದ್ಧಿಗಾಗಿ ಸ್ವಾಮೀಜಿಯವರು ಸಾಕಷ್ಟು ಶ್ರಮಿಸಿದ್ದಾರೆ. ಈ ಮಠದ ಮೂಲಕ ಮೇದ ಸಮುದಾಯಕ್ಕೆ ಶಿಕ್ಷಣ, ಉದ್ಯೋಗದ ಮಾಹಿತಿ, ಸರ್ಕಾರದಿಂದ ವಿವಿಧ ಸೌಲಭ್ಯಗಳನ್ನು ಕೊಡಿಸಲು ಶ್ರಮಿಸಲಾಗುತ್ತಿದೆ. ಶಿಕ್ಷಣವನ್ನು ಪಡೆಯುವುದರ ಮೂಲಕ ಈ ಸಮುದಾಯದಲ್ಲಿ ಆಧುನಿಕ ಶಿಕ್ಷಣದ ಪ್ರಭಾವದಿಂದಾಗಿ ಸಾಮಾಜಿಕವಾಗಿ ಬದಲಾವಣೆಗಳು ಕಂಡುಬರುತ್ತಿವೆ. ಈ ಸಮುದಾಯವು ಇಂದು ಬಿದಿರು, ಬೊಂಬು ವ್ಯಾಪಾರ ವ್ಯವಹಾರದಲ್ಲಿ ತೊಡಗಿಕೊಂಡಿದೆ. ಕರಕುಶಲ ಅಂಗಡಿಗಳನ್ನು ತೆರೆದು ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಕೆಲವು ಜನರು ಶ್ರೀಮಂತರಾಗಿದ್ದಾರೆ. ಬಡವರು, ಮಧ್ಯಮ ವರ್ಗದವರು ಆರ್ಥಿಕವಾಗಿ ಬೆಳೆಯುತ್ತಿದ್ದಾರೆ. ಅನೇಕ ಸಾಮಾಜಿಕ ಸಮಸ್ಯೆಗಳು ಈ ಸಮುದಾಯದಲ್ಲಿದ್ದರೂ ಅವುಗಳನ್ನು ಮೆಟ್ಟಿನಿಂತು ಸಾಧಿಸುವ ಹಂಬಲವು ಈ ಸಮುದಾಯದಲ್ಲಿ ಕಂಡುಬರುತ್ತಿದೆ.

**ಅಡಿಟಿಪ್ಪಣಿಗಳು**

೧. ಬುಡಕಟ್ಟು ಕುಲಕಸುಬುಗಳು, ಡಾ. ಕೆ.ಎಂ.ಮೇತ್ರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ.೧೮೨

೨. ಬುಡಕಟ್ಟು ಕುಲಕಸುಬುಗಳು, ಡಾ. ಕೆ.ಎಂ.ಮೇತ್ರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ.೧೮೩

೩. ಬುಡಕಟ್ಟು ಕುಲಕಸುಬುಗಳು, ಡಾ. ಕೆ.ಎಂ.ಮೇತ್ರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ.೧೮೪

೪. ಕರ್ನಾಟಕದ ಬುಡಕಟ್ಟುಗಳು, 'ಮೇದರು', ಡಾ.ಡಿ.ಆರ್. ಪಾಂಡುರಂಗ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೮, ಪುಟ.೨-೩

೫. ಕರ್ನಾಟಕದ ಬುಡಕಟ್ಟುಗಳು, 'ಮೇದರು', ಡಾ.ಡಿ.ಆರ್. ಪಾಂಡುರಂಗ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೮, ಪುಟ.೩

೬. ಕರ್ನಾಟಕದ ಬುಡಕಟ್ಟುಗಳು, 'ಮೇದರು', ಡಾ.ಡಿ.ಆರ್. ಪಾಂಡುರಂಗ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೮, ಪುಟ.೩

೭. ಕರ್ನಾಟಕದ ಬುಡಕಟ್ಟುಗಳು, 'ಮೇದರು', ಡಾ.ಡಿ.ಆರ್. ಪಾಂಡುರಂಗ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೮, ಪುಟ.೪

೮. ಕರ್ನಾಟಕದ ಬುಡಕಟ್ಟುಗಳು, 'ಮೇದರು', ಡಾ.ಡಿ.ಆರ್. ಪಾಂಡುರಂಗ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೮, ಪುಟ.೮

೯. ಕರ್ನಾಟಕದ ಬುಡಕಟ್ಟುಗಳು, 'ಮೇದರು', ಡಾ.ಡಿ.ಆರ್. ಪಾಂಡುರಂಗ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೯೯೮, ಪುಟ.೧೦

ಅಧ್ಯಾಯ: ೪

# ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯ

೧. ಹಿನ್ನೆಲೆ

೨. ಮೂಲ ಮತ್ತು ಪ್ರಸಾರ

೩. ವಸತಿ ವ್ಯವಸ್ಥೆ

೪. ಬಂಧುತ್ವ ಮತ್ತು ವಿವಾಹ ಪದ್ಧತಿ

೫. ಆರಾಧನೆ, ಆಚರಣೆ ಮತ್ತು ನಂಬಿಕೆಗಳು

೬. ಒಳಾಡಳಿತ ವ್ಯವಸ್ಥೆ

೭. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

೮. ಭಾಷೆ ಮತ್ತು ಸಾಹಿತ್ಯ

೯. ಪ್ರದರ್ಶನಾತ್ಮಕ ಕಲೆಗಳು

೧೦. ಸಮಸ್ಯೆಗಳು ಮತ್ತು ಸವಾಲುಗಳು

ಅಧ್ಯಾಯ: ೪

# ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯ

## ೪.೧. ಹಿನ್ನೆಲೆ

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಒಂದು ವಿಶಿಷ್ಟ ಬುಡಕಟ್ಟು ಸಮುದಾಯವಾಗಿದೆ. ಹಕ್ಕಿ ಪಿಕ್ಕಿ ಎನ್ನುವ ಹೆಸರು ಇವರು ಸಾಂಪ್ರದಾಯಕವಾಗಿ ಹಕ್ಕಿಗಳನ್ನು ಹಿಡಿಯುವಂತಹ ಕುಲಕಸುಬನ್ನು ಒಳಗೊಂಡಿರುವ ಹಿನ್ನೆಲೆಯಿಂದ ಬಂದಿದೆ. 'ಹಕ್ಕಿ ಪಿಕ್ಕಿ' ಎನ್ನುವುದು ಕನ್ನಡದ ಜೋಡುನುಡಿಯಾಗಿದೆ. 'ಹಕ್ಕಿ' ಎಂದರೆ ಪಕ್ಷಿ ಎಂದು ಅರ್ಥ, 'ಪಿಕ್ಕಿ' ಎಂದರೆ, ಅದರ ಪ್ರತಿಧ್ವನಿ ರೂಪವಾಗಿದೆ. ಕಿಟಲ್ ಕನ್ನಡ ನಿಘಂಟಿನಲ್ಲಿ 'ಹಕ್ಕಿಯನ್ನು ಹೆಕ್ಕ' ಎನ್ನುವ ಅರ್ಥದಿಂದ (ಹಿಕ್ಕು-ಹಿಡಿ, ಹಿಕ್ಕು-ವೆಕ್ಕು) ಬಂದಿದೆ. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರು ರಾಜಸ್ಥಾನ ಮತ್ತು ಗುಜರಾತ್ ಮೂಲದಿಂದ ಆಂಧ್ರಪ್ರದೇಶ ರಾಜ್ಯದ ಮಾರ್ಗವನ್ನು ಹೊಂದಿ ಕರ್ನಾಟಕ ರಾಜ್ಯಕ್ಕೆ ವಲಸೆ ಬಂದು ಇಲ್ಲಿ ನೆಲೆಸಿದ್ದಾರೆ ಎನ್ನುವುದು ಸಂಶೋಧನೆಯಿಂದ ತಿಳಿದುಬರುತ್ತದೆ. ಭಾರತದ ಸ್ವಾತಂತ್ರ್ಯ ನಂತರ ೧೯೫೦ನೇ ಇಸವಿಯಲ್ಲಿ ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ಪಕ್ಷಿರಾಜಪುರದಲ್ಲಿ ಹಕ್ಕಿಪಿಕ್ಕಿಯರ ವಾಸಕ್ಕೆ ನೆಲೆಯನ್ನು ಕಲ್ಪಿಸಲಾಯಿತು. ನಂತರ ಕರ್ನಾಟಕದ ವಿವಿಧ ಗ್ರಾಮೀಣ ಪ್ರದೇಶಗಳಲ್ಲಿ ಪ್ರತ್ಯೇಕವಾದ ಕಾಲೋನಿಗಳನ್ನು ಸ್ಥಾಪಿಸಿದ ಮೇಲೆ ಅಲ್ಲಲ್ಲಿ ವಾಸಮಾಡ ತೊಡಗಿದರು. ಹಕ್ಕಿಪಿಕ್ಕಿಯರು ನೆಲೆಸಿರುವ ಹಲವಾರು ಸ್ಥಳಗಳು ಈ ರೀತಿ ಇವೆ. ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಪಕ್ಷಿರಾಜಪುರ ಮತ್ತು ಕಚ್ಚೇನಹಳ್ಳಿ, ಚಾಮರಾಜನಗರ ತಾಲ್ಲೂಕಿನ ತಾಳವಾಡಿ, ಕೆ.ಆರ್. ಪೇಟೆ ತಾಲ್ಲೂಕಿನ ಚಿನಕುರಳಿ, ಹೆಗ್ಗಡದೇವನಕೋಟೆ ತಾಲ್ಲೂಕಿನ ಟೈಗರ್ ಬ್ಲಾಕ್(ಸಡ್ಡೆ), ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಶಿಕಾರಿಪುರ, ಬೆಂಗಳೂರು ಜಿಲ್ಲೆಯ ರಾಮನಗರ ತಾಲ್ಲೂಕಿನ ಹಕ್ಕಿಪಿಕ್ಕಿಕ್ಯಾಂಪ್, ಬೆಂಗಳೂರು ಕೋಟೆ ಆಂಜನೇಯ ದೇವಸ್ಥಾನ, ಬನ್ನೇರುಘಟ್ಟ, ಹಾಸನ ಜಿಲ್ಲೆಯ ಹಗರೆ, ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಗೋಪನಾಳು, ಅಸ್ತಾಪನಹಳ್ಳಿ, ಶಿವಮೊಗ್ಗ ತಾಲ್ಲೂಕಿನ ಚಿಕ್ಕ ಮರಡಿ(ಗೌತಮ ನಗರ) ಚಿಕ್ಕಮಗಳೂರು ಜಿಲ್ಲೆಯ ಮಲ್ಲೇನಹಳ್ಳಿ ಇತ್ಯಾದಿ ಸ್ಥಳಗಳಲ್ಲಿ ವಾಸಿಸುತ್ತಿದ್ದಾರೆ. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯ

ಸಂದರ್ಭದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೈಸೂರು ರಾಜ್ಯ ಘೋಷಿತ ಪಟ್ಟಿಯಲ್ಲಿ [SC/ST - Modification order-1956, scheduled, 3, part 4, mysore (1) (2)] ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವನ್ನು ಹಳೆಯ ಮೈಸೂರು ರಾಜ್ಯದ ಜಿಲ್ಲೆಗಳಲ್ಲಿ ಮಾತ್ರ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಪ್ರಥಮವಾಗಿ ಸೇರಿಸಲಾಯಿತು. ದಿನಾಂಕ ೨೭.೭.೧೯೭೭ ರಂದು ಅದರ ವ್ಯಾಪ್ತಿಯನ್ನು ಸಡಿಲಿಸಿ ಕರ್ನಾಟಕ ರಾಜ್ಯಕ್ಕೆ ವಿಸ್ತರಿಸಲಾಯಿತು. ೧೯೭೧ರ ಜನಗಣತಿಯ ಪ್ರಕಾರ ಇವರ ಜನಸಂಖ್ಯೆ, ಬೆಂಗಳೂರು, ಬಳ್ಳಾರಿ, ಚಿಕ್ಕಮಗಳೂರು, ಚಿತ್ರದುರ್ಗ, ತುಮಕೂರು, ಹಾಸನ, ಕೋಲಾರ, ಮಂಡ್ಯ, ಮೈಸೂರು ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ೨,೫೬೧ ಇರುವುದು. ೧೯೮೧, ೧೯೯೧ ಮತ್ತು ೨೦೦೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ಅನುಕ್ರಮವಾಗಿ ಇವರ ಜನಸಂಖ್ಯೆ ೩,೩೮೨, ೫,೨೮೭ ಮತ್ತು ೮,೪೧೪ ಎಂದು ದಾಖಲಾಗಿದೆ. ಅದರಲ್ಲಿ ಶೇಕಡ ೧೭.೨೪ರಷ್ಟು ನಗರವಾಸಿಗಳಾಗಿದ್ದಾರೆ. ಇವರ ಮಾತೃಭಾಷೆ ವಾಘರಿ(ವಾಗ್ರಿ)ಯಾಗಿರುವುದು. ಇದರೊಂದಿಗೆ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಮತ್ತು ಹಿಂದಿ ಭಾಷೆಗಳನ್ನು ಬಳಸುವರು.[೧]

ಹಕ್ಕಿಪಿಕ್ಕಿ ಸಮುದಾಯದಲ್ಲಿ ಮೋಟೋ(ದೊಡ್ಡ) ಮತ್ತು ನನ್ನೊ (ಸಣ್ಣ) ಎಂಬ ಎರಡು ವಿಧಗಳೊಂದಿಗೆ ನಾಲ್ಕುಪಂಗಡಗಳಿವೆ. ಅವುಗಳು

೧. ಗುಜರಾತ್‌ಯೋ(ಭುಕ್ಯಾ)

೨. ಪವಾರ್(ಪವಾ)

೩. ಕಾಳಿವಾಳೊ(ಮೂದ್)

೪. ಮೇವಾಡೋ(ಬಾಟ್)

ಈ ಒಂದೊಂದು ಪಂಗಡಗಳಲ್ಲಿ ಮತ್ತೆ ಒಳಪಂಗಡಗಳಿವೆ. ಇವುಗಳನ್ನು ಅವರು ಜಾತ್ ಅಥವಾ ಜಾತಿಗಳೆಂದು, ಪಂಗಡಗಳೆಂದು ಕರೆಯುತ್ತಾರೆ.

೧. ಗುಜರಾತ್‌ಯೋ (ಭುಕ್ಯಾ ಅಥವಾ ಭೀಕೂ) ಪಂಗಡದಲ್ಲಿ ತುಲ್ಲೋವಾಳ್, ಶರವೊ, ಖತ್ರೊ, ಭಗೊ, ನೆವುಲ್‌ಶಾಂ, ಬಾಳೂ,, ಆಂಬೋ, ನಾಗೋ, ಉಧೋ, ನಂದೇ, ನಾಮೂ, ತಾರೇಟ್, ಗ್ಯಾನಿ ಮತ್ತು ಭೋಕುಡಾ (ಮಾರವಾಳ) ಎಂಬ ಒಳಪಂಗಡಗಳು ಇವೆ.

೨. ಪವಾರ್ (ಪವಾ) ಪಂಗಡದಲ್ಲಿ ಲಿಂಬೊ ಮತ್ತು ದಾಮೊ ಎಂಬ ಒಳಪಂಗಡಗಳಿವೆ.

೩. ಕಾಳಿವಾಳೊ (ಮೂದ್) ಪಂಗಡದಲ್ಲಿ ಫಕೀರ್, ದೀಬಡಿ, ಬಂಗಡಿ, ಪಿಪ್ಪಲು, ಪಂಚಿ, ಲಾಲೂ ಹಾಗೂ ಜಗ್ ಮಣ್ ಎಂಬ ಒಳಪಂಗಡಗಳಿವೆ.

೪. ಮೇವಾಡೋ (ಬಾಟ್) ಪಂಗಡದಲ್ಲಿ ಭೀಕೂ, ಖುಷನಾಜಿ, ದೇವೆಸಿಂಗ್, ದುರ್ಗಾಜಿ, ಶಿವೂ, ಶಂಭೋ, ಶಂಜೀ, ಶತ್ತೂ, ಜರಾಮ್, ಅರ್ಜಿ, ಜಂಬಲೊ, ಶಕ್ರೂ, ರಾಮಚಂದರ್ ಹಾಗೂ ದೇಯ್‌ದಾಖ್ ಎಂಬ ಒಳಪಂಗಡಗಳಿವೆ.

ಹಕ್ಕಿಪಿಕ್ಕಿಯವರಲ್ಲಿ ಖೋಡಿಯಾರ್, ಕೊರಬ್ಯಾ, ಪಿಂಪಳಜಾ, ಹರಕತ್ಯಾ, ಸೌಂಡ್ಯ ಬೆಡಗುಗಳಿವೆ. ಸೋದರತ್ತೆ, ಸೋದರಮಾವ ಮತ್ತು ಅಕ್ಕನ ಮಗಳನ್ನು ಸಾಮಾನ್ಯವಾಗಿ ವಿವಾಹವಾಗುತ್ತಾರೆ.

ಹಕ್ಕಿಪಿಕ್ಕಿ ಸಮುದಾಯದವರು ದಾದಾಜಿ, ಅಕಪಾಳ, ಈಕಳಿ, ಖಖತ್, ಶೇಳ್, ಮಮ್ಮಯ್, ಶಿಕೋತರ್, ಫಾಳನ್ನಾರ್, ರಹಾವುಂಡಿ, ಚಾಂದಡಿ, ಇಂಗಳರಾಜ್, ಹನುಮಂತ, ದುಗಾವ್, ಕಾಳ್‌ಕಾ, ಹಕ್ಕತ್, ಬರಕನಾಬೈ, ವಾಗಯ್, ಬೆಕಾಕರ್, ತತ್ತೀಸ್ ಕೋಡ್, ಬಾವಂದಿ ಮತ್ತು ಬೆಖಾಖಾರ್ ದೈವಗಳನ್ನು ಪೂಜಿಸುವುದರೊಂದಿಗೆ ಚಾಮುಂಡಿ, ದುರ್ಗ್ಗಾ, ಎಲ್ಲಮ್ಮ, ನಾಗದಂತಹ ಹಲವಾರು ದೇವರುಗಳನ್ನು ಆರಾಧಿಸುತ್ತಾರೆ. ಕರ್ನಾಟಕದಲ್ಲಿನ ಹಿಂದೂ ಧರ್ಮದ ಎಲ್ಲಾ ಹಬ್ಬಗಳಲ್ಲಿ ಭಾಗವಹಿಸುವುದರ ಮೂಲಕ ಆಚರಿಸುತ್ತಾರೆ. ಹಕ್ಕಿಪಿಕ್ಕಿ ಸಮುದಾಯದವರು ಹಲವಾರು ಕಸುಬುಗಳನ್ನು ಅವಲಂಬಿಸಿದ್ದಾರೆ. ಇವರ ಅಲೆಮಾರಿ ಕಾಲದಿಂದಲೂ ಮುಖ್ಯವಾಗಿ ವ್ಯಾಪಾರ, ಬೇಟೆ ಮತ್ತು ಇತರ ಗುಡಿಕೈಗಾರಿಕೆಗಳು ಇವರ ಉಪಕಸುಬುಗಳಾಗಿವೆ. ಇತ್ತೀಚಿಗೆ ಸರ್ಕಾರದ ಪುನರ್‌ವಸತಿ ಯೋಜನೆಯಡಿಯಲ್ಲಿ ಖಾಯಂ ಆಗಿ ವಾಸಿಸುವ ಕಡೆ ಕೆಲವು ಕುಟುಂಬಗಳನ್ನು ಹೊರತುಪಡಿಸಿ ಉಳಿದ ಕುಟುಂಬಗಳು ವ್ಯವಸಾಯ ಮತ್ತು ಬೇಟೆಯನ್ನು ಅವಲಂಬಿಸಿವೆ. ಹೆಂಗಸರು ಭಾಗಶಃ ಭಿಕ್ಷೆಯೊಂದಿಗೆ ಸಣ್ಣ ವ್ಯಾಪಾರವನ್ನು ಆಶ್ರಯಿಸಿದ್ದಾರೆ. ಸೂಜಿ, ದಬ್ಬಣ, ಪಿನ್ನು, ಕಸ್ತೂರಿ, ಗೋರಂಜನ, ಕರಿಮಣಿ, ಹಾಲಮಣಿ, ನವುಲತುಪ್ಪ, ಉಡಿನತುಪ್ಪ, ರುದ್ರಾಕ್ಷಿ, ಸಣ್ಣ ರುದ್ರಾಕ್ಷಿ, ಜೇನುತುಪ್ಪ, ಹುಲಿ ಉಗುರು, ಹದ್ದಿನ ಉಗುರು, ಮೀಸೆ, ಹಲ್ಲು, ಪಂಚಮುಖಿ ರುದ್ರಾಕ್ಷಿ, ಏಕಮುಖಿ ರುದ್ರಾಕ್ಷಿ, ಚೌಲಿ, ಪೀಪಿ, ನಾಗಮಣಿ, ಹದ್ದಿನ ಚರ್ಮ, ಸಾಲಿಗ್ರಾಮಗಳು, ಬವಾಳಿ, ಸ್ಪಟಿಕದ ಸರ, ಮುಂತಾದ ಸಾಮಗ್ರಿಗಳನ್ನು ಮಾರಾಟ ಮಾಡುತ್ತಾರೆ. ಆಯುರ್ವೇದವು ಇವರ ಬದುಕಿಗಿರುವ ಇನ್ನೊಂದು ಆರ್ಥಿಕ ಭದ್ರತೆ. ಇವರು ತಲೆನೋವು, ಹೊಟ್ಟೆನೋವು, ಶೀತ, ಭೇದಿ, ಚರ್ಮರೋಗ, ದೃಷ್ಟಿ, ವಾಯಿ, ಲಕ್ವಾ, ಇಸುಬು ಇತ್ಯಾದಿ ರೋಗಗಳಿಗೆ ಔಷದೋಪಚಾರ ಮಾಡುತ್ತಾರೆ. ಇವರ ಕಸುಬು ಇವರ ಅಲೆಮಾರಿ ಜೀವನಕ್ಕೆ ಕಾರಣವಾಗಿದೆ. ಇವರು ಕನ್ಯಾಕುಮಾರಿಯಿಂದ ನೇಪಾಳದವರೆಗೆ, ಶ್ರೀಲಂಕಾ, ಸಿಂಗಾಪುರ್, ಹಾಂಗ್‌ಕಾಂಗ್, ಮಲೇಷ್ಯಾ ಮುಂತಾದ ವಿದೇಶಗಳಿಗೆ ಇವರ ಸಂಪರ್ಕ, ಪ್ರಯಾಣ ಇರುವುದು ತಿಳಿದು ಬರುತ್ತದೆ.[೨]

ಕರ್ನಾಟಕ ರಾಜ್ಯದಲ್ಲಿ ಒಟ್ಟು ೫೦ ಬುಡಕಟ್ಟುಗಳು ವಾಸಿಸುತ್ತಿದ್ದು ಬಹುತೇಕ ಬುಡಕಟ್ಟುಗಳ ಬಗ್ಗೆ ಈಗಾಗಲೇ ಅಧ್ಯಯನ ಕೈಗೊಂಡು ಅನೇಕರು ತಮ್ಮ ಎಂ.ಫಿಲ್ ಹಾಗೂ ಪಿಎಚ್.ಡಿ ಪದವಿಗಳನ್ನು ಪಡೆದಿದ್ದಾರೆ. ಆದರೆ ಹಕ್ಕಿಪಿಕ್ಕಿ ಬುಡಕಟ್ಟಿನ ಬಗ್ಗೆ ಯಾರೊಬ್ಬರೂ ಅಷ್ಟು ಗಂಭೀರವಾಗಿ ಅಧ್ಯಯನ ಮಾಡಿಲ್ಲವೆಂದೇ ಹೇಳಬಹುದು. ಮೈಸೂರಿನ ಮಾನವಶಾಸ್ತ್ರ ಸರ್ವೇಕ್ಷಣ ಸಂಸ್ಥೆ (Anthropological Survey of India-ASI)ಯ ವತಿಯಿಂದ ಪ್ರೊ. ಮಾನ್ ಎಂಬುವರು Hakki Pikki-Trapper and Seller' ಎಂಬ ಪುಸ್ತಕವನ್ನು ಇಂಗ್ಲೀಷ್ ಭಾಷೆಯಲ್ಲಿ, ಆರ್. ರಾಜಪ್ಪ ದಳವಾಯಿಯವರು, 'ಹಕ್ಕಿಪಿಕ್ಕಿಯವರ ಸಂಸ್ಕೃತಿ', ಎಸ್.ಜೆ. ಲಾರೆನ್ಸ್ ಡಿ ಸೋಜಾ ಎಂಬುವರು ಇಂಗ್ಲೀಷ್ ಭಾಷೆಯಲ್ಲಿ 'Hakki Pikkis' ಎನ್ನುವ ಪುಸ್ತಕ, ಸುದರ್ಶನ್ ಕುಮಾರ್ ಅವರು

ಬೆಂಗಳೂರು ಹತ್ತಿರದಲ್ಲಿರುವ ಭೂತಾನಹಳ್ಳಿ(ಬನ್ನೇರುಘಟ್ಟ) ಕಾಲೋನಿಯಲ್ಲಿರುವ ಹಕ್ಕಿಪಿಕ್ಕಿಯವರ ಕುರಿತು ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನವನ್ನು ಹಾಗೂ ಕರ್ನಾಟದ ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗದ ವಿನೋದಾನಾಯ್ಕ ಎಂಬುವರು ಶಿವಮೊಗ್ಗ ಜಿಲ್ಲೆಯ ಹಕ್ಕಿಪಿಕ್ಕಿಯರ ಆರ್ಥಿಕ ವಿಷಯವನ್ನು ಕುರಿತು ಪಿಎಚ್.ಡಿ.ಅಧ್ಯಯನವನ್ನು ಕೈಗೊಂಡು ಡಾಕ್ಟರೇಟ್ ಪದವಿ ಪಡೆದಿದ್ದಾರೆ. ರಾಜಪ್ಪ ದಳವಾಯಿ ಹಾಗೂ ಲಾರೆನ್ಸ್ ಡಿ ಸೋಜಾ ಅವರು ಬೆಂಗಳೂರಿನ ಸುತ್ತಮುತ್ತಲಿನ ಜಿಲ್ಲೆಗಳಾದ ಬೆಂಗಳೂರು ಗ್ರಾಮಾಂತರ, ಮೈಸೂರು, ಮಂಡ್ಯ, ಹಾಸನ, ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಹೀಗೆ ಐದು-ಆರು ಜಿಲ್ಲೆಗಳಲ್ಲಿನ ಹಕ್ಕಿಪಿಕ್ಕಿಯರನ್ನು ಅಭ್ಯಾಸ ಮಾಡಿರುವುದು ಕಂಡುಬರುತ್ತದೆ.

ಫರ್ಡಿನಾಂಡ್ ಕಿಟೆಲ್ ರ ಕನ್ನಡ ಕನ್ನಡ ನಿಘಂಟಿನಲ್ಲಿ 'ಹಕ್ಕಿಪಿಕ್ಕಿ' ಎಂಬ ಪದ ಸಿಗುತ್ತದೆ. ಆದರೆ, EdgarThurston ಅವರ Caste and Tribes in Southern India ಎಂಬ ಸಂಪುಟಗಳಲ್ಲಿ ಎಲ್ಲಿಯೂ ಹಕ್ಕಿಪಿಕ್ಕಿ ಎಂಬ ಶಬ್ಧವೇ ಇಲ್ಲ. ಆದರೆ ಅದರ ಬದಲಿಗೆ Shikari, Sikligar ಎಂಬ ಶಬ್ಧಗಳು ಸಿಗುತ್ತವೆ. Thurston ಅವರ ಕೈಯಲ್ಲೂ ಸಹ ಸಿಗದ ಈ ಬುಡಕಟ್ಟು ನಿಜಕ್ಕೂ ಒಂದು ನಿಗೂಢವಾದ ಬುಡಕಟ್ಟು ಎಂದರೂ ತಪ್ಪಾಗಲಾರದು. ಇಷ್ಟೊಂದು ಚಲನಶೀಲ ಬುಡಕಟ್ಟನ್ನು ಭೇಟಿಮಾಡಿ ಮಾತನಾಡಿಸಿದಾಗ, ಇವರಲ್ಲಿ ಕೆಲವರು ತಾವು ಮೂಲತಃ ಗುಜರಾತ್ ರಾಜ್ಯದವರೆಂದು ಹೇಳಿಕೊಂಡರೆ, ಕೆಲವರು ಮೂಲತಃ ರಾಜಸ್ಥಾನ ರಾಜ್ಯದವರೆಂದು ಹೇಳಿಕೊಳ್ಳುತ್ತಾರೆ. ರಾಜಪ್ಪ ದಳವಾಯಿ ಅವರ 'ಹಕ್ಕಿಪಿಕ್ಕಿಯರ ಸಂಸ್ಕೃತಿ' ಎನ್ನುವ ಪುಸ್ತಕದಲ್ಲಿ ಹಾಗೂ ಸಂಶೋಧನಾ ಕಾರ್ಯದಲ್ಲಿ ಕೆಲವು ಹಿರಿಯರು (ವಕ್ತೃಗಳು) ಹೇಳಿರುವ ಹಾಗೆ ಹಕ್ಕಿಪಿಕ್ಕಿಯರು, ನಮ್ಮ ದಾದಾಜಿ (ತಂದೆ)ಗೆ ನಾವು ಒಟ್ಟು ೫ಜನ ಮಕ್ಕಳು, ಅವರುಗಳೆಂದರೆ, ಲಂಬಾಣಿಗರು, ಜೋಗೋರು, ಬೈಲಕಮ್ಮಾರರು, ಮಾರವಾಡಿಗರು, ಮತ್ತು ನಾವುಗಳು. ಮಾರವಾಡಿಗಳು ತಮ್ಮ ಕುಬುದ್ಧಿಯಿಂದ ನಮ್ಮ ಆಸ್ತಿಯನ್ನೆಲ್ಲಾ ಕಿತ್ತುಕೊಂಡು ಶ್ರೀಮಂತರಾದರು, ನಾವು ನಾಲ್ವರು ಮಾತ್ರ ಭಿಕಾರಿಗಳಾಗಿ ಬಿಟ್ಟೆವು ಎಂದು ತಮ್ಮ ವ್ಯಥೆಯ ಕಥೆಯನ್ನು ಹೇಳುತ್ತಾರೆ.

ಹಕ್ಕಿಪಿಕ್ಕಿಯರು ರಜಪೂತ ವಂಶಕ್ಕೆ ಸೇರಿದವರಾಗಿದ್ದು, ಇವರು ವರ್ಣಾಶ್ರಮ ವ್ಯವಸ್ಥೆಯಲ್ಲಿ ಕ್ಷತ್ರಿಯ ವಂಶಕ್ಕೆ ಸೇರಿದವರಾಗಿದ್ದಾರೆ. ಯಾಕೆಂದರೆ, ಹಕ್ಕಿಪಿಕ್ಕಿ ಎಂಬುದರ ಅರ್ಥ ಹಕ್ಕಿಪಕ್ಷಿಗಳನ್ನು ಹಿಡಿದು ಜೀವಿಸುವವರು ಎಂಬುದಾಗಿದೆ. ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನಗಳಲ್ಲಿ ದೆಹಲಿ, ತಮಿಳುನಾಡು, ಆಂಧ್ರಪ್ರದೇಶಗಳಲ್ಲಿ ತಮ್ಮ ಸಂಬಂಧಿಗಳು ಇದ್ದಾರೆಂದು ಹೇಳುತ್ತಾರೆ. ಮಹಾರಾಣಾ, ಶಿವಾಜಿ ಮಹಾರಾಜರು ತಮ್ಮ ಗುರುಗಳು ಎನ್ನುತ್ತಾರೆ. ಇವರು ಚಾಮುಂಡೇಶ್ವರಿಯನ್ನು ಪೂಜಿಸಿ ಭಕ್ತರಾಗಿ ಕುಲದೇವತೆಯನ್ನಾಗಿ ಮಾಡಿಕೊಂಡಿದ್ದಾರೆ. ಅಕ್ಬರ್ ಮತ್ತು ರಾಣಾ ಪ್ರತಾಪ್‌ಸಿಂಗ್‌ರ ಜಗಳದಿಂದಾಗಿ ನಾವು ಈ ಕಡೆ ಕರ್ನಾಟಕಕ್ಕೆ ಬರಬೇಕಾಯಿತು ಎಂದು ಹೇಳುತ್ತಾರೆ. ಅಕ್ಬರ್ ದೇಶವನ್ನೆಲ್ಲಾ ತನ್ನದನ್ನಾಗಿ ಮಾಡಿಕೊಳ್ಳಬೇಕೆಂದುಕೊಂಡು, ರಾಣಾ ಪ್ರತಾಪನ ನಗರಕ್ಕೆ ಬಂದು ಡೇರೆಹಾಕಿದ್ದನು. ರಾಣಾ ತನಗೆ ಅತೀ ಸಮೀಪದಲ್ಲಿ ಬಲಗೈ ಭಂಟರಂತಿದ್ದ ಜಂಬಲ್ ಫತೋರಿಗೆ

ಕೋಟೆಯನ್ನು ಉಸ್ತುವಾರಿಗೆ ವಹಿಸಿದನು. ಜಂಬಲ್ ಫತೋರು ದೇವಿ (ಚಾಮುಂಡಿ) ಹತ್ತಿರ ಹೋಗಿ ಅಮ್ಮ ಚಾಮುಂಡೇಶ್ವರಿ, ಅಕ್ಬರ್ ಬಂದಿದ್ದಾನೆ ಅಂತ ಕೇಳಿಕೊಂಡನು. ಆಗ ಅಮ್ಮ ಬಂದು ಹುಣಸೆ ಮಾವಿನ ಬೀಜಗಳೆರಡನ್ನು ಕೊಟ್ಟಳು. ಇವನ್ನು ಹಾಕಿ ಬೆಳೆಸು, ಇವು ಬೆಳೆದು ದೊಡ್ಡವಾದರೂ ಅಕ್ಬರ್ ನಿನ್ನನ್ನು ಗೆಲ್ಲಲಿಕ್ಕಾಗುವುದಿಲ್ಲ ಎಂದು ಆಶೀರ್ವದಿಸಿದಳು. ಅದೇ ರೀತಿ ಬೀಜಹಾಕಿ ಬೆಳೆಸಲು ಅಕ್ಬರ್ ಅಲ್ಲಿಂದ ತನ್ನ ಡೇರೆಗಳನ್ನು ಕೀಳಲಿಕ್ಕೆ ಶುರುಮಾಡಿದನು. ಅಮ್ಮ ಇನ್ನೂ ಒಂದು ಮಾತನ್ನು ಹೇಳಿತು. ಆ ಮಾತೇನೆಂದರೆ, 'ಈ ಬಂಗಾರದ ಕುದುರೆ ಹತ್ತು ಇದು ಒಂದು ಹೊಡೆತಕ್ಕೆ ದೇವಕೊಂಡಕ್ಕೆ, ಇನ್ನೊಂದು ಹೊಡೆತಕ್ಕೆ ಸುರಿಸ್‌ಕೊಂಡಕ್ಕೆ ಹೋಗುತ್ತದೆ' ಎಂದು ಹೇಳಿಕೊಟ್ಟಿತು. ಆ ಕುದುರೆಯನ್ನೇರಿ ಒಂದು ಹೊಡೆತಕ್ಕೆ ದೇವಕೊಂಡಕ್ಕೆ ಬಂದನು. ಅಲ್ಲಿ ಸ್ನಾನ ಮಾಡಿದನು. ಇನ್ನೊಂದು ಹೊಡೆತಕ್ಕೆ ಸುರಿಸ್‌ಕೊಂಡಕ್ಕೆ ಹೋದನು. ಅಲ್ಲಿ ಬಾಯಿ ತೊಳೆದುಕೊಂಡು ಬೇಡಿಕೊಂಡಾಗ ಸೈನಿಕರ ಬಲಬಂದಿತು. ಆಗ ದೇವಿ ಮತ್ತೆ ಪ್ರತ್ಯಕ್ಷವಾಗಿ ಈ ಒಂದು ಕತ್ತಿ ಕೊಡ್ತೀನಿ. ಈ ಕತ್ತಿಗೆ ಅಕ್ಬರನೇ ಸಿಕ್ತಾನೋ ಅಥವಾ ಅವನ ಮಗನೆ ಸಿಕ್ತಾನೋ ಗೊತ್ತಿಲ್ಲ ಅಂತೇಳಿ ಕತ್ತಿಕೊಟ್ಟು ಮಾಯವಾಗಿ ಬಿಟ್ಟಿತು. ಆ ಮೇಲೆ ಜಗಳವಾಯಿತು. ಅಕ್ಬರ್ ಸಿಗಲಿಲ್ಲ. ಅವನ ಮಗ ಸಿಕ್ಕುಬಿಟ್ಟನು. ಆಗ ಅಲ್ಲಿ ರಕ್ತದ ಕೋಡಿಯೇ ಹರಿಯಿತಂತೆ. ಅಮ್ಮ ಮುಂಚಿತವಾಗಿಯೇ ಹೇಳಿದಂತೆ, ಮೊದಲ ರಕ್ತ ನನಗೆ 'ತಗೋಅಮ್ಮ' ಅಂತ ಕತ್ತಿಯಿಂದ ಕಾಣಿಸಬೇಕು ಅಂತ. ಈ ಜಗಳದಲ್ಲಿ ಆತ ಅಮ್ಮನಿಗೆ ರಕ್ತ ತೋರಿಸೋದನ್ನು ಮರೆತುಬಿಟ್ಟನು. ಬದಲಿಗೆ ರಕ್ತ ತೆಗೆದು ತನ್ನ ಹಣೆಗೆ ಇಟ್ಟುಕೊಂಡನು. ಆಗ ದೇವಿ ಅವನಿಗೆ ಶಾಪಕೊಟ್ಟಳು. ನಿನ್ನ ಕತ್ತಿ ನಿನಗೆ ತಿರುಗಲಿ ಎಂದು ಆಗ ಜಂಬಲ್ ಸಾವಿಗೀಡಾದ ಅವನ ಹೆಂಡತಿಯು ಬಂದು ನೋಡಿದಳು. ತನ್ನ ಗಂಡ ಕಾಣಲಿಲ್ಲ. ಆಗ ಅಮ್ಮನಿಗೆ 'ನನ್ನ ಗಂಡನ ತಲೆ ತೋರಿಸಿಕೊಟ್ಟರೆ ನಾನು ಸತಿ ಆಗ್ತೀನಿ' ಅಂತ ಬೇಡಿಕೊಂಡಳು. ಆಗ ಮುಂಡ ಎದ್ದು ನಿಂತು ಬಿಟ್ಟಿತು. ಹತ್ತು ನಿಮಿಷ ಆದ ಮೇಲೆ ಕೆಳಗೆ ಬಿದ್ದಿತು. ಆತನ ಮಡದಿ ಕುಮುದ ರಾಣಿಯು ತನ್ನ ಮಗನಿಗೆ 'ಮಗನೇ ನಿನ್ನ ಅಪ್ಪನ ಜೊತೆ ನಾನು ಸತಿ ಆಗ್ತೀನಿ' ಎಂದು ಗಂಡನೊಂದಿಗೆ ತಾನು 'ಬೆಂಕಿಗೆ ಬಿದ್ದು ಸತಿಯಾದಳು. ಆಗ ಉಳಿದ ಸಣ್ಣ ಮಕ್ಕಳಾದ ನಾವು ಅಂದರೆ ನಮ್ಮ ಪೂರ್ವಜರಾದ ಲಾಲಿ, ಲೋಧಿರು ಗತಿಯಲ್ಲದೆ ಅಲ್ಲಿ ಇಲ್ಲಿ ಬೇಡೋದು ತಿನ್ನೋದು ಮಾಡುತ್ತಾ ಊರೂರು ಸುತ್ತುತ್ತಾ ಕರ್ನಾಟಕಕ್ಕೆ ಬಂದೇವು' ಎಂದು ತಮ್ಮ ಬುಡಕಟ್ಟಿನ ಐತಿಹಾಸಿಕ ಕಥೆ ಹೇಳುತ್ತಾರೆ. ಈ ರೀತಿಯಾಗಿ ಹಕ್ಕಿಪಿಕ್ಕಿ ಬುಡಕಟ್ಟಿನಲ್ಲಿ ಅನೇಕ ಪುರಾಣ ಕಥೆಗಳು, ಐಹಿತ್ಯಗಳು ಚಾಲ್ತಿಯಲ್ಲಿವೆ. ಆದರೆ ಇವುಗಳನ್ನು ಖಚಿತಪಡಿಸಲು ಇವರಲ್ಲಿ ಯಾವುದೇ ದಾಖಲೆಗಳಿಲ್ಲ ಕಂಠಸ್ತ ಪುರಾಣಗಳಿವೆ. ಸಾಮಾನ್ಯವಾಗಿ ಈ ಬುಡಕಟ್ಟಿನವರು ಮುಂದುವರೆದ ಸಮಾಜದಲ್ಲಿ ಬಹಳಷ್ಟು ಅಸಡ್ಡೆಗೆ ಒಳಗಾಗಿದ್ದಾರೆ. ಒಂದಾನೊಂದು ಕಾಲದಲ್ಲಿ ಕಾಡಿನ ರಾಜರಂತೆ ಮೆರೆದ ಈ ಬುಡಕಟ್ಟಿನವರು ಈಗ ನಾಡಿನಲ್ಲಿ ಬಿಕ್ಷುಕರ ತರಹದ ಜೀವನವನ್ನು ಮಾಡುತ್ತಿರುವುದು ನಿಜಕ್ಕೂ ವಿಪರ್ಯಾಸವೇ ಸರಿ. ಬೇರೆ ಜಾತಿಯವರು ಇವರನ್ನು ಪರಕೀಯರಂತೆ ಇಲ್ಲವೇ ಒಂದು ತರಹದ ಕೀಳರಿಮೆಯಿಂದ

ನೋಡುವುದರಿಂದ ನಾವು ಈ ಆಧುನಿಕ ಸಮಾಜದವರಲ್ಲ, ನಮಗೂ ಇವರಿಗೂ ಏನೂ ಸಂಬಂಧವಿಲ್ಲ ಎಂದು ಭಾವಿಸಿ ಊರಾಚೆಯ ಸ್ಥಳಗಳಲ್ಲಿಯೇ ವಾಸ ಮಾಡುವುದನ್ನು ಈಗಲೂ ಕಾಣಬಹುದಾಗಿದೆ.[೩]

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಇಂದಿಗೂ ಕೂಡ ಅಲೆಮಾರಿ ಬುಡಕಟ್ಟು ಸಮುದಾಯವಾಗಿಯೇ ತನ್ನನ್ನು ಗುರುತಿಸಿಕೊಂಡಿದೆ. ಒಂದುಸ್ಥಳದಿಂದ ಇನ್ನೊಂದು ಸ್ಥಳಕ್ಕೆ ತಮ್ಮ ಬದುಕಿಗಾಗಿ ವಲಸೆ ಹೋಗುತ್ತಲೇ ಇರುತ್ತಾರೆ. ಇವರು ವಾಸಿಸಲಿಕ್ಕೆ ನಿರ್ದಿಷ್ಟ ಸ್ಥಳ ಮತ್ತು ಮನೆಗಳು ಇದ್ದರೂ ಕೂಡ ವರ್ಷದಲ್ಲಿ ಇಂತಿಷ್ಟು ದಿನಗಳು ಎಂದು ವಿವಿಧ ಊರುಗಳು, ಸ್ಥಳಗಳಲ್ಲಿ ಸಂಚರಿಸುತ್ತಲೇ ಇರುತ್ತಾರೆ.

ಹಕ್ಕಿಪಿಕ್ಕಿ ಸಮುದಾಯದಲ್ಲಿ ಕುಟುಂಬ ಮತ್ತು ಕುಲಸಂಬಂಧವುಳ್ಳ ವ್ಯಕ್ತಿಗಳ ಆಂತರಿಕ ಸಾಮಾಜಿಕ ವ್ಯವಸ್ಥೆ ಇದೆ. ಈ ವ್ಯವಸ್ಥೆ ಆದಿಮ ಕಾಲದಿಂದ, ಬೆಳೆದು ಬಂದಿದೆ. ಈ ಸಮುದಾಯವು ಆದಿಮ ಬುಡಕಟ್ಟು ಸಂಪ್ರದಾಯದಂತೆ, ಜೀವನವನ್ನು ನಿರ್ವಹಿಸಿಕೊಂಡು ಬಂದಿದೆ. ಇವರು ದಿನನಿತ್ಯದ ಆಹಾರಕ್ಕಾಗಿ ಕಾಡು, ಮೇಡು, ಗುಡ್ಡಗಳನ್ನು ಸುತ್ತಿ, ಪ್ರಾಣಿ, ಪಕ್ಷಿ, ಗೆಡ್ಡೆ ಗೆಣಸುಗಳನ್ನು ಸೇವಿಸುತ್ತಾ ಜೀವನವನ್ನು ಸಾಗಿಸುತ್ತಾ ಬಂದಿದ್ದಾರೆ. ಬೇಟೆ ಮತ್ತು ಆಹಾರ ಸಂಗ್ರಹಣೆಯ ಮುಖಾಂತರವಾಗಿ, ವ್ಯವಸ್ಥಿತವಾಗಿ, ಸಂಘಟಿತವಾಗಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುತ್ತಾ ಜೀವನವನ್ನು ನಡೆಸಿಕೊಂಡು ಬಂದಿದ್ದಾರೆ. ಬೇಟೆಯ ಹವ್ಯಾಸದಿಂದ ಕೃಷಿಕಾರ್ಯವನ್ನು ಮಾಡುತ್ತಾ ಒಂದು ಕಡೆ ನೆಲೆ ನಿಂತು, ಕುಟುಂಬ ವ್ಯವಸ್ಥೆಯ ಸಾಮಾಜಿಕ ವ್ಯವಸ್ಥೆಯಲ್ಲಿ ಅವಿಭಕ್ತ ಮತ್ತು ವಿಭಕ್ತ ಕುಟುಂಬಗಳಾಗಿ ಮಾರ್ಪಾಟನ್ನು ಹೊಂದಿದ್ದಾರೆ. ಇವರು ತಮ್ಮ ಸುತ್ತ-ಮುತ್ತಲ ಸಮುದಾಯಗಳ ಒಡನಾಟದಿಂದ ಇವರ ಸಂಪ್ರದಾಯ, ಧಾರ್ಮಿಕತೆ, ಆಚಾರ-ವಿಚಾರ, ಭಾಷೆ, ಉಡುಗೆ ತೊಡುಗೆಗಳಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಈ ಸಮುದಾಯದ ಹಿರಿಯರು ತಮ್ಮ ತಲೆಯ ಮುಡಿಯ ಕೂದಲಿನಿಂದ ತುರುಬು ಕಟ್ಟುವುದನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ.

**ಹಕ್ಕಿಪಿಕ್ಕಿ ಜನಾಂಗದ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಹಿನ್ನೆಲೆ**

೧. ಹಕ್ಕಿಪಿಕ್ಕಿ ಜನಾಂಗದ ಪ್ರಾಚೀನತೆಯನ್ನು ಕುರಿತು ಅನುಭವಿ ಹಿರಿಯರು ಹೇಳುವ ಶ್ಲೋಕ ಈ ರೀತಿ ಇದೆ.

ಮೊದಲೇಮ ದೂಡ್ ದೂಡೇಮಾಯ್ತಿ ದಜ್
ದಜ್ಜೇಮ ಕವದಜ್ ಕವದಜ್ಜೇಮ ಕೊರಪಾಳ್
ಕೊರಪಾಳೇತಿ ಅಭಿಚಂದ್ ಅಭಿಚಂದೇತಿ ವಗಾದ್
ವಗಾದೇತಿ ಜಗಾದ್ ಜಗದೇತಿ ಸರಿಸೂರಜ್
ಸರಿಸೂರಜೇರ ಬೇಟ್ಬೇಟದೀ ಹಾಬಲ್ ಕಾ ಹಿಂದೂ
ಕಾಬಲ್ ಕಾ ಮುಸಲ್ಮಾನ್ ಓರ್‌ವರ್‌ಕರಣ್ ಹೂಯೋ

ಕರಣೇತಿ ಕಾಸಿಂ ಕಾಸಿಮೇತಿ ರತನ್ ರತನೇರ್ ಬೇಟ್ಬೇಟಾದೀ

ತೀಡಾನ್ ಭಾಡಾ ತೀಡರೋಕೋರ್ ಭಾಡರೊಗೋರ್

(ಮೊದಲಿಗೆ ಮಣ್ಣು ಹುಟ್ಟಿತು ಆನಂತರ ಭೂಮಿಯ ಮೇಲೆ ಜೀವಿಗಳು ಹುಟ್ಟಿದವು ಕಾಲಕ್ರಮೇಣ ಸೂರ್ಯಹುಟ್ಟಿದ ಸೂರ್ಯನ ಮಕ್ಕಳು ಇಬ್ಬರು ಹಾಬಲಿನ ಹಿಂದು-ಕಾಬಲಿನ ಮುಸಲ್ಮಾನ್ ಕಾಲಕ್ರಮೇಣ ಕರಣ್ ಎಂಬುವನು ಹುಟ್ಟಿದ ಅವನ ನಂತರ ಕಾಸಿಂಹುಟ್ಟಿದ ಕಾಸಿಮನ ಮಗನೇ ರತನ್ ರತನ್ನನಿಗೆ ಇಬ್ಬರು ಮಕ್ಕಳು ತೀಡಾ ಮತ್ತು ಭಾಡಾ ಎಂದು)

ತೀಡಾನ ಮಕ್ಕಳು ಲಂಬಾಣಿಗಳಲ್ಲದವರು, ಭಾಡಾನ ಮಕ್ಕಳು ಲಂಬಾಣಿಗಳು. ಲೇಡಾನ ಮಕ್ಕಳು ಮೂವರು ಜೋಗಡೇರೊ(ಜೋಗೇರು), ಬೀಮಡೇರೊ(ವಾಗರಿ), ಖೀಮಡೇರೊ (ಬೈಲ ಕಮ್ಮಾರ), ಬೀಮಡೇರೋ ಅಥವಾ ವಾಗರಿಗಳನ್ನೇ ಹಕ್ಕಿಪಿಕ್ಕಿಯರು ಎಂದು ಕರೆಯುವುದು.[೪]

೨. ಮನುಷ್ಯ ಹುಟ್ಟಿದಾಗಿನಿಂದಲೂ ನಾವಿದ್ದೇವೆ. ನಮ್ಮ ದೊಡ್ಡ ದೇವರಾದ ದಾದಾಜಿ ಜೀವವನ್ನು ಸೃಷ್ಟಿಸಿದನು. ಆ ಜೀವಕ್ಕೆ ನೆಲ ಇರಲಿ ಎಂದನು. ಆ ಕಾಲದಲ್ಲಿ ಈ ನೆಲವನ್ನು ಒಂದು ಹೆಣ್ಣು ದೆವ್ವ ಆಳುತ್ತಿದ್ದಳು. ಆ ದೆವ್ವ ದೊಡ್ಡ ದೇವರಾದ ದಾದಾಜಿಗೆ ಈ ನೆಲವನ್ನು ಕೊಟ್ಟು ಜೀವಿಗಳೆಲ್ಲ ನಿನ್ನ ಅಂಕೆಯಲ್ಲಿರಲಿ ಸತ್ತವರೆಲ್ಲ ನೆಲದೊಳಕ್ಕೆ ನನ್ನ ಅಂಕೆಗೆ ಬರಲಿ ಎಂದು ಹೇಳಿದಳು. ಈ ಒಪ್ಪಂದದ ಪ್ರಕಾರ ಆ ಹೆಣ್ಣು ದೆವ್ವವನ್ನು ತೃಪ್ತಿಪಡಿಸಲು ಸತ್ತ ಮನುಷ್ಯ ಮತ್ತು ಅವನ ವಸ್ತುಗಳನ್ನು ನೆಲದಲ್ಲಿ ಹೂಳುತ್ತಾರೆ. ಏಕೆಂದರೆ ಆ ದೆವ್ವಕ್ಕೆ ಸೇರಿದ ಆಸ್ತಿಯೆಂದು, ದಾದಾಜಿ ಮೊದಲು ಅವನನ್ನೇ ಕಬಳಿಸುವಂತಹ ರಾಕ್ಷಸನನ್ನು ಸೃಷ್ಠಿಮಾಡಿದನು. ಆ ಸಮಯದಲ್ಲಿ ದಾದಾಜಿ ಅವನ ಸಹಚರ ದೇವರು ಮತ್ತು ದೇವತೆಗಳನ್ನು ರಾಕ್ಷಸರನ್ನೆಲ್ಲಾ ಮುಗಿಸುವುದಕ್ಕೆ ಕೇಳಿಕೊಂಡನು. ಅವರಲ್ಲಿ ಪ್ರಮುಖವಾದ ಒಂದು ಹೆಣ್ಣು ದೇವತೆ ವಿಕ್ಕಲಿ ಎಂಬುವಳು ದಾದಾಜಿಯ ಸಹಾಯಕ್ಕೆ ಬಂದು ಬೈಯಂಖಾಖೂರ್‌ನನ್ನು ಕೊಂದಳು. ಕೆಲವರು ವಿಕ್ಕಲಿ ದೇವತೆಯ ನೇರ ಸಂತಾನದವರೆಂದು ನಂಬುತ್ತಾರೆ. ಒಂದು ದಿನ ವಿಕ್ಕಲಿ ತನ್ನ ರಥದಲ್ಲಿ ಕುಳಿತುಕೊಂಡು ಎಲ್ಲಿಯೋ ಹೋಗುತ್ತಿರುತ್ತಾಳೆ. ತಕ್ಷಣ ಅವಳ ರಥ ಮಣ್ಣಿನಲ್ಲಿ ಹೂತು ಹೋಗುತ್ತದೆ. ಆಕೆ ಆ ರಥವನ್ನು ಎಳೆಯುತ್ತಿರುವಾಗ ಅವಳ ಎರಡೂ ಕೈಗಳ ಮೇಲೆ ಎರಡು ಗುಳ್ಳೆಗಳು ಹುಟ್ಟುತ್ತವೆ. ಅವುಗಳಿಂದ ಪವಾರೊ ಮತ್ತು ಕಾಳಿವಾಳೊಗಳೆಂಬ ಎರಡು ಹಕ್ಕಿಪಿಕ್ಕಿಯರ ಗುಂಪುಗಳ ಆರಾಧ್ಯ ದೇವರುಗಳಾದ ಜೋಗನ್ ಮತ್ತು ದುಗಾವೊ ಕಾಲ್ಕಾಗಳು ಹುಟ್ಟಿದರೆಂದು ನಂಬುತ್ತಾರೆ.

ಹಕ್ಕಿಪಿಕ್ಕಿಯರ ಜನಾಂಗದ ಬಗ್ಗೆ ಇರುವ ಇಂತಹ ಕಥೆಗಳು ಐತಿಹಾಸಿಕ ಮತ್ತು ಪೌರಾಣಿಕಥೆಗಳ ಮಿಶ್ರಣವಾಗಿವೆ. ಇವು ಮುಖ್ಯವಾಗಿ ಮೌಖಿಕ ಪರಂಪರೆಯಲ್ಲೇ ರೂಢಿ ಇರುವಂತವುಗಳು. ಅವರ ಬಗ್ಗೆ ದಾಖಲಾತಿಗಳು, ಆಧಾರಗಳು ಇಲ್ಲದಿರುವುದರಿಂದ ಮತ್ತು ತಮ್ಮ ಜನಾಂಗದ ಬಗ್ಗೆ ಒಂದೊಂದು ಊರುಗಳಲ್ಲಿರುವ ಹಕ್ಕಿಪಿಕ್ಕಿಯರು ಒಂದೊಂದು ಬಗೆಯ ಕತೆಗಳನ್ನು ಹೇಳುವುದರಿಂದ ಐತಿಹಾಸಿಕ ಅಂಶಗಳೊಂದಿಗೆ ಪೌರಾಣಿಕ ಅಂಶಗಳು ಬೆರೆತು ಹೋಗಿವೆಯೆಂದೇ ಹೇಳಬೇಕಾಗುತ್ತದೆ.[೫]

೩. ಅಕ್ಬರ್ ಮತ್ತು ರಾಣಾ ಪ್ರತಾಪ ಸಿಂಗನ ಕಾಳಗದಿಂದಾಗಿ ಧೀರರಾದ ಜಮುಲ್ ಫತ್ತು ಮರಣದ ನಂತರ ಸೋತು ರಾಣಾ ಪ್ರತಾಪಸಿಂಗ್‌ನ ಅನುಯಾಯಿಗಳು, ಆತನ ಸೈನ್ಯದಲ್ಲಿದ್ದು ಕೊನೆಯವರೆಗೂ ಹೋರಾಡಿದರೆನ್ನಲಾದ ಹಕ್ಕಿಪಿಕ್ಕಿ ಪಂಗಡದವರು, ಮುಸಲ್ಮಾನರಿಂದ ಉಂಟಾಗಬಹುದಾದ ದಬ್ಬಾಳಿಕೆಯಿಂದ ತಪ್ಪಿಸಿಕೊಳ್ಳಲು ಕಾಡು ಪಾಲಾದರು. ಊರಿಂದೂರಿಗೆ ತಿರುಗುವ ಅಲೆಮಾರಿಗಳಾದರು. ಇವರಲ್ಲಿ ಬವರಿಯಾ ಸಮುದಾಯವೂ ಸೇರಿರುವುದು. ಇವರು ಪಂಜಾಬ್, ಹರಿಯಾಣ, ಮಧ್ಯಪ್ರದೇಶ, ಜಮ್ಮು ಕಾಶ್ಮೀರದಲ್ಲಿದ್ದಾರೆ.

೪. ಜೀವನ ನಿರ್ವಹಣೆಗಾಗಿ ಅಲೆದಾಡುತ್ತಾ ತಮ್ಮ ಮೂಲಪುರುಷ ಗುಜರಾತ್‌ನಿಂದ, ಮೇವಾಡದಿಂದ ಬಂದುದಾಗಿ ಹೇಳುತ್ತಾ ಗುಜರಾತ್ಯೋ, ಮೇವಾಡೋ, ಆದರು. ಪವಾರ್‌ಗಡದಿಂದ ಹಾಗೂ ಆಂಧ್ರದ ಡಿಂಬರ್ಯಾವಾಡದಿಂದ ಬಂದವರು ಪವಾರ್ ಮತ್ತು ಕಾಳಿವಾಳೊಗಳಾದರು ಎನ್ನುತ್ತಾರೆ.

೫. ಭೀಕರ ಬರಗಾಲದಿಂದಾಗಿ ತೀಡಾನ ಮಕ್ಕಳಾದ ಜೋಗಿ, ಬೈಲುಕುಮ್ಮಾರ, ವಾಗ್ರಿ (ಹಕ್ಕಿಪಿಕ್ಕಿಯರು), ಲಂಬಾಣಿ ಹಾಗೂ ಮಾರ್ವಾಡಿಗಳು, ತಮ್ಮ ತಮ್ಮ ಕಸುಬಿನ ಮೂಲ ಹಿಡಿದು ವಲಸೆ ಹೋಗುತ್ತಾ, ಕಾಲಕ್ರಮೇಣ ನೆಲೆನಿಲ್ಲಲು ಸರ್ಕಾರ ಗುರುತಿಸುವುದು ಆಗಿದೆ ಎನ್ನುತ್ತಾರೆ. ಆದರೆ ಹಕ್ಕಿಪಿಕ್ಕಿಯರು ಮಾತ್ರ ಇನ್ನೂ ವಲಸೆ ಹೋಗುತ್ತಿರುವುದನ್ನು ಕಂಡರೆ ಅವರಲ್ಲಿರುವ ಅನಕ್ಷರತೆ, ಇನ್ನೊಬ್ಬರ ಅಡಿಯಲ್ಲಿ ಕೆಲಸ ನಿರ್ವಹಿಸಲಾರದ ಸ್ವಾಭಿಮಾನಿಕೆ ಹಾಗೂ ಅಲೆಮಾರಿತನವೇ ಎದ್ದು ಕಾಣುತ್ತದೆ.[೬]

೬. ಹಕ್ಕಿಪಿಕ್ಕಿಯರ ಜನಾಂಗದ ಬಗ್ಗೆ ಇರುವ ಹಕ್ಕಿಪಿಕ್ಕಿ ಸಮುದಾಯದ ಹಿರಿಯರು ಹೇಳುವ ಕಥೆಗಳು.

ಬ್ರಹ್ಮಾಂಡವು ಸೃಷ್ಟಿಯಾದಾಗ ಲೋಕ ಸಂಚಾರಕ್ಕಾಗಿ ಶಿವ ಪಾರ್ವತಿಯರು ಹೊರಟಾಗ ಲೋಕವೆಲ್ಲಾ ನಿಶ್ಯಬ್ಧವಾಗಿ ಇರುವುದನ್ನು ಕಂಡು ಭೂಮಿಯ ಮೇಲೆ ಶಿವಪಾರ್ವತಿಯರು ಇಳಿದು ಬಂದರು. ಭೂಮಿಯ ಒಂದು ಹಿಡಿ ಮಣ್ಣನ್ನು ತೆಗೆದುಕೊಂಡು ಎರಡು ಮಣ್ಣಿನ ಮೂರ್ತಿಗಳನ್ನು ಮಾಡಿ ಅದರಲ್ಲಿ ಒಂದು ಹೆಣ್ಣು, ಒಂದು ಗಂಡು ಮಣ್ಣಿನ ಮೂರ್ತಿಗಳನ್ನು ಬಿಟ್ಟು ಲೋಕ ಸಂಚಾರಕ್ಕೆ ಹೊರಟು ಹೋದರು. ಜೊತೆಗಾರರಾಗಿ ಒಂದು ನಾಯಿ ಮತ್ತು ಕೋಳಿಯನ್ನು ಮಾಡಿ ಜೀವಕೊಟ್ಟರು. ಆದರೆ ಮಾನವ ರೂಪದ ಮೂರ್ತಿಗಳಿಗೆ ಬೆಳಕು ಹರಿವ ಸಮಯದಲ್ಲಿ ಜೀವ ನೀಡಿದರು. ಆದ್ದರಿಂದ ಹಗಲೆಲ್ಲಾ ಕೆಲಸಕಾರ್ಯಗಳಲ್ಲಿರುವವರು ಎನ್ನುತ್ತಾರೆ. ಶಿವಪಾರ್ವತಿಯರ ಮೂರ್ತಿಗಳು ಅಣ್ಣ ತಂಗಿಯಾಗಿ ಬಾಳ ತೊಡಗಿದರು. ಹೀಗೆ ದಿನ ಕಳೆದಂತೆ ಕಾಡಿನಲ್ಲಿ ಜೀವನ ಸಾಗಿಸುತ್ತಾ ದಿನ ಕಳೆದರು. ಒಂದು ದಿನ ಶಿವಪಾರ್ವತಿಯರು ಅದೇ ಮಾರ್ಗವಾಗಿ ಲೋಕ ಸಂಚಾರ ಮುಗಿಸಿಕೊಂಡು ಬರುವಾಗ ತಾವು ಮಾಡಿದ ಮಣ್ಣಿನ ಮೂರ್ತಿಗಳು ಹೇಗೆ ಜೀವನ ನಡೆಸುತ್ತಿವೆ ನೋಡಿ ಹೋಗೋಣ ಎಂದು ಪಾರ್ವತಿಯು ಶಿವನಿಗೆ ತಿಳಿಸಿದಳು. ಶಿವನು

ಹಾಗೆಯೇ ಅಗಲಿ ಎಂದು ಆ ಜಾಗಕ್ಕೆ ಬಂದು ನೋಡಿದಾಗ, ತಾವು ಮಾಡಿದ ಮೂರ್ತಿಗಳು ಮಾನವ ಅವತಾರ ತಾಳಿ, ಕಾಡಿನಲ್ಲಿ ಅಣ್ಣ ತಂಗಿಯಾಗಿ ಬಾಳುವುದನ್ನು ಕಂಡು ಶಿವ ಪಾರ್ವತಿಯರು, ಅವರಿಬ್ಬರನ್ನು ಹತ್ತಿರ ಕರೆಯಿಸಿ, 'ನೀವು ಈ ತರ ಜೀವನ ನಡೆಸಿದರೆ ಮುಂದೆ ಲೋಕ ಬೆಳೆಯುವುದಾದರೂ ಹೇಗೆ, ಆದ್ದರಿಂದ ಗಂಡ ಹೆಂಡತಿಯಾಗಿ ಜೀವನವನ್ನು ನಡೆಸಿ' ಎಂದು ಪಕ್ಕದಲ್ಲಿ ಬೆಳೆದಿದ್ದ ಹಣ್ಣನ್ನು ತಿನ್ನಲುಕೊಟ್ಟಗ ಮಾನವ ಸದೃಶ ಪ್ರಕೃತಿಯಲ್ಲಿನ ಆಸೆ ಆಕಾಂಕ್ಷೆಗಳ ಪರಿಚಯವಾಯಿತು. ಅವರಿಬ್ಬರಿಗೂ ವಿವಾಹವನ್ನು ಮಾಡಿಸಿದರು. ಆನಂತರ ಗಂಡ ಹೆಂಡತಿಯಾಗಿ ಬಾಳಬೇಕೆಂದರು. ನಿಮ್ಮ ಹೊಟ್ಟೆ ಜೀವನಕ್ಕಾಗಿ ಕಾಡಿನಲ್ಲಿ ಬೆಳೆಯುವ ಗೆಡ್ಡೆ ಗೆಣಸುಗಳನ್ನು ತಿಂದು ಜೀವನವನ್ನು ಸುಖವಾಗಿ ನಡೆಸಿಕೊಂಡು ಹೋಗಿ ಎಂದು ಶಿವಪಾರ್ವತಿಯರು ಆಶೀರ್ವದಿಸಿದರು. ಕಾಲಕಳೆದಂತೆ ಅವರ ಹೊಟ್ಟೆಯಿಂದ ಆರು ಜನ ಗಂಡುಮಕ್ಕಳು ಆರುಜನ ಹೆಣ್ಣುಮಕ್ಕಳು ಜನಿಸಿದರು. ಎಲ್ಲರೂ ಸೇರಿ ಜೀವನ ನಡೆಸುತ್ತಾ ಕಾಲಕಳೆದಂತೆ ಮಕ್ಕಳು ಬೆಳೆಯತೊಡಗಿದರು. ಇವರು ಬೆಳೆದಂತೆ ಇವರ ತಂದೆ ತಾಯಿ ತಮಗೆ ಶಿವ ಪಾರ್ವತಿಯರು ಮಾಡಿದ ಮದುವೆ ಮಾರ್ಗವನ್ನೇ ಇವರು ತಮ್ಮ ಮಕ್ಕಳಿಗೆ ಮಾಡಬೇಕೆಂದು ಇಚ್ಛಿಸಿದರು. ಆದ್ದರಿಂದ ಅವರ ಮಕ್ಕಳನ್ನು ಆರು ಗಂಡು ಮಕ್ಕಳಿಗೆ ಆರು ಹೆಣ್ಣು ಮಕ್ಕಳಿಗೆ ಕೈ ಕೈಜೋಡಿಸಿ ಇಂದಿನಿಂದ ನೀವು ಗಂಡ ಹೆಂಡತಿ ಎಂದು ಹೇಳಿ ಮದುವೆ ಮಾಡಿಸಿದರು. ಇಂದಿನಿಂದ ನಿಮ್ಮ ನಿಮ್ಮ ದಾರಿಯನ್ನು ನೀವೇ ನೋಡಿಕೊಳ್ಳಬೇಕು ಎಂದು ಹೇಳಿ ಆಶೀರ್ವದಿಸಿದರು. ಅವರ ವಂಶಜರೇ ಹಕ್ಕಿಪಿಕ್ಕಿ ಜನಾಂಗದವರು ಎಂದು ಹೇಳಿಕೊಳ್ಳುತ್ತಾರೆ.

೭. ತೀಡಾನ ಮಕ್ಕಳಾದ ಐವರು ಸಹೋದರರು ಒಮ್ಮೆ ನದಿ ತೀರದಲ್ಲಿ ಆಹಾರ ಹುಡುಕಾಟಕ್ಕಾಗಿ ಅಲೆದಾಡುತ್ತಿದ್ದಾಗ ಸೀತಾಮಾತೆಯು ಆ ನದಿತೀರದಲ್ಲಿ ಅರೆಬೆತ್ತಲೆಯಾಗಿ ಸ್ನಾನಕ್ಕಿಳಿದಿದ್ದನ್ನು ನೋಡಿ ನಕ್ಕುಬಿಡುತ್ತಾರೆ. ಇದರಿಂದ ಕೋಪಗೊಂಡ ಸೀತೆಯು ಅವರೆಲ್ಲರಿಗೂ ಒಂದು ಸವಾಲೊಡ್ಡುತ್ತಾಳೆ. ತನ್ನ ಒಂದು ಕೂದಲನ್ನು ಕಿತ್ತು ಇದರಿಂದ ಅಲ್ಲಿ ಮೇಯುತ್ತಿರುವ ಬಿಳಿಜಿಂಕೆಯನ್ನು ಹಿಡಿಯಲು ಯಾವ ರೀತಿ ಪರಿಶ್ರಮಪಡುತ್ತಿರೋ ಅದೇ ರೀತಿ ಮುಂದೆ ಬದುಕುತ್ತೀರಿ ಎನ್ನುತ್ತಾಳೆ. ಬೇಟೆ ಬಲ್ಲ ವಾಗ್ರಿಯೋ ಮುಂದೆ ಬಂದು ಆ ಕೂದಲಲ್ಲಿ ಸರಗುಣಿಕೆ ಮಾಡಿ ಬೇಟೆಯು ಓಡಾಡುವ ಸ್ಥಳದಲ್ಲಿ ಬಿಗಿಯುತ್ತಾನೆ. ಎಷ್ಟೇ ಪ್ರಯತ್ನಪಟ್ಟು ಬಿಳಿಜಿಂಕೆಯನ್ನು ಸರಗುಣಿಕೆ ಗೊಡ್ಡಲು ಆಗಲಿಲ್ಲ. ಕೊನೆಗೆ ಒಂದು ಕುಂಟುಜಿಂಕೆ ಸರಗುಣಿಕೆಗೆ ಸಿಕ್ಕಿ ಬೀಳುತ್ತದೆ. ಇದರಿಂದ ನಿನ್ನ ಜೀವನ, ಈ ಕುಂಟುಜಿಂಕೆಯಂತೆ ಎಷ್ಟೇ ದುಡಿದರೂ ಮೇಲೇಳದಂತಾಗುತ್ತದೆ ಎಂದು ಶಾಪ ನೀಡುತ್ತಾಳೆ. ವಾಗ್ರಿಯ ಕೈಗೆ ಸಿಗುತ್ತಲೂ ಅದು ನಂತರದಲ್ಲಿ ಸಾಯುತ್ತದೆ. ಇದರಿಂದ ಈಗಿನ ಹಕ್ಕಿಪಿಕ್ಕಿಯರು 'ತಾವು ಎಷ್ಟೇ ದುಡಿದರೂ ಸೀತಾಮಾತೆಯ ಶಾಪದಿಂದಾಗಿ ಅದು ಉಳಿಯುವುದಿಲ್ಲ' ಎನ್ನುತ್ತಾರೆ.

೮. ಹಕ್ಕಿಪಿಕ್ಕಿ ಸಮುದಾಯದವರಿಗೆ ದೈವದಲ್ಲಿ ಪ್ರಬಲವಾಗಿ ಅಪಾರ ನಂಬಿಕೆ ಇರುವುದರಿಂದ ತಮ್ಮ ಮನೆದೇವರನ್ನು ಅಥವಾ ತಂದೆಯಿಂದ ಹಿರಿಯ ಮಗನಿಗೆ ಬರುವ ದೇವಿಯ ಖಪ್ಪರ್,

ಧಾಕಣಿ(ಲೋಬಾನ ಇಡುವ ಸಾಧನ), ದೀವೋ(ದೀಪ)ಗಳನ್ನು ಬಹು ಜೋಪಾನವಾಗಿ ತ್ರಾಂಗಡು (ದೇವರನ್ನು ಇಡುವ ಪಿಟಾರಿ)ದಲ್ಲಿಡುತ್ತಾರೆ. ಈ ತ್ರಾಂಗಡೂಗಳಲ್ಲಿ ಹಳೆಯ [ಅಂದರೆ ಇಲ್ಲಿ ಪೀಢಿಯ(ಪೀಳಿಗೆ)ಲೆಕ್ಕ ಬರುತ್ತದೆ.] ಮೂರ್ತಿಗಳಿರುವ ಪಿಟಾರಿಯಿದ್ದರೆ ಅದನ್ನು 'ಗಲ್ಢೀದೇವಿ' ಎನ್ನುತ್ತಾರೆ.[೭]

## ಹಕ್ಕಿಪಿಕ್ಕಿಯರ ಸಾಮಾಜಿಕ ಹಿನ್ನೆಲೆ

ಕರ್ನಾಟಕ ರಾಜ್ಯದ ಹಕ್ಕಿಪಿಕ್ಕಿಯರದ್ದು ಒಂದು ಸ್ವತಂತ್ರ ಸಮುದಾಯ. ಇವರ ಬೆಡಗು, ಸಂಪ್ರದಾಯ, ಆಚರಣೆಗಳಲ್ಲಿಯೂ ಬಹಳಷ್ಟು ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಹಕ್ಕಿಪಿಕ್ಕಿಯರು ತಮ್ಮ ಸಮುದಾಯದವರು ಎಲ್ಲೇ ಇದ್ದರೂ ಪರಸ್ಪರ 'ವಾಗ್ರಿ'ಗಳೆಂದೂ, 'ವಾಗ್ರಿವೇಲ್'ಗಳೆಂದೂ ಗುರುತಿಸಿಕೊಳ್ಳುತ್ತಾರೆ. ಹಕ್ಕಿಪಿಕ್ಕಿ(ವಾಗ್ರಿ)ಗಳು ಮೊದಲು ಪೂಜಿಸಲ್ಪಡುವ ದೇವರಾದ ದಾದಾಜಿಗೆ ಕುರಿಬಲಿ ನೀಡುತ್ತಾರೆ. ಶೇಳ್‌ಮಹಮ್ಮಾಮಿ, ಶಿಕೋತರ್ ದೇವಿಯರಿಗೆ ಹೋತ(ಗಂಡು ಮೇಕೆ) ಬಲಿ ನೀಡುತ್ತಾರೆ. ಸಾಮಾನ್ಯವಾಗಿ ಭಾಷೆಯಲ್ಲಿ ಸಾಮ್ಯತೆಯಿರುವವರೆಲ್ಲರ ಮೂಲ ಒಂದೇ ಆಗಿರುತ್ತದೆ ಎಂಬ ವಿಷಯ ಗಮನಾರ್ಹವಾದುದಾಗಿದೆ. ಮದುವೆಯಲ್ಲಿ ಹಕ್ಕಿಪಿಕ್ಕಿ(ವಾಗ್ರಿ)ಗಳ ಆಚರಣೆ ತುಂಬಾ ಸರಳವಾಗಿ ಜರುಗುತ್ತದೆ, ಕುಂಕುಮದ ಬೊಟ್ಟು(ತೀಕಂಧಾರಣೆ) ತ್ರಾಂಗಡೂ ಎದುರಿಗೆ ಕನ್ಯೆಯಾದವಳಿಗೆ ಇಡಲಾಗುತ್ತದೆ. ಇನ್ನು ಶವಸಂಸ್ಕಾರ ಪದ್ಧತಿಯಲ್ಲಿ ವಾಗ್ರಿಗಳು ಮೃತದೇಹವನ್ನು ಹೂಳುತ್ತಾರೆ. ಹೀಗೆ ರಾಜಸ್ಥಾನ, ಗುಜರಾತ್, ಮೂಲದವರೆಂದು ಹೇಳಿಕೊಳ್ಳುವ ಈ ಪಾರ್ಧಿಗಳ ಭಾಷೆಗೂ, ಹಕ್ಕಿಪಿಕ್ಕಿ (ವಾಗ್ರಿ)ಗಳ ಭಾಷೆಗೂ ಸಾಮ್ಯತೆ ಇದೆ.[೮]

## ೪.೨. ಮೂಲ ಮತ್ತು ಪ್ರಸಾರ

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಮೂಲ ಸ್ಥಾನ ಗುಜರಾತ್ ಮತ್ತು ರಾಜಸ್ಥಾನ. ಈಗಲೂ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಗುಜರಾತ್ ಮತ್ತು ರಾಜಸ್ಥಾನದಲ್ಲಿ ಕಂಡು ಬರುತ್ತದೆ. ಇವರು ವಿವಿಧ ಕಾರಣಗಳಿಂದಾಗಿ ಮಹಾರಾಷ್ಟ್ರದ ಮೂಲಕ ಮತ್ತು ಆಂಧ್ರಪ್ರದೇಶದ ಮೂಲಕ ಕರ್ನಾಟಕಕ್ಕೆ ಬಂದು ನೆಲೆಸಿದ್ದಾರೆ. ಗುಜರಾತ್ ಮತ್ತು ರಾಜಸ್ಥಾನಗಳಲ್ಲಿ ವಿವಿಧ ರಾಜರುಗಳು ಮತ್ತು ಮೊಘಲ್ ರಾಜರುಗಳ ನಡುವಿನ ಘರ್ಷಣೆಗಳಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ, ಅಲ್ಲಿಂದ ವಿವಿಧ ರಾಜ್ಯಗಳಿಗೆ ವಲಸೆಬಂದು ನೆಲೆಸಿದ್ದಾರೆ. ಮೊಘಲ್ ರಾಜ ಅಕ್ಬರ್ ಮತ್ತು ರಾಣಾ ಪ್ರತಾಪ್‌ಸಿಂಗ್ ನಡುವಿನ ಯುದ್ಧದಲ್ಲಿ ರಾಣಾ ಪ್ರತಾಪ್‌ಸಿಂಗ್ ನ ಸೈನ್ಯದಲ್ಲಿ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ರಾಣಾ ಪ್ರತಾಪ್‌ಸಿಂಗ್ ನ ಸೋಲಿನ ನಂತರ ಈ ಬುಡಕಟ್ಟು ಪಂಗಡದವರು ತಮ್ಮ ಅಸ್ತಿತ್ವಕ್ಕಾಗಿ ವಿವಿಧ ರಾಜ್ಯಗಳಿಗೆ ವಲಸೆ ಹೋದರು. ಹಾಗೆಯೇ ಕರ್ನಾಟಕಕ್ಕೂ ಬಂದು ನೆಲೆಸಿದರು. ತಮ್ಮ ಪ್ರಾಣ ರಕ್ಷಣೆಗಾಗಿ ಕಾಡಿನಲ್ಲಿ ವಾಸಿಸುತ್ತಾ ಕ್ರಮೇಣ ಕಾಡಿನ ಅಂಚಿನಲ್ಲಿ ಜೀವನವನ್ನು ಮಾಡುವುದಕ್ಕೆ ಪ್ರಾರಂಭಿಸಿದರು. ಇವರು ತಮ್ಮ ಆಹಾರಕ್ಕಾಗಿ ವಿವಿಧ ಪ್ರಾಣಿ, ಪಕ್ಷಿಗಳನ್ನು ಬೇಟೆಯಾಡುವುದನ್ನು ರೂಢಿಸಿಕೊಂಡರು. ಕ್ರಮೇಣ ವ್ಯವಸಾಯದ

ಕಡೆಗೂ ಆಸಕ್ತಿಯನ್ನು ಹೊಂದಿ ಜೀವನವನ್ನು ನಡೆಸಲು ಪ್ರಾರಂಭಿಸಿದರು. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಪೂರ್ವಜರು ರಾಣಾ ಪ್ರತಾಪ್‌ಸಿಂಗ್ ಮತ್ತು ಶಿವಾಜಿಮಹಾರಾಜರ ಸೈನ್ಯಗಳಲ್ಲಿ ಕೆಲಸವನ್ನು ನಿರ್ವಹಿಸಿರುವ ಹಿನ್ನೆಲೆಯಿದೆ. ಅಲ್ಲದೆ ಈ ರಾಜರುಗಳಿಗೆ ಅಂಗ ರಕ್ಷಕರಾಗಿಯೂ ಪ್ರಾಮಾಣಿಕತೆಯಿಂದ ಸೇವೆ ಸಲ್ಲಿಸಿರುವ ಇತಿಹಾಸವಿದೆ ಎಂದು ತಿಳಿಸುತ್ತಾರೆ.

ಗ್ವಾಲಿಯರ್ ನ ರಾಣಿ ಲಕ್ಷ್ಮಿಬಾಯಿಯು. ಹಕ್ಕಿಪಿಕ್ಕಿ(ವಾಗ್ರಿ) ಜನಾಂಗದವರನ್ನು ಅಂಗರಕ್ಷಕರನ್ನಾಗಿ ನೇಮಿಸಿಕೊಂಡಿದ್ದಳೆಂದು, ವಾಗ್ರಿ ಜನಾಂಗದವರಿಗೆ ತಾಮ್ರದ ಹಕ್ಕುಪತ್ರಗಳನ್ನು ಕೊಟ್ಟಿದ್ದಳೆಂದು ಹೆಮ್ಮೆಯಿಂದ ಇವರು ಹೇಳಿಕೊಳ್ಳುತ್ತಾಳೆ. ಶಿವಾಜಿಮಹಾರಾಜರ ಆಡಳಿತ ಕಾಲದಲ್ಲಿಯೂ ಸೈನ್ಯದಲ್ಲಿ ಸೈನಿಕರಾಗಿ ಮತ್ತು ಅಂಗರಕ್ಷಕರಾಗಿ ಸೇವೆ ಸಲ್ಲಿಸಿರುವುದನ್ನು ಹೇಳುತ್ತಾರೆ. ಶಿವಾಜಿ ಮಹಾರಾಜರ ಅವನತಿಯ ನಂತರ ಕರ್ನಾಟಕ ರಾಜ್ಯಕ್ಕೆ ವಲಸೆ ಬಂದಿರುವುದನ್ನು ತಿಳಿಸುತ್ತಾರೆ. ಮೈಸೂರು ಮಹಾರಾಜರ ಕಾಲದಲ್ಲಿಯೂ ಇವರು ಸೇವೆ ಸಲ್ಲಿಸಿರುವುದಾಗಿ ಹೇಳುತ್ತಾರೆ. ಮೈಸೂರಿನ ಸುತ್ತಮುತ್ತಾ ವಿವಿಧ ಭಾಗಗಳಲ್ಲಿ, ಪಕ್ಷಿರಾಜಪುರದಲ್ಲಿ ಇವರು ನೆಲೆಸಿದ್ದರೂ ಇವರು ಸದಾ ಸಂಚರಿಸುತ್ತಲೇ ಇರುತ್ತಾರೆ. ದೇಶಾದ್ಯಂತ ಹಾಗೂ ವಿದೇಶಗಳಿಗೂ ಇವರು ತಮ್ಮ ಉದ್ಯೋಗಕ್ಕೆ ಸಂಬಂಧಿಸಿದಂತೆ, ಸದಾ ಸಂಚರಿಸುತ್ತಲೇ ಇರುತ್ತಾರೆ. ಹಕ್ಕಿಪಿಕ್ಕಿ ಜನಾಂಗದವರು ತೀಕ್ಷ್ಣಮತಿ ಗಳಾಗಿರುತ್ತಾರೆ. ವಿವಿಧ ಭಾಷೆಗಳನ್ನು ಮಾತನಾಡುತ್ತಾರೆ. ಹಿಂದಿ, ಇಂಗ್ಲೀಷ್, ಕನ್ನಡ, ತಮಿಳು, ತೆಲುಗು, ಮಲೆಯಾಳಂ, ಇತ್ಯಾದಿಯಾಗಿ ಭಾರತದ ಬಹುತೇಕ ಭಾಷೆಗಳನ್ನು ಇವರು ಮಾತನಾಡುತ್ತಾರೆ. ಇವರಿಗೆ ನಿರ್ದಿಷ್ಟವಾಗಿ ವಾಸಸ್ಥಾನಕ್ಕೆ ಮನೆಗಳಿದ್ದರೂ ಕೂಡ ಸದಾ ವಲಸೆ ಪ್ರವೃತ್ತಿಯನ್ನು ಹೊಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ಇವರ ಮೂಲ ಕಸುಬು, ಬೇಟೆಯಾಡುವುದನ್ನು ನಿಲ್ಲಿಸಿದ್ದಾರೆ. ಅಥವಾ ಕಡಿಮೆ ಮಾಡಿದ್ದಾರೆ. ಕಾರಣವೇನೆಂದರೆ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅರಣ್ಯನೀತಿಯ ಜಾರಿಯಿಂದಾಗಿ ಕಟ್ಟುನಿಟ್ಟಾಗಿ ಬೇಟೆಯಾಡುವುದನ್ನು ನಿಷೇಧಿಸಲಾಗಿದೆ. ಆದ್ದರಿಂದ ಶಿಕ್ಷೆಗೆ ಗುರಿಯಾಗುವುದರ ಭಯವಿರುವುದರಿಂದಾಗಿ ಬೇಟೆಯಾಡುವುದನ್ನು ಕಡಿಮೆ ಮಾಡಿದ್ದಾರೆ ಇತರೇ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ.

**ಹಕ್ಕಿಪಿಕ್ಕಿ ಜನಾಂಗದ ಗೋತ್ರಗಳು ಅಥವಾ ಬೆಡಗುಗಳು**

೧. ಕಾಳಿವಾಡೋ

೨. ಗುಜರಾತಿಯೋ

೩. ಮೇವಾಡೋ

೪. ಪವಾರ್

**ಹಕ್ಕಿಪಿಕ್ಕಿ ಜನಾಂಗಕ್ಕೆ ಕರೆಯುವ ಇತರೇ ಹೆಸರುಗಳು**

೧. ಹಕ್ಕಿಪಿಕ್ಕಿ

೨. ಚೆಂಚರು

೧೧. ಬೇಟೆಗಾರರು

೧೨. ನೀರ್ ಶಕಾರಿ

| | |
|---|---|
| ೩. ಶಿಕಾರಿ | ೧೩. ನರಿ ಕೊರವ |
| ೪. ಹರಣಿ ಶಿಕಾರಿ | ೧೪. ಕುರುವಿಕಾರನ್ |
| ೫. ಚಿಗರಿಕಾರರು | ೧೫. ಮೇಲ್ ಶಿಕಾರಿ |
| ೬. ನರಿಶಿಕಾರಿ | ೧೬. ಪಿಂಡಂಡೆ |
| ೭. ಅಡವಿ ಛೆಂಚರು | ೧೭. ವಾಗ್ ಫೀಖ್ಹಣ್ಯ |
| ೮. ವಾಗ್ರಿ | |
| ೯. ಬೇಲ್ ಪಾರ್ಧಿ | |
| ೧೦. ಪಾಶಿ ಹಕ್ಕಿಪಿಕ್ಕಿ | |

**ಹಕ್ಕಿಪಿಕ್ಕಿ ಹೆಸರಿನ ಉತ್ಪತ್ತಿ**

ಹಕ್ಕಿಪಿಕ್ಕಿ ಜನಾಂಗದ ಮೂಲ ಗುಜರಾತ್ ಮತ್ತು ರಾಜಸ್ಥಾನ ಆಗಿದ್ದರೂ ವಿವಿಧ ಕಾರಣಗಳಿಂದಾಗಿ ವಲಸೆ ಬಂದು ಕರ್ನಾಟಕದಲ್ಲಿ ಜೀವನ ಮಾಡುತ್ತಿರುವ ಇವರನ್ನು 'ಹಕ್ಕಿಪಿಕ್ಕಿ' ಜನಾಂಗವೆಂದೇ ಕರೆಯಲಾಗುತ್ತದೆ. ಹಕ್ಕಿ–ಪಕ್ಷಿಗಳನ್ನು ಬೇಟೆಯಾಡುವ ಇವರನ್ನು 'ಹಕ್ಕಿಪಿಕ್ಕಿ' ಎನ್ನಲಾಗುತ್ತದೆ. ಇವರು ಮಾತನಾಡುವ ಭಾಷೆಯನ್ನು 'ವಾಗರಿ ಬೋಲಿ' ಎಂದು ಗುರುತಿಸಲಾಗಿದೆ. ಈ ಭಾಷೆಯು 'ಗುಜರಾತಿ ಭಾಷೆ'ಯನ್ನೇ ಬಹುಪಾಲು ಹೋಲುತ್ತದೆ.

**ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗದವರ ಪರ್ಯಾಯ ಪದಗಳು**

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯ ಜನಾಂಗವು ದೇಶದ ವಿವಿಧ ರಾಜ್ಯಗಳಲ್ಲಿ ನೆಲೆಸಿದೆ. ಅಲ್ಲಿ ಮಾಡುವ ಇವರ ಕಸುಬಿಗೆ ತಕ್ಕಂತೆ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ.

| ರಾಜ್ಯಗಳು | | ಪರ್ಯಾಯ ಪದಗಳು |
|---|---|---|
| ೧. ಕರ್ನಾಟಕ | – | ಹಕ್ಕಿಪಿಕ್ಕಿ, ಹಕ್ಕಿಶಿಕಾರಿ, ಮೇಲುಶಿಕಾರಿ |
| ೨. ಆಂಧ್ರಪ್ರದೇಶ | – | ನಕಪೇಟೆವಾಳ್, ನರಿಶಿಕಾರಿ, |
| ೩. ನೇಪಾಳ, ಪಂಜಾಬ್ | – | ಶಲಾಜತ್ ವಾಳ |
| ೪. ಮಧ್ಯಪ್ರದೇಶ, ರಾಜಸ್ಥಾನ | – | ಪಹಾಡಿ ರಾಷ್‌ಪೂತ |
| ೫. ಉತ್ತರಪ್ರದೇಶ, ಪಂಜಾಬ್ | – | ತೇಲವೇ ಚವಾಳ್ಯ ತೇಲಡ್ಯು |
| ೬. ತಮಿಳುನಾಡು | – | ವಿಳ್ಯಕನಾರು, ಝುರಕ್ಯಾ |
| ೭. ಮಹಾರಾಷ್ಟ್ರ | – | ಸೋನವಾಗರಿ |
| ೮. ತಮಿಳುನಾಡು | – | ಕುರಿವಿಕಾರನ್, ನರಿಕೊರವ |
| ೯. ರಾಜಸ್ಥಾನ | – | ನಿಮ್ಮಡ್ಯೋ, ಗುಜ್ಜರ್‍ಯೋ, ಮಹರ್‍ವಾಡ್ಯೋ, ಶಿಶೋದ್ಯ, ಕಾಳಿವಾಳ, ಗೋಬರ್‍ಯೋ, ವಚಿಣ್ಯೋ, ಮಾಳಿವಾಳೊ ಕವಡ್ಯಾ, ಪವಾರೋ, ಮತ್ತು ಡೋಕರಿ |

**ಹಕ್ಕಿಪಿಕ್ಕಿ ಸಮುದಾಯವನ್ನು ವೃತ್ತಿಯ ಹಿನ್ನೆಲೆಯಿಂದ ಗುರುತಿಸುವುದು**

೧. ಹಕ್ಕಿ-ಪಕ್ಷಿಗಳ ಬೇಟೆ ಆಡುವವರನ್ನು 'ಹಕ್ಕಿಪಿಕ್ಕಿ'ಯವರೆಂದು ಗುರುತಿಸಲಾಗುತ್ತದೆ.

೨. ನರಿಗಳನ್ನು ಬೇಟೆಯಾಡಿ, ನರಿಗಳ ಮಾಂಸವನ್ನು ತಿನ್ನುವವರನ್ನು 'ನರಿಶಿಕಾರಿ'ಗಳೆಂದು ಗುರುತಿಸಲಾಗುತ್ತದೆ.

೩. ಚಿತ್ತೊಡ್‌ಗಢದ ರಾಜ ರಾಣಾ ಪ್ರತಾಪಸಿಂಗ್, ಗುಡ್ಡಗಾಡು ಪ್ರದೇಶಗಳಲ್ಲಿ ವಾಸಮಾಡುತ್ತಾ ಚಾಣಾಕ್ಷತನದಿಂದ ಬೇಟೆಯಾಡುವುದರಲ್ಲಿ ಪರಿಣಿತನಾಗಿದ್ದ ಮಾರವಾಡ್ ಪಂಗಡದ 'ಜಮಲ್-ಫತ್ತೋ' ನನ್ನು ಸೈನ್ಯದ ಮುಖ್ಯ ಅಧಿಕಾರಿಯನ್ನಾಗಿ ನೇಮಿಸಿದ್ದನು. ಪ್ರತಾಪ್‌ಸಿಂಗ್‌ನ ಸೈನ್ಯದಲ್ಲಿದ್ದವರು ತಮ್ಮನ್ನು ರಾಣಾಗಳು ಅಥವಾ ಪಹಾಡಿ ರಾಷ್ ಪೋತ್ (ರಾಜ್ ಪಾರಧಿ) ಎಂದು ಕರೆದುಕೊಂಡರು.

೪. ಭಿಕ್ಷೆಯನ್ನು ಬೇಡಿ ವಿವಿಧ ಊಟದ ಪದಾರ್ಥಗಳನ್ನು ಒಂದೇ ಹರಿವಾಣ (ಮರ್ಕ್ಯೋ)ದಲ್ಲಿ ಸುರಿದುಕೊಂಡು ಊಟ ಮಾಡುತ್ತಿದ್ದವರನ್ನು ವಿಠ್ಯಕನಾರು (ಎಂಜಲು ತಿನ್ನುವವರು) ಎಂದು ಕರೆಯಲಾಗುತ್ತದೆ.

೫. ಬೇರೆ ಬೇರೆ ರೀತಿಯ ಪ್ರಾಣಿ-ಪಕ್ಷಿಗಳ ತಲೆ-ಕಾಲುಗಳನ್ನು ಚೆನ್ನಾಗಿ ಒಣಗಿಸಿ, ಅಗಲವಾದ ಚೌಕಾಕಾರದ ಡಬ್ಬದಲ್ಲಿ ಹಾಕಿ ಎಣ್ಣೆಯನ್ನು ತಯಾರಿಸಿ ಮಾಸಾಜ್ ಮಾಡಲು ಬಳಸಲಾಗುತ್ತದೆ. ಇವರನ್ನು ತೇಲಡ್ಯು ಅಥವಾ ತೇಲವೇಚವಾಳ್ಯ ಎನ್ನಲಾಗುತ್ತದೆ. ಇವರು ವಿವಿಧ ರೀತಿಯ ಎಣ್ಣೆಗಳನ್ನು ತಯಾರಿಸುತ್ತಾರೆ. ಉಡದ ಎಣ್ಣೆ, ನವಿಲಿನ ಎಣ್ಣೆ, ಷಾಂಡೂದ ನಾರಾಯಣಿ ಎಣ್ಣೆ, ಬೆಳ್ಳುಳ್ಳಿ ಎಣ್ಣೆ, ಇತ್ಯಾದಿ.

೬. ರಾಜ ಮತ್ತು ಅವನ ಅಧೀನ ಅಧಿಕಾರಿಗಳಿಗೆ ಹುಲಿ ಮತ್ತು ಸಿಂಹದ ಮರಿಗಳನ್ನು ಕಾಡಿನಿಂದ ತಂದು ಒಪ್ಪಿಸುತ್ತಿದ್ದರು. ಜಿಂಕೆ ಮತ್ತು ಇತರೇ ಪ್ರಾಣಿಗಳನ್ನು ತಂದು ಒಪ್ಪಿಸುತ್ತಿದ್ದರು. ಇವರನ್ನು ವಾಗ್ ಫೀಖಣ್ಯು, ಫಾಶಹಕ್ಕಿಪಿಕ್ಕಿ, ಹರಣ ಹಕ್ಕಿಪಿಕ್ಕಿ (ಚಿಗರೇಪಾರ್ಧಿ, ಪಿಂಡಂಡೇ ಪಾರ್ಧಿ) ಮತ್ತು ಭರಗಡ್ಯು (ಬಗಾಡೆ)ಗಳೆಂದು ಗುರುತಿಸಲಾಗುತ್ತದೆ.

೭. ಕುಟುಂಬದ ನಿರ್ವಹಣೆ ಸಾಧ್ಯವಾಗದಿದ್ದಾಗ ಅನಿವಾರ್ಯ ಸಂದರ್ಭಗಳಲ್ಲಿ ಚಿಕ್ಕಪುಟ್ಟ ಕಳ್ಳತನ ದರೋಡೆ ಮಾಡುವುದನ್ನು ರೂಢಿಸಿಕೊಂಡ ಇವರನ್ನು ಪಿಂಡಂಡೆಗಳೆಂದು ಗುರುತಿಸಲಾಗುತ್ತದೆ.

**ಹಕ್ಕಿಪಿಕ್ಕಿಯರ ಶಾರೀರಿಕ ಲಕ್ಷಣಗಳು**

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ಹೆಂಗಸರಿಗಿಂತ ಗಂಡಸರು ಎತ್ತರವಿರುತ್ತಾರೆ. ಇವರು ಸರಾಸರಿ ಎತ್ತರ ಐದರಿಂದ ಆರು ಅಡಿ ಇರುತ್ತದೆ. ಹೆಂಗಸರು ಮತ್ತು ಗಂಡಸರು ದಷ್ಟಪುಷ್ಟವಾಗಿರುತ್ತಾರೆ. ಕಪ್ಪುಬಣ್ಣ, ಗೋಧಿಬಣ್ಣ, ಶ್ವೇತವರ್ಣವನ್ನು ಹೊಂದಿರುತ್ತಾರೆ. ಹೆಂಗಸರು ಮತ್ತು ಗಂಡಸರು ಕಪ್ಪು ಕೂದಲಿನ ದುಂಡನೆಯ ಮುಖವನ್ನು ಹೊಂದಿರುತ್ತಾರೆ. ಕಪ್ಪು ಕಣ್ಣುಗಳನ್ನು, ಸಾಮಾನ್ಯ ಮೂಗಿನ

ಆಕಾರವನ್ನು ಹೊಂದಿರುತ್ತಾರೆ. ಆಕರ್ಷಕ ಮೈಕಟ್ಟು ಹೊಂದಿರುತ್ತಾರೆ. ವಲಸೆ ಪ್ರವೃತ್ತಿಯವರಾದ್ದರಿಂದಾಗಿ ಹೆಂಡತಿ ಮಕ್ಕಳು ಕೂಡ ವಲಸೆ ಹೋಗುತ್ತಿರುತ್ತಾರೆ.

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರ ಮೂಲಸ್ಥಾನ ರಾಜಸ್ಥಾನದ 'ಬಾಗ್ರಾ' ಎಂಬ ಪ್ರದೇಶವಾಗಿದೆ. ಆದ್ದರಿಂದ ಅವರು ತಮ್ಮನ್ನು ವಾಗ್ರಿ(ಬಾಗ್ರಿ, ವಾಗ್ರಿ) ಎಂದು ಕರೆದುಕೊಳ್ಳುತ್ತಾರೆ. ಕರ್ನಾಟಕಕ್ಕೆ ವಲಸೆ ಬಂದಿರುವ ಬಗ್ಗೆ ಇವರಲ್ಲಿ ಯಾವುದೇ ಖಚಿತ ದಾಖಲೆಗಳು ಇಲ್ಲ. ಈ ಸಮುದಾಯದ ಮುಖಂಡರು ಹೇಳುವ ಮಾಹಿತಿಗಳ ಆಧಾರದ ಮೇಲೆ ಇವರು ಕರ್ನಾಟಕಕ್ಕೆ ೨೦೦ ವರ್ಷಗಳ ಹಿಂದೆ ಇಲ್ಲಿಗೆ ಬಂದಿರಬಹುದು.

**೪.೩. ವಸತಿ ವ್ಯವಸ್ಥೆ**

ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗವು ತಮ್ಮದೇ ಆದ ವಾಸಿಸುವ ಸ್ಥಳಾವರಣದ ಕಲ್ಪನೆಯನ್ನು ಹೊಂದಿದೆ. ಹಕ್ಕಿಪಿಕ್ಕಿ ಜನಾಂಗವು ಕೆಲವು ಕಡೆ ನೆಲೆ ನಿಲ್ಲಲು ಪ್ರಯತ್ನ ಮಾಡುತ್ತಿದ್ದರೂ, ಇಂದಿಗೂ ಈ ಸಮುದಾಯವು ಅಲೆಮಾರಿಯಾಗಿ ಒಂದು ಊರಿನಿಂದ ಇನ್ನೊಂದು ಊರಿಗೆ ವಲಸೆ ಹೋಗುತ್ತಿರುತ್ತಾರೆ. ಕಾರಣವೇನೆಂದು ಕೇಳಿದರೆ, ದೈವದ ನಂಬಿಕೆಯನ್ನು ಹೇಳುತ್ತಾರೆ. ತಾವು ದೈವಭಕ್ತರಾಗಿದ್ದು ನಾವು ನಮ್ಮ ಕುಲಕಸುಬು ಬೇಟೆಯನ್ನು ಬಿಟ್ಟಿರಲು ಆಗುವುದಿಲ್ಲ. ಆದ್ದರಿಂದ ದಿನಕ್ಕೆ ಯಾವುದಾದರೊಂದು ಹಕ್ಕಿ, ಪಕ್ಷಿಯನ್ನು ಬೇಟೆಯಾಡುವುದಾಗಿ ಹೇಳುತ್ತಾರೆ. ಇವರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ, ಒಂದು ಊರಿನಿಂದ ಇನ್ನೊಂದು ಊರಿಗೆ ವಲಸೆ ಹೋಗುವುದರಿಂದ, ಅವರ ಲಗೇಜುಗಳನ್ನು, ಸಾಮಾನುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಕತ್ತೆಗಳನ್ನು, ಎತ್ತುಗಳನ್ನು ಮತ್ತು ಚಿಕ್ಕ ಎತ್ತಿನ ಗಾಡಿಗಳನ್ನು ಬಳಸುತ್ತಾರೆ. ಇಲ್ಲದಿದ್ದರೆ, ಆಟೋ, ಬಸ್ಸುಗಳಲ್ಲಿ ಪ್ರಯಾಣಿಸುತ್ತಾರೆ.

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರು ಕೆಲವು ಕಡೆ ಶಾಶ್ವತವಾಗಿ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಇನ್ನೂ ಕೆಲವರು ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಹೋಗುತ್ತಾ ಅಲೆಮಾರಿಗಳಾಗಿ ಜೀವನವನ್ನು ನಡೆಸುತ್ತಿದ್ದಾರೆ. ಇವರ ಮನೆ,ಗಲ್ಲಿ, ಎಲ್ಲೆಕಟ್ಟು ಅಥವಾ ಮೇರೆಗಳ, ವಸತಿಗಳ ವಿನ್ಯಾಸದಲ್ಲಿ ವೈವಿಧ್ಯತೆ ಇದೆ. ಇವರು ಊರಿನ ಹೊರವಲಯ, ಬೆಟ್ಟಪ್ರದೇಶಗಳು, ನದಿಪ್ರದೇಶಗಳು, ಬಯಲು ಪ್ರದೇಶಗಳಲ್ಲಿ ಗುಂಪು ಗುಂಪಾಗಿ ಟೆಂಟುಗಳನ್ನು ಹಾಕಿಕೊಂಡು ವಾಸಿಸುತ್ತಾರೆ. ಇವರಿಗೆ ಹೆಚ್ಚು ಧೈರ್ಯವಿರುವುದರಿಂದ ಬಯಲುಗಳಲ್ಲೇ ವಾಸ ಮಾಡುತ್ತಾರೆ. ಬಿಸಿಲು, ಮಳೆ, ಚಳಿ, ಗಾಳಿಗೆ ತಡೆದುಕೊಳ್ಳುವ ಡೇರೆಗಳ ರೀತಿಯ ತಾತ್ಕಾಲಿಕ ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಈ ಹಿಂದೆ ಇವರು ನದಿಪ್ರದೇಶಗಳಲ್ಲಿ ಸಿಗುವ ಆಪುಗಳಿಂದ ಗುಡ್ಡಲು ಅಥವಾ ಗುಡಿಸಲುಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಈ ಆಪಿನ ಗುಡ್ಡಲುಗಳು ಮಳೆ, ಗಾಳಿ, ಬಿಸಿಲುಗಳಿಂದ ನೈಸರ್ಗಿಕ ಹವಾನಿಯಂತ್ರಿಕ ಮನೆಗಳ ರೀತಿಯಲ್ಲಿ ಇರುತ್ತಿದ್ದವು. ಈಗಲೂ ಈ ರೀತಿಯ ಗುಡ್ಡಲುಗಳು ಇರುತ್ತವೆಯಾದರೂ ಇವುಗಳು ಕಡಿಮೆ ಇವೆ. ಇಂತಹ ಗುಡ್ಡಲುಗಳನ್ನು

ಕುಂಕುಮದಿಂದ, ಪ್ರಾಣಿ, ಪಕ್ಷಿಗಳ ಕೊಂಬು ಮತ್ತು ಗರಿಗಳಿಂದ ಅಲಂಕರಿಸಿರುತ್ತಾರೆ. ಪ್ರಾಂಗಡೂ ಮುಂದೆ ರಂಗೋಲಿಗಳಿಂದ ಸಿಂಗರಿಸಿರುತ್ತಾರೆ.

ಹಕ್ಕಿಪಿಕ್ಕಿ ಜನಾಂಗದವರು ಸಾಮಾನ್ಯವಾಗಿ ತಮ್ಮ ಗುಡಾರ (ಟೆಂಟು)ಗಳನ್ನು ಸ್ವಲ್ಪ ಎತ್ತರ ಪ್ರದೇಶ ಇಲ್ಲವೇ ಇಳಿಜಾರು ಪ್ರದೇಶದಲ್ಲಿ ನಿರ್ಮಾಣ ಮಾಡಿ ಕೊಂಡಿರುತ್ತಾರೆ. ಕಾರಣವೇನೆಂದರೆ, ಮಳೆಯಿಂದ ಬಿದ್ದ ನೀರು ಸರಾಗವಾಗಿ ಕೆಳಗೆ ಹರಿದುಹೋಗುತ್ತದೆ. ತಮ್ಮ ಹಬ್ಬಗಳನ್ನು ದೇವರಲ್ಲಿ ಕಣಿ ಕೇಳುವುದರ ಮೂಲಕ ಆಚರಿಸುತ್ತಾರೆ. ನೆಲೆನಿಂತ ಹಕ್ಕಿಪಿಕ್ಕಿಯರು ಸಾಮಾನ್ಯ ಜನರಂತೆ ಮನೆಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ವ್ಯವಸಾಯ, ಕೂಲಿ, ಹೈನುಗಾರಿಕೆ, ಕುರಿ, ಕೋಳಿಗಳನ್ನು ಸಾಕುವುದು ಇತ್ಯಾದಿ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದಾರೆ.

**೪.೪. ಬಂಧುತ್ವ ಮತ್ತು ವಿವಾಹ ಪದ್ಧತಿ**

**ಬಂಧುತ್ವ :** ಬುಡಕಟ್ಟು ಜನಾಂಗಗಳಲ್ಲಿ ಬಂಧುತ್ವ ವ್ಯವಸ್ಥೆಯು ವಿಶಿಷ್ಟವಾಗಿರುತ್ತದೆ. ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗದಲ್ಲಿ 'ಮಾತೃಪ್ರಧಾನ ಕುಟುಂಬ ವ್ಯವಸ್ಥೆ' ಇದೆ. ಮಹಿಳೆಯು ಮುಖ್ಯಪಾತ್ರವನ್ನು ನಿರ್ವಹಿಸುತ್ತಾಳೆ. ರಕ್ತಸಂಬಂಧದ ಮುಖಾಂತರ ಬಂಧುತ್ವವು ನಿರ್ಣಯವಾಗುತ್ತದೆ. ತಂದೆಯ ಕಡೆಯಿಂದ ಹಾಗೂ ತಾಯಿಯ ಕಡೆಯಿಂದ ಸಂಬಂಧಗಳು ಏರ್ಪಟ್ಟರೂ ತಾಯಿಯ ಕಡೆಯಿಂದಲೇ ಬಹಳಷ್ಟು ಸಂಬಂಧಗಳು ಉಂಟಾಗುತ್ತವೆ. ತಾಯಿಯ ಅಣ್ಣ, ಅಕ್ಕ, ತಮ್ಮ, ಚಿಕ್ಕಪ್ಪ, ದೊಡ್ಡಪ್ಪ, ತಾಯಿಯ ತಂದೆ, ತಾಯಿ ಇತ್ಯಾದಿಯಾಗಿ ಸಂಬಂಧಗಳು ಉಂಟಾಗುತ್ತವೆ. ಬಂಧುತ್ವವು ಈ ಬುಡಕಟ್ಟು ಜನಾಂಗದ ಸಾಂಸ್ಕೃತಿಕ ಲೋಕದ ರಚನೆಯನ್ನು ತಿಳಿಸಿಕೊಡುತ್ತದೆ. ಹಕ್ಕಿಪಿಕ್ಕಿಯರಲ್ಲಿ ಬಂಧುತ್ವವು ಅವರ ವಿವಾಹದ ಮೂಲಕ ನಿರ್ಧರಿತವಾಗುತ್ತದೆ. ಇವರಲ್ಲಿ ಮೂವತ್ತಕ್ಕೂ ಹೆಚ್ಚು ಬಂಧುತ್ವಗಳಿವೆ. ಸಂತಾನೋತ್ಪತ್ತಿಗಾಗಿ ಗಂಡು ಮತ್ತು ಹೆಣ್ಣುಗಳ ನಡುವೆ ವೈವಾಹಿಕ ಸಂಬಂಧವನ್ನು ಉಂಟುಮಾಡಲು ಸಮುದಾಯದ ಹಿರಿಯರ ಒಪ್ಪಿಗೆಯ ಮೇರೆಗೆ ವಿವಾಹಗಳು ನೆರವೇರುತ್ತವೆ.

**ವಿವಾಹ ಪದ್ಧತಿ :** ಭಾರತೀಯ ಸಮಾಜದ ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬ ಮತ್ತು ವಿವಾಹಕ್ಕೆ ಬಹುಮುಖ್ಯವಾದ ಪ್ರಾಧಾನ್ಯತೆ ಇದೆ. ಮಾನವನ ಲೈಂಗಿಕ ಬೇಡಿಕೆಯು ಸಮಾಜದಲ್ಲಿ ಒಪ್ಪಿತವಾಗಲು ವಿವಾಹ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲಾಗಿದೆ. ಮನುಷ್ಯನ ಅಸ್ತಿತ್ವ, ತನ್ನ ವಂಶದ ಮುಂದುವರಿಕೆ, ಸಾಮಾಜಿಕ ಅಸ್ತಿತ್ವವು ಸಂತನೋತ್ಪತ್ತಿಯಿಂದ ಮಾತ್ರ ಸಾಧ್ಯವಾಗುತ್ತದೆ. ಈ ಸಂತಾನೋತ್ಪತ್ತಿ ಪ್ರಕ್ರಿಯೆಯು ವಿವಾಹದ ಮೂಲಕ ನೆರವೇರುತ್ತದೆ. ಆ ಮೂಲಕ ಮಾನವನ ಸಂಸ್ಕೃತಿಯು ಮುಂದುವರೆಯುತ್ತದೆ.

ಪ್ರತಿಯೊಂದು ಬುಡಕಟ್ಟು ಸಂಸ್ಕೃತಿಯಲ್ಲಿ ವಿವಾಹಕ್ಕೆ ಸಂಬಂಧಿಸಿದಂತೆ ವಿವಿಧ ರೀತಿಯ ನೀತಿ, ನಿಯಮಗಳು, ಕಟ್ಟುಪಾಡುಗಳು ಇರುತ್ತವೆ. ಹಕ್ಕಿಪಿಕ್ಕಿ ಜನಾಂಗದಲ್ಲಿ ಗೋತ್ರ ವಿವಾಹವು ನಿಷೇಧಿಸಲ್ಪಟ್ಟಿದೆ. ಇವರಲ್ಲಿ 'ಜಾತ್' ಮತ್ತು 'ಭುಕ್ಯಾ' ಎನ್ನುವ ಪ್ರಮುಖ ಗೋತ್ರಗಳಿವೆ. ಈ ಗೋತ್ರಗಳ ನಡುವೆ ವಿವಾಹದ ಮೂಲಕ ರಕ್ತಸಂಬಂಧವು ಉಂಟಾಗುತ್ತದೆ. ಹಕ್ಕಿಪಿಕ್ಕಿಯರಲ್ಲಿ 'ಬಾಲ್ಯವಿವಾಹ ಪದ್ಧತಿ' ರೂಢಿಯಲ್ಲಿದೆ ಹಾಗೂ 'ವಧುದಕ್ಷಿಣೆ' ಪದ್ಧತಿಯೂ ಇದೆ. ಇವರಲ್ಲಿ ಹೆಣ್ಣಿಗೆ

ಬೇಡಿಕೆ ಇದೆ. ಆದ್ದರಿಂದ ವಧುದಕ್ಷಿಣೆ ಪದ್ಧತಿ ಜಾರಿಯಲ್ಲಿದೆ. ಮದುವೆಯಾಗುವ ವರನು ವಧುವಿನ ಕಡೆಯವರಿಗೆ ವಧುದಕ್ಷಿಣೆಯನ್ನು, ಸೀರೆಗಳನ್ನು, ಇತರೆ ಬಟ್ಟೆಗಳನ್ನು ಕೊಟ್ಟು ವಿವಾಹವಾಗಬೇಕಾಗುತ್ತದೆ. ಮದುವೆಯಾಗುವ ವರನು ಹೆಣ್ಣಿನ ಕಡೆಯವರಿಗೆ ಅಥವಾ ಹೆಣ್ಣಿನ ತಂದೆ, ತಾಯಿಯವರಿಗೆ ಚೆನ್ನಾಗಿ ಮದ್ಯಪಾನವನ್ನು ಮಾಡಿಸಿ, ಊಟಉಪಚಾರವನ್ನು ನೋಡಿಕೊಳ್ಳ ಬೇಕಾಗುತ್ತದೆ. ಹೆಣ್ಣಿನ ಕಡೆಯವರನ್ನು ಸಂತೋಷಪಡಿಸಿದರೆ, ಮದುವೆಯು ಸುಸೂತ್ರವಾಗಿ ನಡೆಯುತ್ತದೆ. ಆಗಾಗ್ಗೆ ವಧುವಿನ ಕಡೆಯವರಿಗೆ ಚೆನ್ನಾಗಿ ನೋಡಿಕೊಂಡರೆ, ವಧುವಿನ ತಂದೆ, ತಾಯಿಗಳು ಮತ್ತು ವಧುವಿನ ಕಡೆಯವರು ಖುಷಿಯಾಗಿರುತ್ತಾರೆ.

**ನಿಶ್ಚಯ ಶಾಸ್ತ್ರ:** ಹಕ್ಕಿಪಿಕ್ಕಿಯರಲ್ಲಿನ ವಿವಾಹ ಪದ್ಧತಿಯಲ್ಲಿ 'ಸಗಾಯಿ' ಎಂದರೆ 'ನಿಶ್ಚಯಶಾಸ್ತ್ರ' ಮತ್ತು 'ವಾಯ್' ಅಂದರೆ 'ಮದುವೆಶಾಸ್ತ್ರ' ಎನ್ನುವ ಎರಡು ಹಂತಗಳಿವೆ.

**ತೆರಪದ್ಧತಿ:** ಹಕ್ಕಿಪಿಕ್ಕಿಯರಲ್ಲಿ 'ತೆರಪದ್ಧತಿ'ಯ ಸಂಪ್ರದಾಯವಿದೆ. ಈ ಸಂಪ್ರದಾಯದ ಪ್ರಕಾರ, ವರನ ಮತ್ತು ವಧುವಿನ ಕಡೆಯ ಹಿರಿಯರು ವರ ಮತ್ತು ವಧುವನ್ನು ವಿವಾಹಕ್ಕೆ ನಿಶ್ಚಯಿಸಿದ ನಂತರ ನಿಶ್ಚಿತಾರ್ಥ ಮಾಡುವಾಗ ವಧುವಿಗೆ ಸೀರೆಗಳನ್ನು ಮತ್ತು ವಸ್ತ್ರಗಳನ್ನು ಕೊಡುತ್ತಾರೆ. ಎದುರುಬದುರು ಕುಟುಂಬಗಳು ಹೆಣ್ಣು ಕೊಡುವುದು ಮತ್ತು ತರುವುದು ಕಡ್ಡಾಯ ಪದ್ಧತಿಯಾಗಿರುವುದರಿಂದ ಹೆಣ್ಣನ್ನು ಮದುವೆ ಮಾಡಿಕೊಂಡ ಮನೆಯಲ್ಲಿ ಹೆಣ್ಣು ಇಲ್ಲದಿದ್ದರೆ ಮುಂದೆ ಹುಟ್ಟುವ ಹೆಣ್ಣನ್ನು ಕೊಡಬೇಕಾಗುತ್ತದೆ. ಇಲ್ಲದಿದ್ದರೆ, 'ತೆರ'ವನ್ನು ಕೊಡಬೇಕಾಗುತ್ತದೆ. ಈ 'ತೆರ'ದ ಹಣ ೫೦೦ ರೂ.ಗಳಿಂದ ೧೦.೦೦೦ ರೂಪಾಯಿಗಳವರೆಗೆ ಇದೆ. ಈ ತೆರದ ಹಣ ಒಂದು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತಿರುತ್ತದೆ. ಈ 'ತೆರ' ದ ಹಣವನ್ನು 'ಮಹರ್' ಎಂದೂ ಕರೆಯಲಾಗುತ್ತದೆ.

### ವಿವಾಹದ ಕ್ರಮಗಳು

**ವೀಳ್ಯಶಾಸ್ತ್ರ :** ವರನ ಕುಟುಂಬದ ಹಿರಿಯರು ಮತ್ತು ವಧುವಿನ ಕುಟುಂಬದ ಹಿರಿಯರ ಒಪ್ಪಿಗೆಯ ಮೇರೆಗೆ ವಿವಾಹವು ನಿರ್ಧರಿತವಾಗುತ್ತದೆ. ಮದುವೆಯ ಸಿದ್ಧತೆಗಾಗಿ ಎರಡೂ ಮನೆಗಳ ಮುಂದೆ ಚಪ್ಪರವನ್ನು ಹಾಕಿ, ಸಿಹಿ ಅಡುಗೆಯನ್ನು ಮಾಡಿ ಎಲ್ಲರಿಗೂ ಹಾಕುತ್ತಾರೆ.

**ಬೊಟ್ಟಿಡುವ ಶಾಸ್ತ್ರ :** ಹೆಣ್ಣು ಹೆತ್ತವರು ಅವರ ಮಗಳು ಅಪ್ರಾಪ್ತವಯಸ್ಕಗಳಾದರೆ ತಮ್ಮ ಕುಟುಂಬದಲ್ಲೇ ಇಟ್ಟುಕೊಳ್ಳಬಹುದು, ಇಲ್ಲದಿದ್ದರೆ ಸಂಬಂಧಿಕರಿಗೆ ಒಪ್ಪಿಸಬಹುದು. ಹೆಣ್ಣು ಋತುಮತಿಯಾಗುವವರೆಗೂ ತಮ್ಮ ಕುಟುಂಬದಲ್ಲಿ ಇಟ್ಟುಕೊಳ್ಳುತ್ತಾರೆ. ಋತುಮತಿಯಾದ ನಂತರ ಸಂಬಂಧಿಕರನ್ನು ಹುಡುಕಿ ವಿವಾಹವನ್ನು ಮಾಡಿ ಅವರಿಗೆ ಒಪ್ಪಿಸಲಾಗುತ್ತದೆ. ಬೊಟ್ಟಿಡುವ ಶಾಸ್ತ್ರಕ್ಕೆ ಮುಂಚಿತವಾಗಿ ವಧು-ವರರಿಗೆ ಹಲ್ಲಿಟ್ಟು (ಮೀಷಿ) ಹಚ್ಚುವುದು ಸಂಪ್ರದಾಯವಾಗಿದೆ.

### ಬೆಲ್ಲದ ಅನ್ನದ ಶಾಸ್ತ್ರ

**ಮವಾಳ್ :** ವರನ ಮನೆಯ ತ್ರಾಂಗಡೂ (ದೇವಿಯ ಪಿಟಾರಿ) ಎದುರು ಮೂರು ಕಲ್ಲನ್ನು ಇಟ್ಟು ಒಲೆಯನ್ನು ಮಾಡಿ ಬೆಂಕಿಯಿಂದ ಬೆಲ್ಲವನ್ನು ಬೇಯಿಸುತ್ತಾರೆ. ಇದನ್ನು ಗಂಡು ಮತ್ತು

ಹೆಣ್ಣು ಮನೆಯಲ್ಲೂ ಬೇಯಿಸುತ್ತಾರೆ. ಗಂಡಿನ ಮನೆಯವರ ಬೆಲ್ಲದ ಅನ್ನಕ್ಕೆ 'ಮವಾಳ್' ಎಂದು ಕರೆಯುತ್ತಾರೆ. ಬೊಟ್ಟಿಡುವ ಶಾಸ್ತ್ರ ಸಂಪ್ರದಾಯಕ್ಕೆ ಮೊದಲು ಹರಿವಾಣದಲ್ಲಿ ಬೆಲ್ಲದ ಅನ್ನವನ್ನು ತೆಗೆದುಕೊಂಡು ತ್ರಾಂಗಡೂ ಎದುರು ಹರಡುತ್ತಾರೆ. ಇದನ್ನು 'ಥಾಳ್‌ಭರಾನು' ಎಂದು ಕರೆಯುತ್ತಾರೆ. ಬೊಟ್ಟನ್ನು ಇಟ್ಟ ನಂತರ ದೊಡ್ಡ ಉಂಡೆಗಳನ್ನು ಕಟ್ಟಿ ಮಧ್ಯಭಾಗದಲ್ಲಿ ಕುಳಿಯನ್ನು ಮಾಡಿ ಅಲ್ಲಿನ ಹಿರಿಯರಿಗೆ ಒಳ್ಳೆಣ್ಣೆಯನ್ನು ಹಾಕಿಕೊಡುತ್ತಾರೆ ಅಥವಾ ತುಪ್ಪವನ್ನು ಹಾಕಿಕೊಡುತ್ತಾರೆ. ಅಲ್ಲದೇ ಪ್ರತಿ ಮನೆಗೂ ಮವಾಳ್‌ನ್ನು ತಲುಪಿಸಲಾಗುತ್ತದೆ. ಈ ಸಂದರ್ಭದಲ್ಲಿ ಗಂಡು ಮತ್ತು ಹೆಣ್ಣು ಸರಿಸಮನಾಗಿ ಕುಡಿಯುವುದನ್ನು ಮಾಡುತ್ತಾರೆ. ಹಾಡುಗಳನ್ನು ಹೇಳುವುದರ ಮೂಲಕ ನೃತ್ಯವನ್ನು ಮಾಡುತ್ತಾರೆ.

**ದಾಪು:** ಹೆಣ್ಣಿನ ಕಡೆಯವರ ಮನೆಯ ಬೆಲ್ಲದ ಅನ್ನವಾಗಿದೆ. ಗಂಡಿನ ಮನೆಯವರ ತ್ರಾಂಗಡೂ ಐದುರು ಬೊಟ್ಟಿಡುವ ಶಾಸ್ತ್ರ ನಡೆದ ನಂತರ ದಾಪುವನ್ನು ಹೆಣ್ಣಿನ ಮನೆಯ ತ್ರಾಂಗಡೂ ಎದುರು ಬೇಯಿಸುತ್ತಾರೆ. ಈ ಶಾಸ್ತ್ರವು ಮುಗಿದ ನಂತರ ದೊಡ್ಡದೊಡ್ಡ ಉಂಡೆಗಳನ್ನು ಕಟ್ಟಿ ಒಳ್ಳೆಣ್ಣೆಯನ್ನು ಅಥವಾ ತುಪ್ಪವನ್ನು ಹಾಕಿ ಕೊಡುತ್ತಾರೆ. ದಾಪುವನ್ನು ಪ್ರತಿ ಬಿಡಾರಗಳಿಗೂ ತಲುಪಿಸಲಾಗುತ್ತದೆ.

ಮದುವೆ ನಿಶ್ಚಯದಿಂದ ಹಿಡಿದು ಮದುವೆಯ ಶಾಸ್ತ್ರವು ಮುಗಿಯುವವರೆಗೂ ಗಂಡು ಮತ್ತು ಗಂಡಿನ ಕಡೆಯವರು ಎಲ್ಲಾ ಖರ್ಚನ್ನು ನೋಡಿಕೊಳ್ಳುತ್ತಾರೆ. ಅಳಿಯನು ಅತ್ತೆ ಮಾವಂದಿರನ್ನು ಗೌರವ ಭಾವನೆಯಿಂದ ಕಾಣಬೇಕಾಗುತ್ತದೆ. ಅತ್ತೆ ಮಾವಂದಿರಿಗೆ ಸಾಕಷ್ಟು ಮದ್ಯವನ್ನು ಕುಡಿಸಬೇಕು. ಹೋಟೆಲ್‌ಗಳಲ್ಲಿ ಚೆನ್ನಾಗಿ ಊಟ ತಿಂಡಿಗಳನ್ನು ಕೊಡಿಸಬೇಕು. ಕಾಫಿ, ಟೀ,ಯನ್ನು ಕೊಡಿಸಬೇಕಾಗುತ್ತದೆ.

ಗಂಡಿನ ತಂದೆ ಅಥವಾ ಕುಲದ ಹಿರಿಯರು ಏಳು ಸಲ ದೇವರಿಗೆ ಎರಡೂ ಹೆಬ್ಬಟ್ಟುಗಳಿಂದ ಅರಿಷಿಣ ಕುಂಕುಮ ಕಲಸಿದ ಬೊಟ್ಟು ಇಡುತ್ತಾರೆ. ಆ ನಂತರ ಎಡಗೈಯಿಂದ ಹೆಣ್ಣಿಗೂ ಮತ್ತು ಬಲಗೈಯಿಂದ ಗಂಡಿಗೂ ಹಣೆಗೆ ಏಳು ಸಲ ಬೊಟ್ಟು ಇಡುತ್ತಾರೆ. ನಂತರ 'ಟೀಕಂದಾರ್‌ನಿ' ಎಂದು ಘೋಷಿಸುತ್ತಾರೆ. ಹೀಗೆಂದರೆ 'ದೇವರಿಗೆ ಅರ್ಪಿತವಾದ ಹೆಣ್ಣು ಇವಳು ಇನ್ನೂ ಮೈಲಿಗೆ ಆಗಿಲ್ಲ' ಎಂದರ್ಥ. ಈ ಸಂದರ್ಭದಲ್ಲಿ ಕಾಂಡು(ಕಂಕಣ)ವನ್ನು ಮೂರು ದಿನಗಳವರೆಗೆ ಕಟ್ಟುತ್ತಾರೆ. ಮೂರನೆಯ ದಿವಸ ಯಾವುದಾದರೂ ತಟ್ಟೆಯ ಜೊತೆಗೆ ಒಂದು ಕೊಡ ನೀರನ್ನು  ಇಟ್ಟುಕೊಂಡಿರುತ್ತಾರೆ. ಮನೆ ಮುಂದೆ ಚಪ್ಪರದ ಕೆಳಗೆ ಮಾಡುವ ಶಾಸ್ತ್ರ ಇದಾಗಿದೆ. ಒಂದು ತಟ್ಟೆಯಲ್ಲಿ ನೀರಿರುತ್ತದೆ. ಬೆಳ್ಳಿ, ಬಂಗಾರ, ತಾಮ್ರದ ಯಾವುದೇ ಬಗೆಯ ಏಳು ಉಂಗುರಗಳನ್ನು ಹಾಕಿ ಯಾರು ಎಷ್ಟು ಮೀನುಗಳನ್ನು ಹಿಡಿಯುತ್ತೀರಿ ನೋಡೋಣವೆಂದು ಸಾರಥಿಗಳು 'ಮೀನಿನ ಆಟ'ವನ್ನು ಆಡಿಸುತ್ತಾರೆ. ಕಂಕಣಕ್ಕೆ ಹಾಕಿದ್ದ ಏಳು ಗಂಟುಗಳನ್ನು ಗಂಡು ಹೆಣ್ಣಿನದನ್ನು, ಹೆಣ್ಣು ಗಂಡಿನದನ್ನು ಬಿಚ್ಚುತ್ತಾ ಈ ಆಟವನ್ನು ಆಡುತ್ತಾರೆ. ಇದರೊಂದಿಗೆ ಮದುವೆಯ ಕಾರ್ಯ ಮುಗಿದಂತಾಗುತ್ತದೆ. ಗಂಡು ಹೆಣ್ಣುಗಳು (ಗಂಡ-ಹೆಂಡತಿ) ಹಿರಿಯರ

ಕಾಲಿಗೆ ಬೀಳುತ್ತಾರೆ. ಹಕ್ಕಿಪಿಕ್ಕಿಯರಲ್ಲಿ ಗಂಡ ಹೆಂಡತಿಯರ ಹೆಸರು ಕೇಳುವ ಸಂಪ್ರದಾಯ ಇಲ್ಲ. ಒಂದು ವೇಳೆ ಯಾರಾದರೂ ಹೆಸರನ್ನು ಕೇಳಿದರೆ ಹಿರಿಯರ ಕಾಲಿಗೆ ಬೀಳದೆ ಯಾರೂ ತಮ್ಮ ಗಂಡ ಅಥವಾ ಹೆಂಡತಿಯ ಹೆಸರನ್ನು ಹೇಳುವುದಿಲ್ಲ. ಹಕ್ಕಿಪಿಕ್ಕಿಯರಲ್ಲಿ ಇದೇ ಕೊನೆಯ ಬಾರಿ ಎಂಬಂತೆ ಹೆಸರನ್ನು ಕೇಳುತ್ತಾರೆ. ನಂತರ ಹೆಣ್ಣು ಯಾವಾಗಲೂ ಗಂಡಿನ ಹೆಸರನ್ನು ಹೇಳುವುದಿಲ್ಲ. ಲಗ್ನಕ್ಕೆಂದು ಎರಡು ಜೋಡಿ ಕರಿಮಣಿಸರ ಕಟ್ಟುತ್ತಾರೆ. ಆದರೆ ಬದಲಾದ ಇಂದಿನ ದಿನಗಳಲ್ಲಿ ಬಂಗಾರದಿಂದ ಮಾಡಿದ ತಾಳಿಯನ್ನು ಕಟ್ಟುತ್ತಾರೆ. ಗಂಡಿನ ಕಡೆಯವರೇ ತಾಳಿಯನ್ನು ತರಬೇಕಾಗುತ್ತದೆ. ಹಿಂದಿನ ಕಾಲದಲ್ಲಿ ಮದುವೆ ಉಸ್ತುವಾರಿಯನ್ನು ಹೊತ್ತ ಸಾರಥಿಯೇ ತಾಳಿಯನ್ನು ಕಟ್ಟುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಮದುವೆಯಾಗುವ ಗಂಡು ತಾಳಿಯನ್ನು ಕಟ್ಟುತ್ತಾನೆ. ಗಂಡನಾಗುವವನು ಹೆಂಡತಿಯಾಗುವವಳ ಕಾಲಿಗೆ ಕುಂಕುಮದಿಂದ ನಾಲ್ಕು ಪಟ್ಟೆಗಳನ್ನು ಬರೆಯುತ್ತಾನೆ. ಇದಕ್ಕೆ 'ಮಾಂಗ್‌ಭರಾನು' ಎನ್ನುತ್ತಾರೆ. ಗಂಡಿನ ಕೈಲಿ ವೀಳ್ಯದ ಎಲೆಗಳನ್ನು ಸುತ್ತಿ ಚಾಕುವಿನ ತುದಿಗೆ ನಿಂಬೆ ಹಣ್ಣನ್ನು ಗಂಡಿನ ಎಡಗೈಗೆ ಕೊಟ್ಟಿರುತ್ತಾರೆ. ಅದೇ ರೀತಿಯಲ್ಲಿ ಹೆಣ್ಣಿಗೂ ಸಹ ಕೊಟ್ಟಿರುತ್ತಾರೆ. ಮದುವೆಯ ಹೆಣ್ಣು ಮಗಳಿಗೆ ಮತ್ತು ಗಂಡನಾಗುವ ಗಂಡಿಗೆ ಎಣ್ಣೆ ಹಚ್ಚಿ ಬೆಳಗ್ಗೆ ಮತ್ತು ಸಾಯಂಕಾಲ ಸ್ನಾನ ಮಾಡಿಸುತ್ತಾರೆ. ಊಟವಾದ ಮೇಲೆ ಗಂಡ ಹೆಂಡಿರಿಬ್ಬರಲ್ಲೂ ಮಮತೆ ಇರಲೆಂದು ಗಂಡಿನ ತಾಂಬೂಲದ ಎಂಜಲನ್ನು ಹೆಣ್ಣಿಗೂ, ಹೆಣ್ಣಿನ ತಾಂಬೂಲದ ಎಂಜಲನ್ನು ಗಂಡಿಗೂ ತಿನ್ನಿಸುತ್ತಾರೆ.[೧೦]

ವಿವಾಹದ ಸಂದರ್ಭದಲ್ಲಿ ವಧುದಕ್ಷಿಣೆಯನ್ನು ಕಡ್ಡಾಯವಾಗಿ ಕೊಡುತ್ತಾರೆ. ಇಲ್ಲದಿದ್ದರೆ ವಿವಾಹ ನೆರವೇರುವುದಿಲ್ಲ. ವಧುದಕ್ಷಿಣೆಯನ್ನು ಇವರು 'ಮಹರ್' ಎನ್ನುತ್ತಾರೆ. ವಧು ಮತ್ತು ವರರಿಗೆ ಮದುವೆಗೆ ಬಂದಂತಹ ನೆಂಟರು, ಗೆಳೆಯರು ಹಣವನ್ನು ಮುಯ್ಯಿಯ ರೂಪದಲ್ಲಿ ಕೊಡುತ್ತಾರೆ. ಮದುವೆಯ ನಂತರ ಮಾಂಸದ ಊಟವನ್ನು ಮತ್ತು ಮದ್ಯಪಾನದ ವ್ಯವಸ್ಥೆಯನ್ನು ಮಾಡುತ್ತಾರೆ. ಚೆನ್ನಾಗಿ ಮದ್ಯಪಾನವನ್ನು ಮಾಡಿ ಮಾಂಸದ ಊಟವನ್ನು ಮಾಡುತ್ತಾರೆ. ಮದುವೆಯ ಮರುದಿನದಂದು ಗಂಡು ಮತ್ತು ಹೆಣ್ಣಿನ ನಡುವೆ ಸಂಭೋಗ ನಡೆಯದಿದ್ದಲ್ಲಿ ಪರಸ್ಪರ ಒಪ್ಪಿಗೆಯಾಗುವವರೆಗೂ ಗಂಡನಾದವನು ಹೆಂಡತಿಯಾದವಳನ್ನು ಮನ ಒಲಿಸಲು ಪ್ರಯತ್ನಿಸುತ್ತಾನೆ. ಅಲ್ಲದೆ ಹೆಣ್ಣಿನ ತಂದೆ ತಾಯಿಗಳೂ ಕೂಡ ಹೆಣ್ಣಿಗೆ ತಿಳಿಹೇಳುತ್ತಾರೆ. ಇಂತಹ ಸಂದರ್ಭದಲ್ಲಿ ಹೆಣ್ಣಿನ ತಾಯಿಯು ಸಂಭೋಗದ ಬಗ್ಗೆ ತಿಳುವಳಿಕೆಯನ್ನು ನೀಡುತ್ತಾರೆ. ಇಂತಹ ಹೊಂದಾಣಿಕೆಯ ಸಮಸ್ಯೆಗಳು ಬಾಲ್ಯವಿವಾಹದಂತಹ ಸಂದರ್ಭಗಳಲ್ಲಿ ಉಂಟಾಗುತ್ತವೆ. ಗಂಡನಾದವನು ಹೆಂಡತಿಯ ಅಪ್ಪ ಅಮ್ಮಂದಿರಿಗೆ ಚೆನ್ನಾಗಿ ಕುಡಿಸಿ, ತಿನ್ನಿಸಿ ಅವರನ್ನು ಮನವೊಲಿಸಿಕೊಂಡು ಹೆಂಡತಿಯಾದವಳನ್ನು ಮನವೊಲಿಸಿಕೊಳ್ಳುತ್ತಾನೆ. ಮದುವೆಯ ನಂತರವೂ ಹೊಂದಾಣಿಕೆಯ ಸಮಸ್ಯೆಗಳು ಉಂಟಾದರೆ ಗಂಡನಾದವನು ಹೆಂಡತಿಯ ಅಪ್ಪ ಅಮ್ಮಂದಿರಿಗೆ ಕುಡಿಸಿ, ತಿನ್ನಿಸುವುದರ ಮೂಲಕ ತನ್ನ ಹೆಂಡತಿಯಾದವಳಿಗೆ ಬುದ್ಧಿ ಹೇಳುವಂತೆ, ಹೊಂದಾಣಿಕೆ ಮಾಡಿಕೊಡುವಂತೆ ಪ್ರಯತ್ನಿಸುತ್ತಾನೆ. ಇಂತಹ ಹೊಂದಾಣಿಕೆ ಸಮಸ್ಯೆಗಳಾದರೆ, ಜನಾಂಗದ ಮುಖಂಡರ ಸಮ್ಮುಖದಲ್ಲಿ

ಸಮಸ್ಯೆಗಳನ್ನು ಬಗೆಹರಿಸುತ್ತಾರೆ. ಹಕ್ಕಿಪಿಕ್ಕಿ ಜನಾಂಗದಲ್ಲಿ ಎದುರು ಹೆಣ್ಣು ಅಥವಾ ಎದುರು ಗಂಡು ತರುವ ಪದ್ಧತಿ ಇವರಲ್ಲಿದೆ. ಈ ಪದ್ಧತಿಯನ್ನು 'ಆಟಾಖ್ವಾಟಿ' ಎಂದು ಕರೆಯುತ್ತಾರೆ.

**ಪಟ್‌ಕರ್‌ವಾನಾ:** ಹಕ್ಕಿಪಿಕ್ಕಿ ಜನಾಂಗದಲ್ಲಿ ಗಂಡು ಮತ್ತು ಹೆಣ್ಣು ಪರಸ್ಪರ ಇಷ್ಟಪಟ್ಟು, ಪ್ರೀತಿಸಿ ಹಿರಿಯರ ಯಾರ ಅನುಮತಿಯೂ ಇಲ್ಲದೆ ಮದುವೆಯಾಗುವುದನ್ನು 'ಪಟ್‌ಕರ್‌ವಾನಾ' ಎನ್ನುತ್ತಾರೆ. 'ಪಟ್‌ಕರ್‌ವಾನಾ' ಎಂದರೆ, 'ಓಡಿಹೋಗಿ ಮದುವೆಯಾಗುವುದು' ಎನ್ನುವ ಅರ್ಥವನ್ನು ಸೂಚಿಸುತ್ತದೆ. ಇಂತಹ ವಿವಾಹವಾದ ಗಂಡು ಮತ್ತು ಹೆಣ್ಣನ್ನು ಸಮುದಾಯದ ಮುಖಂಡರು ಕರೆಯಿಸಿ ಮಾನವೀಯತೆಯ ದೃಷ್ಟಿಯಿಂದ ಹಾಗೂ ಮದುವೆಯ ಮೈಲಿಗೆ(ಮಲಿನತೆ)ಯ ದೋಷವನ್ನು ನಿವಾರಿಸಲು 'ಖೆಲಾವಂತಿ' ಎನ್ನುವ ಕಾಲ್ಪನಿಕ ವಿವಾಹವನ್ನು ಮಾಡುತ್ತಾರೆ. ಒಂದು ಬಾಳೆಗಿಡವನ್ನು ಹೆಣ್ಣಿನಂತೆ ಶೃಂಗರಿಸಿ ಹೆಣ್ಣು ಮತ್ತು ಗಂಡಿನ ತಂದೆ ತಾಯಿಗಳು ಮುಂದೆ ನಿಂತು ಈ ಕಾಲ್ಪನಿಕ ವಿವಾಹದ ಕಾರ್ಯವನ್ನು ನೆರವೇರಿಸುವುದರ ಮೂಲಕ ಅವರುಗಳ ದೇವರುಗಳಿಗೆ ತೃಪ್ತಿಯಾಗುತ್ತದೆ. ಇದರಿಂದ ದೋಷನಿವಾರಣೆಯಾಗುತ್ತದೆ. ಎಂದು ಭಾವಿಸುತ್ತಾರೆ. ಹೀಗೆ ಹಿರಿಯರ ಸಮ್ಮತಿಯಿಲ್ಲದೆ ವಿವಾಹವಾಗಿ ಹಕ್ಕಿಪಿಕ್ಕಿಯ ಜನಾಂಗದ ಹಟ್ಟಿಗೆ ಬರುವ ದಂಪತಿಗೆ ಹಟ್ಟಿಯ ಕೊನೆಯಲ್ಲಿ ಗುಡಲು ಹಾಕಿಕೊಳ್ಳಲು ಅನುಮತಿ ನೀಡುತ್ತಾರೆ. ಇವರನ್ನು ಕೀಳಾಗಿ ಕಾಣುತ್ತಾರೆ. ಅಲ್ಲದೇ ಯಾವುದೇ ಸಭೆ, ಸಮಾರಂಭಗಳಲ್ಲಿ ಭಾಗವಹಿಸಲು ಅನುಮತಿ ನೀಡುವುದಿಲ್ಲ ಮತ್ತು ದೇವತೆಯ ತಿಲಕವನ್ನು ಇವರಿಗೆ ಇಡುವುದಿಲ್ಲ. 'ಖೆಲಾವಂತಿ' ಎನ್ನುವ ಕಾಲ್ಪನಿಕ ವಿವಾಹದ ನಂತರ ಗಂಡು ಹೆಣ್ಣುಗಳು ಅವರ ಕುಲಪದ್ಧತಿಯಂತೆ ಮರುವಿವಾಹವಾಗಬೇಕಾಗುತ್ತದೆ. ಇಲ್ಲದಿದ್ದರೆ. ಯಾವುದೇ ಸ್ಥಾನಮಾನವು ಇವರ ಸಮುದಾಯದಲ್ಲಿ ಇವರಿಗೆ ದೊರೆಯುವುದಿಲ್ಲ.

**ಸೀರುಡಿಕೆ ಪದ್ಧತಿ(ಪಾಟ್ ಅಥವಾ ಕೂಡಾವಳಿ)**

ಹಕ್ಕಿಪಿಕ್ಕಿ ಜನಾಂಗದಲ್ಲಿ ಸೀರುಡಿಕೆ(ಕೂಡಾವಳಿ) ಪದ್ಧತಿ ಇದೆ. ವಿಧವೆಯಾದ ಹೆಣ್ಣು ಅಥವಾ ವಿದುರನಾದ ಗಂಡು ಮರುವಿವಾಹವಾಗುವುದಕ್ಕೆ ಅವಕಾಶವಿದೆ. ಇಂತಹ ಮದುವೆಯು ಶಾಸ್ತ್ರೋಕ್ತವಾಗಿ ಮದುವೆಯಂತೆ ವಿಜೃಂಭಣೆಯಿಂದ ಆಗುವುದಿಲ್ಲ. ತುಂಬಾ ಸರಳವಾಗಿ ಆಗುತ್ತದೆ. ಇಂತಹ ಸೀರುಡಿಕೆ ಪದ್ಧತಿಯಲ್ಲಿ ಗಂಡಸರು ಹೆಚ್ಚಾಗಿ ಭಾಗವಹಿಸುವುದಿಲ್ಲ. ಈ ಪದ್ಧತಿಯು ಕೀಳಾದ ಪದ್ಧತಿಯೆಂದು ಭಾವಿಸಿರುತ್ತಾರೆ. ಈ ಸೀರುಡಿಕೆ ಪದ್ಧತಿಯು ಸಾಮಾನ್ಯವಾಗಿ ಎಲ್ಲಾ ಬುಡಕಟ್ಟು ಸಮುದಾಯಗಳಲ್ಲೂ ಕಂಡುಬರುತ್ತದೆ. ಈ ಪದ್ಧತಿಯಲ್ಲಿ ಹೆಣ್ಣಿಗೆ ಸಂಪೂರ್ಣವಾದ ಸ್ವಾತಂತ್ರ್ಯವಿರುತ್ತದೆ. ಹೆಣ್ಣಿನ ಒಪ್ಪಿಗೆಯಿಲ್ಲದೆ ಸೀರುಡಿಕೆ ಶಾಸ್ತ್ರ ನೆರವೇರುವುದಿಲ್ಲ. ಆದರೆ ಮದುವೆಯಾಗುವ ಗಂಡಿಗೆ ಹಿರಿಯರ ಒತ್ತಡವಿರುತ್ತದೆ. ಕಾರಣವೇನೆಂದರೆ ಹೆಣ್ಣಿನ ರಕ್ಷಣೆ ಮತ್ತು ಸಮಾಜದ, ಕುಟುಂಬದ ಮಾನವನ್ನು ಕಾಪಾಡುವುದು ಸಮಾಜದ ಹಿರಿಯರ ಆಶಯವಾಗಿರುತ್ತದೆ. ಈ ಸೀರುಡಿಕೆ ಶಾಸ್ತ್ರವು ಸರಳವಾಗಿ ನಡೆಯುತ್ತದೆ. ಜನಾಂಗದ ಹಿರಿಯ ಮುಖಂಡ ಮತ್ತು ದೇವರ ಮುಂದೆ ಎಲೆ ಅಡಿಕೆಯನ್ನು ಕೊಟ್ಟು, ತೆಗೆದುಕೊಳ್ಳುವುದು ನಡೆಯುತ್ತದೆ. ಇಂತಹ ವಿನಿಮಯ ವಿಧಾನವು ಪರಸ್ಪರ

ಒಪ್ಪಿಗೆಯನ್ನು ಸೂಚಿಸುತ್ತದೆ. ಹೆಣ್ಣಿಗೆ ಹದಿನೈದು ರೂಪಾಯಿಗಳನ್ನು ಮಾತ್ರ 'ತೆರ'ವನ್ನಾಗಿ ಕೊಡುತ್ತಾರೆ. ವಿಧವೆಯ ಮಕ್ಕಳು ತಾತನ ಮನೆ ಅಥವಾ ಚಿಕ್ಕಪ್ಪನ ಮನೆಯನ್ನು ಸೇರುತ್ತಾರೆ. ಹಕ್ಕಿಪಿಕ್ಕಿ ಸಮುದಾಯದಲ್ಲಿ ಗಂಡ ಇದ್ದ ಹೆಣ್ಣು ಕೂಡ ಸೀರುಡಿಕೆಯನ್ನು ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಕೊಡಲಾಗಿದೆ. ಗಂಡನನ್ನು ಆಯ್ಕೆ ಮಾಡಿಕೊಳ್ಳುವ ಸಂಪೂರ್ಣ ಸ್ವಾತಂತ್ರ್ಯವನ್ನು ಹೆಣ್ಣಿಗೆ ನೀಡಲಾಗಿದೆ.

ವಿವಾಹವಾಗುವ ವ್ಯಕ್ತಿಯು ವಿಧವೆಯಾಗಿರುವ ತನ್ನ ಅಣ್ಣನ ಹೆಂಡತಿಯನ್ನು ಅಥವಾ ವಿಧವೆಯಾದ ತಮ್ಮನ ಹೆಂಡತಿಯನ್ನು ಸೀರುಡಿಕೆಯ ಮೂಲಕ ವಿವಾಹವಾಗಬಹುದಾಗಿದೆ. ವಿಧವೆಯಾದ ಹೆಣ್ಣಿಗೆ ಹಲ್ಲಿಟ್ಟು (ಮೀಶಿ) ಹಚ್ಚುವುದರ ಮೂಲಕ ಮತ್ತೊಮ್ಮೆ ವಿವಾಹಕ್ಕೆ ಅರ್ಹಳಾಗುತ್ತಾಳೆ. ಆದರೆ ಇಂತಹ ವಿವಾಹವು ಸೀರುಡಿಕೆ (ಕೂಡಾವಳಿ) ಆಗುತ್ತದೆಯೇ ವಿನಃ ಶಾಸ್ತ್ರೋಕ್ತ ವಿವಾಹದಂತೆ ನಡೆಯುವುದಿಲ್ಲ. ಹೆಣ್ಣು ಅಥವಾ ಗಂಡಿಗೆ ಮೊದಲ ಮದುವೆಯಾಗಿದ್ದಾಗ ಮಾತ್ರ ಅದು ಶಾಸ್ತ್ರೋಕ್ತ ವಿವಾಹವಾಗುತ್ತದೆ. ಅದು ಎರಡನೆಯ ಮದುವೆಯಾದರೆ ಸೀರುಡಿಕೆ (ಕೂಡಾವಳಿ) ಆಗುತ್ತದೆ. ಪರಸ್ಪರ ಹೆಣ್ಣು ಮತ್ತು ಗಂಡುಗಳು ತಮ್ಮ ಸಂಗಾತಿಗಳನ್ನು ಪಡೆಯುವ ಎರಡನೇ ಮಾರ್ಗವಾಗಿದೆ.

**ವಿವಾಹದ ಕುಲ ನಿಯಮಾವಳಿಗಳು**

೧. ಅಕ್ಕನ ಮಗಳನ್ನು ತಮ್ಮನಿಗೆ ಮದುವೆಯನ್ನು ಮಾಡುವುದಿಲ್ಲ. ಆದರೆ ಇತ್ತೀಚಿಗೆ ಮಾಡತೊಡಗಿದ್ದಾರೆ.

೨. ಅಕ್ಕನ ಮಗನಿಗೆ ಅಣ್ಣನ ಮಗಳನ್ನು ಮದುವೆ ಮಾಡುತ್ತಾರೆ.

೩. ಮೇವಾರ್ ಹೆಣ್ಣು ಕಾಳಿವಾಳೊ ಗಂಡು ಇವರ ನಡುವೆ ವಿವಾಹ ಮಾಡುತ್ತಾರೆ.

೪. ಪವಾರ್ ಗಂಡು ಕಾಳಿವಾಳೊ ಹೆಣ್ಣು ಇವರ ನಡುವೆ ವಿವಾಹ ಮಾಡುತ್ತಾರೆ.

೫. ಮೇವಾಡೊ ಹೆಣ್ಣು ಗುಜರಾತೊ ಗಂಡು ಇವರ ನಡುವೆ ವಿವಾಹ ಮಾಡುತ್ತಾರೆ.

೬. ಗುಜರಾತೊ ಹೆಣ್ಣು ಕಾಳವಾಳೊ ಗಂಡು ಇವರ ನಡುವೆ ವಿವಾಹ ಮಾಡುತ್ತಾರೆ.

೭. ಕಾಳಿವಾಳೊ ಹೆಣ್ಣು ಮತ್ತು ಗಂಡು ಹಾಗೂ ಗುಜರಾತೊ ಮೇವಾರ್ ಪವಾರ್‌ಗಳಲ್ಲಿ ಸಂಬಂಧ ಮಾಡಬಹುದು.

೮. ಕಾಳಿವಾಳೊ ಹೆಣ್ಣು ಮತ್ತು ಗುಜರಾತೊ ಗಂಡು ವಿವಾಹವನ್ನು ಮಾಡಿಕೊಳ್ಳುವುದಾದರೆ ಅತ್ತೆಯು, ಮೇವಾಡೊಗೂ ಅತ್ತೆ, ಪವಾರ್‌ಗೂ ಅತ್ತೆ ಯಾಗುತ್ತಾಳೆ.

೯. ಗುಜರಾತಿಗಳು ತಮ್ಮ ಕುಲದಲ್ಲೇ ವಿವಾಹವಾಗುವಂತಿಲ್ಲ. ಅವರು ಕಾಳಿವಾಡೋ, ಮೇವಾಡೋಗಳಲ್ಲಿ ವಿವಾಹವಾಗುತ್ತಾರೆ. ಪವಾರ್‌ಗಳಲ್ಲಿ ಕೂಡ ವಿವಾಹವಾಗುವಂತಿಲ್ಲ. ಅವರು ಉಳಿದ ಮೂರು ಗುಂಪಿನಲ್ಲಿ ವಿವಾಹವಾಗುತ್ತಾರೆ. ಆದರೆ ಕಾಳಿವಾಡೋಗಳು ಉಳಿದ ಮೂರು ಪಂಗಡಗಳಲ್ಲಿ ಯಾರೊಂದಿಗಾದರೂ ವಿವಾಹವನ್ನು ಮಾಡಿಕೊಳ್ಳಬಹುದು.

**ಇತರೇ ಬಗೆಯ ವಿವಾಹಗಳು**

**ಅಂತರ್‌ಜಾತಿ ವಿವಾಹ:** ಹಕ್ಕಿಪಿಕ್ಕಿ ಸಮುದಾಯದವರು ಬೇರೆ ಜನಾಂಗದೊಂದಿಗೆ ಅಂತರ್‌ಜಾತಿಯ ವಿವಾಹವಾಗುವಂತಿಲ್ಲ. ಒಂದು ವೇಳೆ ವಿವಾಹವಾದರೆ ಅಂತಹವರನ್ನು ಜಾತಿಯಿಂದ ಹೊರಹಾಕಲಾಗುತ್ತದೆ. ಇವರು ತಮ್ಮ ತಾಂಡದಲ್ಲಿ ವಿವಾಹ ಮಾಡಿಕೊಳ್ಳಲು ಹೆಚ್ಚಾಗಿ ಒಪ್ಪುವುದಿಲ್ಲ. ಬೇರೆ ತಾಂಡ ಅಥವಾ ದೂರದ ಪ್ರಾಂತ್ಯದ ತಾಂಡದವರೊಂದಿಗೆ ವಿವಾಹವಾಗಲು ಇಷ್ಟಪಡುತ್ತಾರೆ. ವಿವಾಹವಾದವನು ತನ್ನ ಹೆಂಡತಿ ತೀರಿಹೋದಾಗ ಅಥವಾ ಹೆಂಡತಿ ಇದ್ದಾಗಲೂ ಆಕೆಯ ತಂಗಿಯನ್ನು ವಿವಾಹವಾಗಬಹುದಾಗಿದೆ. ಹಕ್ಕಿಪಿಕ್ಕಿ ಜನಾಂಗದಲ್ಲಿ ಸೋದರ ಅತ್ತೆ ಮತ್ತು ಸೋದರ ಮಾವ ಇವರ ನಡುವೆ ಸಂಬಂಧ ಹೆಚ್ಚು ಇರುತ್ತದೆ. ಹತ್ತಿರದ ಬಂಧುಗಳಲ್ಲಿ ಮದುವೆಗಳು ಹೆಚ್ಚಾಗಿ ನಡೆಯುತ್ತವೆ.

**ಅನೈತಿಕ ಸಂಬಂಧ:** ಹಕ್ಕಿಪಿಕ್ಕಿ ಜನಾಂಗದಲ್ಲಿ ಅನೈತಿಕ ಸಂಬಂಧಗಳನ್ನು ಕಟ್ಟುನಿಟ್ಟಾಗಿ ನಿಷೇಧಿಸಲಾಗಿದೆ. ವಿವಾಹವಾಗುವುದಕ್ಕೆ ಮುಂಚಿತವಾಗಿ ಗಂಡು ಮತ್ತು ಹೆಣ್ಣು ನೈತಿಕವಾಗಿ ಸರಿಯಾಗಿರಬೇಕೆಂಬ ನಿಯಮವಿದೆ. ಒಂದು ವೇಳೆ ವಿವಾಹಕ್ಕೆ ಮುಂಚಿತವಾಗಿ ಹೆಣ್ಣು ಗರ್ಭಿಣಿಯಾದರೆ ಅವಳನ್ನು ವಿವಾಹವಾಗಲು ಗರ್ಭಿಣಿಯಾಗಲು ಕಾರಣವಾದ ಗಂಡನಿಗೆ ಸಮುದಾಯದ ಹಿರಿಯ ಮುಖಂಡರು ಸೂಕ್ತ ದಂಡವನ್ನು ವಿಧಿಸುತ್ತಾರೆ. ಇಂತಹ ವಿವಾಹವನ್ನು 'ಪತ್' ಎನ್ನುವ ಕಾರ್ಯದ ಮೂಲಕ ಮಾಡಿ ಇವರಿಬ್ಬರೂ ವಿವಾಹವಾಗಿದ್ದಾರೆಂದು ಜನಾಂಗದ ಕುಲಸ್ಥರು ಘೋಷಣೆ ಮಾಡುತ್ತಾರೆ. ದಂಡದ ರೂಪದಲ್ಲಿ ಬಂದ ಹಣದಲ್ಲಿ ಎಲ್ಲಾ ಹಿರಿಯರು ಸೇರಿ ಮದ್ಯಪಾನ ಮಾಡಿ ಸಂಭ್ರಮಿಸುತ್ತಾರೆ.

**ವಿವಾಹ ವಿಚ್ಛೇಧನ:** ಹಕ್ಕಿಪಿಕ್ಕಿ ಜನಾಂಗದಲ್ಲಿ ವಿವಾಹ ವಿಚ್ಛೇಧನವು ಸಾಮಾನ್ಯವಾಗಿದೆ. ಕಾರಣವೇನೆಂದರೆ ಇವರು ಮದ್ಯಪಾನವನ್ನು ಹೆಚ್ಚಾಗಿ ಮಾಡುತ್ತಾರೆ. ಸ್ತ್ರೀ ಪುರುಷರಿಬ್ಬರೂ ಸಮಾನವಾಗಿ ಮದ್ಯಪಾನವನ್ನು ಮಾಡುತ್ತಾರೆ. ಕುಡಿತದ ಅಮಲಿನಲ್ಲಿ ಯತೇಚ್ಛ ಜಗಳಗಳು ಆಗುತ್ತಿರುತ್ತವೆ. ಮಾತಿಗೆ ಮಾತು ಬೆಳೆದು ಕೋಪದಲ್ಲಿ ಗಂಡ ಹೆಂಡತಿಗೆ ಹೊಡೆಯುವುದು, ಬಡಿಯುವುದು, ಹೆಂಡತಿಯು ಗಂಡನಿಗೆ ಹೊಡೆಯುವುದು ಬಡಿಯುವುದು ಮಾಡುವುದರಿಂದ, ವಿಚ್ಛೇದನಗಳಾಗುತ್ತವೆ. ಗಂಡನು ಪುರುಷತ್ವ ಕಳೆದುಕೊಂಡು, ಷಂಡನಾದರೆ, ಹೆಂಡತಿಯು ಪರ ಪುರುಷನೊಂದಿಗೆ ಸಂಬಂಧವಿರಿಸಿಕೊಂಡಿದ್ದರೆ, ಹೆಂಡತಿ ಗರ್ಭ ಧರಿಸದೇ ಬಂಜೆಯಾಗಿದ್ದರೆ, ಗಂಡ ಹೆಂಡತಿಯರಲ್ಲಿ ಯಾರಿಗಾದರೂ ಗಂಭೀರ ಕಾಯಿಲೆಗಳು ಇದ್ದರೆ, ಈ ರೀತಿಯ ಕಾರಣಗಳು ಅಥವಾ ಕ್ಷುಲ್ಲಕ ಕಾರಣಗಳಿಂದಲೂ ವಿಚ್ಛೇದನಗಳು ಆಗುತ್ತವೆ ಇಂತಹ ವಿಚ್ಛೇದನಗಳನ್ನು ಗಂಡ ಹೆಂಡತಿಯ ಎರಡೂ ಕಡೆಯವರು ಮತ್ತು ಜನಾಂಗದ ಮುಖಂಡರು, ಹಿರಿಯರು, ಪಂಚರು ಪಂಚಾಯ್ತಿ ಸೇರಿ ವಾದ ವಿವಾದಗಳ ನಂತರ ಸರಿಯಾದ ಕಾರಣಗಳು ಕಂಡು ಬಂದರೆ ವಿಚ್ಛೇದನ ಪಡೆದು ದೂರ ದೂರ ವಾಸಿಸಲು ಅನುಮತಿ ನೀಡಲಾಗುತ್ತದೆ. ಒಂದು ವೇಳೆ ಗಂಡ

ಹೆಂಡತಿಯು ಹೊಂದಿಕೊಂಡು ಹೋಗುವುದಾದರೆ ಹೊಂದಾಣಿಕೆ ಮಾಡಲಾಗುತ್ತದೆ. ವಿಚ್ಛೇದನ ಪಡೆದ ಗಂಡು ಪುನರ್ ವಿವಾಹವಾಗಲು ಅನುಮತಿಯನ್ನು ನೀಡಲಾಗುತ್ತದೆ. ಗಂಡನು ವಿಚ್ಛೇದನ ನೀಡಿದಾಗ ತಾನು ಕೊಟ್ಟಿದ್ದ 'ವಧುದಕ್ಷಿಣೆ'(ಮಹರ್)ಯನ್ನು ವಾಪಸು ಕೇಳುವಂತಿಲ್ಲ. ಅಲ್ಲದೇ ಹೆಂಡತಿಯ ಮೇಲೆ ಯಾವುದೇ ಹಕ್ಕುಗಳೂ ಇರುವುದಿಲ್ಲ. ಹಕ್ಕಿಪಿಕ್ಕಿಯರಲ್ಲಿ ವಿವಾಹ ವಿಚ್ಛೇದನಗಳು ಕ್ಷುಲ್ಲಕ ಕಾರಣಗಳಿಗಾಗಿ ನಡೆಯುತ್ತವೆ. ಜಗಳಗಂಟಿಯರಾದ ಗಂಡ ಹೆಂಡತಿಯರು, ಕುಡಿದು ಗಲಾಟೆ ಮಾಡಿಕೊಳ್ಳುವ ಗಂಡ ಹೆಂಡತಿಯರು, ಗಂಡ ಹೆಂಡತಿಯರ ನಡುವೆ ಹೊಂದಾಣಿಕೆ ಕೊರತೆ, ಗಂಡನನ್ನು ಸರಿಯಾಗಿ ನೋಡಿಕೊಳ್ಳದ ಹೆಂಡತಿ, ಹೆಂಡತಿಯನ್ನು ಸರಿಯಾಗಿ ನೋಡಿಕೊಳ್ಳದ ಗಂಡ, ಕುಟುಂಬದ ನಿರ್ವಹಣೆಯ ಖರ್ಚುವೆಚ್ಚಗಳನ್ನು ಸರಿಯಾಗಿ ನೋಡಿಕೊಳ್ಳದ ಗಂಡ, ಅತ್ತೆ ಮಾವಂದಿರು ಮತ್ತು ಸೊಸೆಯ ನಡುವೆ ಹೊಂದಾಣಿಕೆಯ ಕೊರತೆ, ಗಂಡನು ಪರಸ್ತ್ರೀಯರೊಂದಿಗೆ ಸಂಬಂಧ ಹೊಂದಿದ್ದಲ್ಲಿ, ಹೆಂಡತಿಯು ಪರಪುರುಷರೊಂದಿಗೆ ಸಂಬಂಧವನ್ನು ಹೊಂದಿದ್ದರೆ ಇತ್ಯಾದಿಗಳ ಕಾರಣಗಳಿಂದ ವಿವಾಹ ವಿಚ್ಛೇದನಗಳು ಆಗುತ್ತವೆ. ವಿಚ್ಛೇದನದ ನಂತರ ಮಕ್ಕಳು ತಂದೆಗೆ ಸೇರುತ್ತಾರೆ.

**೪.೫. ಆರಾಧನೆ, ಆಚರಣೆ ಮತ್ತು ನಂಬಿಕೆಗಳು**

ಪ್ರತಿಯೊಂದು ಬುಡಕಟ್ಟು ಜನಾಂಗವೂ ತನ್ನದೇ ಆದ ಆರಾಧ್ಯ ದೈವಗಳು, ಆಚರಣೆಗಳು, ನಂಬಿಕೆಗಳನ್ನು ಹೊಂದಿರುತ್ತದೆ. ಈ ಆರಾಧನೆಗಳು, ಆಚರಣೆಗಳು ಮತ್ತು ನಂಬಿಕೆಗಳು ಆ ಬುಡಕಟ್ಟು ಜನಾಂಗದ ಅಂತಃಸತ್ವವಾಗಿರುತ್ತದೆ. ಇಂತಹ ಆಚರಣೆಗಳಿಂದಲೇ ಬುಡಕಟ್ಟು ಜನಾಂಗವು ತನ್ನ ಮಹತ್ವವನ್ನು ಹೊಂದಿರುತ್ತದೆ. ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗವೂ ಕೂಡ ಇಂತಹ ಆಚರಣೆ ಮತ್ತು ನಂಬಿಕೆಗಳನ್ನು ಒಳಗೊಂಡಿದೆ. ಇವರ ಹುಟ್ಟು ಮತ್ತು ಸಾವುಗಳ ನಡುವೆ ಅನೇಕ ಆಚರಣೆಗಳು ಕಂಡುಬರುತ್ತವೆ.

**ಹುಟ್ಟು (ಜನನ):** ಹಕ್ಕಿಪಿಕ್ಕಿ ಜನಾಂಗದಲ್ಲಿ ಈ ಹಿಂದೆ ಹಕ್ಕಿಪಿಕ್ಕಿ ಸಮುದಾಯದ ಗರ್ಭಿಣಿ ಹೆಣ್ಣು ಮಕ್ಕಳು ತಮ್ಮ ಹೆರಿಗೆಯನ್ನು ತಾವೇ ಮಾಡಿಕೊಳ್ಳುತ್ತಿದ್ದರು. ತಮ್ಮ ಗುಡಿಸಲು ಇಂದ ಸ್ವಲ್ಪ ದೂರದಲ್ಲಿ ಚಿಕ್ಕದಾದ ಗುಡಿಸಲನ್ನು ಹಾಕಿರುತ್ತಾರೆ. ಅಲ್ಲಿಗೆ ಬೇರೆ ಯಾರೂ ಹೋಗುವುದಿಲ್ಲ. ಮಗು ಹುಟ್ಟಿದ ನಂತರ ಒಕ್ಕುಳ ಬಳ್ಳಿಯನ್ನು ಮರದ ತುಂಡು ಅಥವಾ ಬಳೆಯ ಗೋರಿಯಿಂದ ತಾಯಿಯೇ ಕೊಯ್ದು ಸೀರೆಯ ನೂಲಿನಿಂದ ಒಕ್ಕುಳವನ್ನು ಕಟ್ಟುತ್ತಾಳೆ. ಮಣ್ಣಾಗಿರುವ ಮಗುವನ್ನು ತಾಯಿಯೇ ತನ್ನ ಕಾಲಿನ ಮೇಲೆ ಹಾಕಿಕೊಂಡು ದನದ ಸಗಣಿಯಿಂದ ಆ ಮಗುವಿನ ಸ್ನಾನ ಮಾಡಿಸುತ್ತಾಳೆ. ಮಗುವಿನ ಸ್ನಾನದ ನಂತರ ತಾನೂ ಸ್ನಾನವನ್ನು ಮಾಡಿ ಬಟ್ಟೆಗಳನ್ನು ತೊಳೆದುಕೊಳ್ಳುತ್ತಾಳೆ. ಬೆಂಕಿಯ ಅಗ್ಗಿಷ್ಟಿಕೆಯನ್ನು ಹಾಕಿ ಬೆಂಕಿಯ ಹತ್ತಿರ ತಾಯಿ ಮತ್ತು ಮಗು ಕಾಯಿಸಿಕೊಂಡ ನಂತರ ಅವಳ ಗಂಡನು ಅರ್ಧಪಾವು ಅಕ್ಕಿ ಬೆಲ್ಲವನ್ನು ಹಾಕಿ ಗಂಜಿಯನ್ನು ಮಾಡಿ ಮುತ್ತುಗದ ಎಲೆಯ ದೊನ್ನೆಯನ್ನು ಮಾಡಿ ಬಾಣಂತಿಗೆ ಕೊಡುತ್ತಾರೆ. ಈ ಸಂದರ್ಭದಲ್ಲಿ ತಾಯಿ ಮತ್ತು ಮಗುವನ್ನು ಯಾರೂ ಮುಟ್ಟುವುದಿಲ್ಲ. ಬೇರೆಯವರು ಸಹಾಯ ಮಾಡುತ್ತಾರೆ.

ಮಳೆ, ಗುಡುಗು, ಸಿಡಿಲು, ಯಾವುದೇ ಇದ್ದರೂ ಪ್ರತ್ಯೇಕ ಗುಡ್ಡಲಿನಲ್ಲೇ ಇರಬೇಕಾಗುತ್ತದೆ. ಐದು ದಿನಗಳ ನಂತರ ಮಗುವನ್ನು ಜೋಳಿಗೆಯಲ್ಲಿ ಕಟ್ಟಿಕೊಂಡು ಊರನ್ನೆಲ್ಲಾ ತಿರುಗಿ ಭಿಕ್ಷೆಯನ್ನು ಬೇಡಿ ತಂದ ಆಹಾರವನ್ನು ತಾಯಿಯು ತಿನ್ನಬೇಕು. ತಾಯಿ ಮತ್ತು ಮಗುವನ್ನು ಮೈಲಿಗೆಯೆಂದೇ ಹಕ್ಕಿಪಿಕ್ಕಿಯರು ನೋಡುವುದರಿಂದ ಬಾಣಂತಿಯು ಭಿಕ್ಷೆಯಿಂದ ತಂದ ಆಹಾರವನ್ನು ಮೈಲಿಗೆಯೆಂದು ಬೇರೆಯವರು ತಿನ್ನುವುದಿಲ್ಲ. ಸುಮಾರು ಮೂರು ತಿಂಗಳುಗಳ ಕಾಲ ಭಿಕ್ಷೆಯನ್ನು ಬೇಡಿ ಆಹಾರವನ್ನು ತಿನ್ನಬೇಕಾಗುತ್ತದೆ. ಮಗು ಹುಟ್ಟಿದ ಐದು ದಿನಕ್ಕೆ ಮಗುವಿನ ತಲೆಕೂದಲನ್ನು ತೆಗೆಯುತ್ತಾರೆ. ತಾಯಿಯೇ ಈ ಕಾರ್ಯವನ್ನು ಮಾಡುತ್ತಾಳೆ. ಭಿಕ್ಷೆಬೇಡುವ ಸಮಯದಲ್ಲಿ ಬಾಣಂತಿ ತಾಯಂದಿರು ಸೂಜಿ, ದಾರ, ಪಿನ್ನ, ದಬ್ಬಳ, ಕಸ್ತೂರಿ, ಗೋರಂಜನ, ಕರಿಮಣಿ, ಹಾಲುಮಣಿ, ನವಲುತಪ್ಪ, ಉಡಿನತುಪ್ಪ, ರುದ್ರಾಕ್ಷಿ, ಸಣ್ಣರುದ್ರಾಕ್ಷಿ, ತುಳಸಿಮಾಲೆ, ಸಾಲಿಗ್ರಾಮ, ಹುಲಿ ಉಗುರು, ಕರಡಿ ಕೂದಲು ಮುಂತಾದವುಗಳನ್ನು ಮಾರಾಟ ಮಾಡುತ್ತಾರೆ. ಬಾಣಂತಿ ತಾಯಿಗೆ ಐದು ದಿನಗಳ ನಂತರದಲ್ಲಿ ಸ್ನಾನವನ್ನು ಮಾಡಿಸುತ್ತಾರೆ. ಮಗುವಿಗೆ ಮೊದಲ ದಿನದಂದೇ ತಾಯಿಯು ಸ್ನಾನ ಮಾಡಿಸುತ್ತಾಳೆ. ಐದನೆಯ ದಿನಕ್ಕೆ ಬಾಣಂತಿ ತಾಯಿಗೆ ಮಿಟ್ಟುದಾನ್ (ಬೆಲ್ಲವನ್ನು ಹಾಕಿ ಮಾಡಿರುವ ಸಿಹಿ ಅನ್ನ) ಕೊಡುತ್ತಾರೆ. ಮುಂದಿನ ಐದು ದಿನಗಳ ವರೆಗೆ ಒಂದೊಂದು ಹಿಡಿಯ ಸಿಹಿ ಅನ್ನವನ್ನು ಕೊಡುತ್ತಾರೆ. ಹೆರಿಗೆಯಾದ ತಾಯಿಯು ಮೂರು ತಿಂಗಳುಗಳ ಕಾಲ, ಹಾಸಿಗೆ, ಒಲೆ, ಪಾತ್ರೆ, ಮುಂತಾದ ಸಾಮಗ್ರಿಗಳನ್ನು ಮುಟ್ಟುವುದಕ್ಕೆ ನಿರ್ಬಂಧವಿದೆ. ಗಂಡ ಮತ್ತು ಹೆಂಡತಿಯರು ಒಟ್ಟಾಗಿ ಮಾತನಾಡುವುದಕ್ಕೂ ನಿರ್ಬಂಧವಿದೆ.

ಹೆಣ್ಣು ಗರ್ಭವತಿಯಾದ ನಂತರ ಒಬ್ಬಳೇ ಕಾಡಿಗೆ ಹೋಗುವುದಕ್ಕೆ ಬಿಡುವುದಿಲ್ಲ. ದೆವ್ವ ಹಿಡಿಯುತ್ತದೆ ಎನ್ನುವ ನಂಬಿಕೆ ಇದೆ. ಹಕ್ಕಿಪಿಕ್ಕಿ ಹೆಣ್ಣು ಮಗಳಿಗೆ ಮುಟ್ಟು ನಿಂತಾಗ ಹೆಣ್ಣು ಗರ್ಭವತಿಯಾಗಿದ್ದಾಳೆಂದು ತಿಳಿಯುತ್ತಾರೆ. ಗರ್ಭವತಿಯಾದ ಹೆಣ್ಣು ಹೆರಿಗೆಯಾಗುವವರೆಗೂ ಯಾವುದೇ ಸಂಪ್ರದಾಯಗಳನ್ನು ಆಚರಣೆ ಮಾಡುವುದಿಲ್ಲ. ಹೆರಿಗೆಯ ಸಂದರ್ಭದಲ್ಲಿ ಇವರು ಸಾಮಾನ್ಯವಾಗಿ ಆಸ್ಪತ್ರೆಗಳಿಗೆ ಹೋಗುತ್ತಿರಲಿಲ್ಲ. ಡಾಕ್ಟರ್‌ಗಳು, ನರ್ಸ್‌ಗಳು ತಮ್ಮ ಗುಪ್ತಾಂಗವಾದ ಯೋನಿಯ ಒಳಗೆ ಕೈಹಾಕುತ್ತಾರೆಂದು ಹೆದರುತ್ತಿದ್ದರು. ಹಕ್ಕಿಪಿಕ್ಕಿಯರ ಹೆಂಗಸರೇ ಹೆರಿಗೆಯನ್ನು ಮಾಡಿಸುತ್ತಿದ್ದರು. ಮಗು ಹುಟ್ಟಿದ ನಂತರ ಹೆಂಗಸರು ಬಾಣಂತಿ, ಮಗುವನ್ನು ಮುಟ್ಟುತ್ತಿರಲಿಲ್ಲ. ಮೈಲಿಗೆಯಿಂದ ಅಶುದ್ಧರಾಗುತ್ತೇವೆ ಎನ್ನುವ ನಂಬಿಕೆಯನ್ನು ಹೊಂದಿರುತ್ತಿದ್ದರು. ಹೆರಿಗೆಯು ತಡವಾದರೆ ದೆವ್ವದ ಕಾಟವಿದೆಯೆಂದು ದೇವತೆಗಳ ಮೊರೆ ಹೋಗುತ್ತಿದ್ದರು. ಅನೈತಿಕ ಹಾದರತನದಿಂದ ಗರ್ಭಿಣಿಯಾದರೆ ಹೆರಿಗೆಯು ತಡವಾಗುತ್ತದೆ ಎಂದು ನಂಬುತ್ತಿದ್ದರು. ಹುಟ್ಟಿದ ಮಗುವಿಗೆ ತಾಯಿ ಹಾಲಿನ ಜೊತೆಗೆ ಬೆಲ್ಲವನ್ನು ಬೆರೆಸಿ ಕೊಡುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ತಾಯಿ ಮಗುವಿನ ಆರೋಗ್ಯದ ದೃಷ್ಟಿಯಿಂದ ಆಧುನಿಕ ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸುತ್ತಿರುವುದು ಕಂಡುಬರುತ್ತಿದೆ.

ಮಗು ಹುಟ್ಟಿದ ನಂತರ ಹದಿನೈದನೇ ದಿನಕ್ಕೆ 'ಖಂಡೋ ಸಮಾರಂಭ'ವನ್ನು ಮಾಡುವುದರ ಮೂಲಕ ಅವರ ದೇವತೆಯನ್ನು ಪೂಜಿಸಿ ಮಗುವಿಗೆ 'ಉಡದಾರ'ವನ್ನು ಕಟ್ಟಲಾಗುತ್ತದೆ. ಮರಣ

ಹೊಂದಿದ ಮಾತಾಪಿತೃಗಳಿಗೆ ಹಾಗೂ ತಮ್ಮ ಪೂರ್ವಜರಿಗೆ, ಮಗು ಹುಟ್ಟಿದ ವಿಷಯವನ್ನು ತಿಳಿಸಲಾಗುತ್ತದೆ. ಕೆಟ್ಟದೃಷ್ಟಿಗಳು ಬೀಳದಿರಲು, ಪಾರ್ಶ್ವವಾಯುವಿನಿಂದ ರಕ್ಷಣೆ ಪಡೆಯುವುದಕ್ಕಾಗಿ ಮತ್ತು ಛಟ್ಟಿದೇವತೆ (ಅಳಿಸುವ, ನಗಿಸುವ ದೇವತೆ)ಯ ರಕ್ಷಣೆ ಪಡೆಯುವುದಕ್ಕಾಗಿ ಉಡದಾರವನ್ನು ಕಟ್ಟುತ್ತಾರೆ. ಹಕ್ಕಿಪಿಕ್ಕಿ ಜನಾಂಗದಲ್ಲಿ ಗಂಡು ಮಗುವಿಗಿಂತ ಹೆಣ್ಣು ಮಗು ಹುಟ್ಟಿದರೆ ಹೆಚ್ಚು ಸಂಭ್ರಮ ಪಡುತ್ತಾರೆ. ಕಾರಣವೇನೆಂದರೆ ಇವರು 'ವರದಕ್ಷಿಣೆ' ಯನ್ನು ಪಡೆಯುವುದಿಲ್ಲ. 'ವಧುದಕ್ಷಿಣೆ' ಯು ಆಚರಣೆಯಲ್ಲಿದೆ. ದೀಪಾವಳಿ, ದಸರಾ ಮತ್ತು ಇತರೇ ಹಬ್ಬ ಹರಿದಿನಗಳಲ್ಲಿ ದೇವತೆಗಳಿಗೆ ಪ್ರಾಣಿಬಲಿಯನ್ನು ಕೊಡುವುದರ ಮೂಲಕ ದೇವತೆಗಳನ್ನು ಒಲಿಸಿಕೊಳ್ಳಬಹುದೆಂಬ ನಂಬಿಕೆಯಿದೆ.

**ನಾಮಕರಣ**

ಮಗು ಹುಟ್ಟಿದ ಐದನೇ ದಿನದಂದು ನಾಮಕರಣಶಾಸ್ತ್ರವನ್ನು ಮಾಡುತ್ತಾರೆ. ನಾಮಕರಣ ದಿನದಂದು ಮಗುವಿನ ತಲೆ ಕೂದಲನ್ನು ತೆಗೆಯಲಾಗುತ್ತದೆ. ಕೆಲವರು ತಾಯಿಯಿಂದ ಮಗುವಿನ ಕೂದಲನ್ನು ತೆಗೆಸಿದರೆ, ಇನ್ನೂ ಕೆಲವರು ಹಜಾಮರಿಂದ ತೆಗೆಸುತ್ತಾರೆ. ಮತ್ತೊಮ್ಮೆ ಮೂರು ತಿಂಗಳಲ್ಲಿ ಮಗುವಿನ ಕೂದಲನ್ನು ತೆಗೆಸುತ್ತಾರೆ. ತೊಟ್ಟಿಲು ಇಡುವ ಸಂದರ್ಭದಲ್ಲಿ ಮನೆಯನ್ನು ಹೆಂಡಿ(ಸಗಣಿ)ಯಿಂದ ಸಾರಿಸಿ, ಹಣತೆಯನ್ನು ಇಟ್ಟು ಅದರಲ್ಲಿ ಎಣ್ಣೆ ಅಥವಾ ತುಪ್ಪವನ್ನು ಹಾಕಿ ದೀಪವನ್ನು ಹಚ್ಚುತ್ತಾರೆ. ಹಿರಿಯರೆಲ್ಲಾ ಬಂದು ಮನೆದೇವರುಗಳ ಹೆಸರನ್ನು ಹೇಳುವುದರ ಮೂಲಕ ಪೂಜಿಸಿ ಮಗುವಿಗೆ ನಾಮಕರಣ ಮಾಡುತ್ತಾರೆ. ನಾಮಕರಣದ ಸಂದರ್ಭದಲ್ಲಿ ಮಗುವನ್ನೊಂದೆ ಮನೆಯೊಳಗೆ ತರುತ್ತಾರೆ. ತಾಯಿ ಬಾಣಂತಿಯನ್ನು ಮೂರು ತಿಂಗಳವರೆಗೆ ಗುಡಿಸಲಿನಲ್ಲಿ ಉಳಿಸುವ ಪದ್ಧತಿ ಇದೆ.

**ಸೂತಕ ನಿವಾರಣೆ**

ಹಕ್ಕಿಪಿಕ್ಕಿಯರ ಬಾಣಂತಿ ತಾಯಿಗೆ ಈ ಹಿಂದೆ ನವಣೆ ಅನ್ನ, ರೊಟ್ಟಿ, ಕೊಡುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ರವೆ, ಅನ್ನದ ಗಂಜಿ ಕೊಡಲಾಗುತ್ತಿದೆ. ಮೂರು ತಿಂಗಳ ನಂತರ ಬಾಣಂತಿ ತಾಯಿಯು ತಾನು ತೊಡುತ್ತಿದ್ದಂತಹ ಹಳೆಯ ಬಟ್ಟೆಗಳನ್ನು, ಆಭರಣಗಳನ್ನು ಎಸೆದು, ಸ್ನಾನ ಮಾಡಿ ಹೊಸ ಬಟ್ಟೆಗಳನ್ನು, ಆಭರಣಗಳನ್ನು ಧರಿಸುತ್ತಾಳೆ. ಹಿರಿಯರ ಪಾದಗಳಿಗೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆದು ಅಡುಗೆ ಮನೆಗೆ ಪ್ರವೇಶವನ್ನು ಮಾಡಿ ಎಲ್ಲಾ ಸದಸ್ಯರಿಗೂ ಸಿಹಿ ಅಡುಗೆಯನ್ನು ಮಾಡಿ ಹಾಕುತ್ತಾಳೆ. ಅಲ್ಲಿಗೆ ಬಾಣಂತಿ ತಾಯಿಯ ಸೂತಕ ನಿವಾರಣೆಯಾಗುತ್ತದೆ.

**ಜವಳ ಸಂಪ್ರದಾಯ**

ಹಕ್ಕಿಪಿಕ್ಕಿಯರಲ್ಲಿ ಮಗು ಹುಟ್ಟಿದ ಐದನೇ ದಿನದಂದು ಬಾಣಂತಿ ತಾಯಿಯು ಮಗುವನ್ನು ತನ್ನ ಕಾಲ ಮೇಲೆ ಹಾಕಿಕೊಂಡು ಬ್ಲೇಡ್‌ನಿಂದ ಮಗುವಿನ ಕೂದಲನ್ನು ಕತ್ತರಿಸುತ್ತಾಳೆ. ಈ ಕಾರ್ಯವು, ತ್ರಾಂಗಡೂ (ಕುಲದೇವತೆ) ಮತ್ತು ಸಮುದಾಯದ ಹಿರಿಯರ ಮುಂದೆ ನಡೆಯುತ್ತದೆ. ಛಟ್ಟಿಪೂಜೆಯಲ್ಲಿ ಇದನ್ನು ಲಟ್ಟಿತೊಳೆಯುವುದು ಎಂದು ಕರೆಯುತ್ತಾರೆ.

**ಋತುಮತಿ(ಪಹಿಲೋಟ)**

ಹಕ್ಕಿಪಿಕ್ಕಿ ಜನಾಂಗದಲ್ಲಿ ಋತುಮತಿ ಶಾಸ್ತ್ರವು ಮುಖ್ಯವಾದದ್ದಾಗಿದೆ. ಒಂದು ಹೆಣ್ಣು ಮಕ್ಕಳನ್ನು ಹೆರುವುದಕ್ಕೆ, ಪ್ರೌಢಾವಸ್ಥೆಗೆ ಬಂದಿರುವ ಹಂತವನ್ನು ಸೂಚಿಸುತ್ತದೆ. ಋತುಮತಿಯಾದವಳು ಐದು ಅಥವಾ ಏಳು ದಿನಗಳವರೆಗೆ ಮನೆಯಲ್ಲಿ ಏನನ್ನೂ ಮುಟ್ಟುವುದಕ್ಕೆ ಅವಕಾಶ ನೀಡುವುದಿಲ್ಲ. ಮನೆಯವರೇ ಋತುಮತಿಯಾದವಳಿಗೆ ಊಟವನ್ನು ಎತ್ತಿ ಬಡಿಸುತ್ತಾರೆ. ಅವಳಿಗೆ ಪ್ರತ್ಯೇಕವಾದ ಊಟದ ತಟ್ಟೆ, ನೀರು ಹಿಡಿಯುವ ಲೋಟವಿರುತ್ತದೆ. ಪ್ರತಿದಿನವೂ ಸ್ನಾನ ಮಾಡಿಸುತ್ತಾರೆ. ಐದನೇ ಅಥವಾ ಏಳನೆಯ ದಿನದಂದು ಸ್ನಾನ ಮಾಡಿಸಿ, ಹೂವನ್ನು ಮುಡಿಸಿ, ಮುಖಕ್ಕೆ ಕೈಕಾಲುಗಳಿಗೆ ಅರಿಶಿಣ ಮತ್ತು ಕುಂಕುಮವನ್ನು ಹಚ್ಚುತ್ತಾರೆ. ಸಂಬಂಧಿಕರನ್ನು ಕರೆದು ಸಿಹಿ ಊಟವನ್ನು ಮಾಡಿ ಹಾಕುತ್ತಾರೆ. ಮದುವೆಯ ಸಂದರ್ಭದಲ್ಲಿ ಋತುಮತಿಯಾದರೆ ಮದುವೆಯನ್ನು ನಿಲ್ಲಿಸುತ್ತಾರೆ. ಸೂತಕವು ಮುಗಿದ ನಂತರ ಮದುವೆ ಮಾಡುತ್ತಾರೆ. ಮದುವೆಯ ನಂತರ ಋತುಮತಿಯಾದರೆ ಅಂತಹ ಸಂದರ್ಭದಲ್ಲಿ ಯಾವುದೇ ಸಮಾರಂಭವನ್ನು ಮಾಡುವುದಿಲ್ಲ. ಹೆಣ್ಣು ಋತುಮತಿಯಾಗುವುದು ಹೆಣ್ಣಿನ ಜೀವನದಲ್ಲಿ ಬಹಳ ಮುಖ್ಯವಾದ ಹಂತವಾಗಿದೆ. ಋತುಮತಿಯಾದ ಹಕ್ಕಿಪಿಕ್ಕಿ ಹೆಣ್ಣನ್ನು ತಮ್ಮ ತಾಂಡ (ಹಟ್ಟಿ)ದಿಂದ ದೂರದಲ್ಲಿ ಒಂದು ಪ್ರತ್ಯೇಕವಾದ ಗುಡಿಸಲನ್ನು ಹಾಕಿ ಋತುಮತಿ ಸೂತಕ ಕಳೆಯುವವರೆಗೂ ಆ ಗುಡಿಸಲಿನಲ್ಲಿ ಇರಿಸುತ್ತಾರೆ. ಆದರೆ ಇತ್ತೀಚೆಗೆ ಪ್ರತ್ಯೇಕ ಗುಡಿಸಲಿಗೆ ಬದಲಾಗಿ ಮನೆಯಲ್ಲೇ ಒಂದು ಪ್ರತ್ಯೇಕ ಕೋಣೆಯಲ್ಲಿ ಇರಿಸುತ್ತಿದ್ದಾರೆ. ಅಲ್ಲಿ ಒಂದು ಪರದೇ (ಚಾದರ್)ಯಿಂದ ಮರೆಮಾಡಿ ಕೂರಿಸುತ್ತಾರೆ.

ಋತುಮತಿಯಾದ ಹೆಣ್ಣನ್ನು ಕೂರಿಸಿರುವ ಸ್ಥಳಕ್ಕೆ ಯಾವುದೇ ದುಷ್ಟಶಕ್ತಿಗಳು ಪ್ರವೇಶಮಾಡದಂತೆ, ಅಲ್ಲಿ, ಹಳೆಯ ಚಪ್ಪಲಿ, ಕಸಗುಡಿಸುವ ಪೊರಕೆ, ಕುಡುಗೋಲುಗಳನ್ನು ಇಡುವ ಪದ್ಧತಿಯು ಇದೆ. ಹೆಣ್ಣು ಋತುಮತಿಯಾದ ವಿಷಯವನ್ನು ತಿಳಿದ ನಂತರ ಮನೆಯ ಯಜಮಾನಿ, ಸೋದರ ಅತ್ತೆ ಅಥವಾ ಸೋದರ ಮಾವನು ಮೊದಲ ಮುಟ್ಟು ನೀರನ್ನು ಹಾಕಿಸುತ್ತಾರೆ. ಋತುಮತಿಯಾದ ಮನೆಯನ್ನು ಸೂತಕದ ಮನೆಯೆಂದು ಪರಿಗಣಿಸಲಾಗುತ್ತದೆ. ಸೂತಕವು ಕಳೆಯುವವರೆಗೂ ಈ ಮನೆಯಲ್ಲಿ ಯಾವುದೇ ಧಾರ್ಮಿಕ ಪೂಜಾ ವಿಧಾನಗಳು ನೆರವೇರುವುದಿಲ್ಲ. ಹೆಣ್ಣು ಋತುಮತಿಯಾದ ಐದನೇ ದಿನಕ್ಕೆ ಹೆಣ್ಣು ಕುಳಿತ ಸ್ಥಳವನ್ನು ಆ ಹೆಣ್ಣಿನಿಂದಲೇ ಸಗಣಿಯಿಂದ ಬಳಿಸಿ, ಸ್ನಾನ ಮಾಡಿಸಿ ಹೆಣ್ಣನ್ನು ದೇವರ ಮನೆ ಕರೆದುಕೊಂಡು ಹೋಗಿ ದೇವತೆಗೆ ಪೂಜೆಯನ್ನು ಮಾಡಿಸುತ್ತಾರೆ. ನಂತರ ಹೆಣ್ಣಿಗೆ ಧಾನ್ಯ, ಚಿಗಳಿ ಮತ್ತು ಫಲ ತಾಂಬೂಲಗಳನ್ನು ಐದು ಜನ ಮುತ್ತೈದೆಯರು ಉಡಿಯನ್ನು ತುಂಬುತ್ತಾರೆ. ಐದನೇ ದಿನದಿಂದ ಹನ್ನೊಂದು ದಿನಗಳವರೆಗೆ ಅರಿಶಿಣದ ನೀರನ್ನು ಹಾಕುತ್ತಾರೆ. ಈ ರೀತಿಯಾಗಿ ನೀರನ್ನು ಹಾಕುವ ಸಂದರ್ಭದಲ್ಲಿ ಬಂಧು-ಬಳಗವೆಲ್ಲಾ ಸೇರಿ ಸಡಗರ ಸಂಭ್ರಮವನ್ನು ಆಚರಿಸುತ್ತಾರೆ ಬಂದಿರುವ ಎಲ್ಲಾ ಸಂಬಂಧಿಕರಿಗೆ ಸಿಹಿ ಊಟವನ್ನು ಹಾಕಲಾಗುತ್ತದೆ.

**ಸೀಮಂತ ಕಾರ್ಯ**

ಹಕ್ಕಿಪಿಕ್ಕಿಯರಲ್ಲಿ ಸೀಮಂತ ಕಾರ್ಯವನ್ನು ಇತ್ತೀಚಿನ ದಿನಗಳಲ್ಲಿ ಮಾಡುತ್ತಿದ್ದಾರೆ. ಈ ಹಿಂದೆ ಸೀಮಂತ ಕಾರ್ಯವನ್ನು ಮಾಡುತ್ತಿರಲಿಲ್ಲ. ಅನ್ಯ ಸಂಸ್ಕೃತಿಗಳ ಪ್ರಭಾವಗಳಿಂದಾಗಿ ಗರ್ಭಿಣಿ ಹೆಣ್ಣನ್ನು ಐದನೆಯ ತಿಂಗಳಲ್ಲಿ ತವರು ಮನೆಗೆ ಕರೆಯಿಸಿಕೊಂಡು ಸೀರೆ, ಕುಪ್ಪಸ, ವಸ್ತ್ರಾಧಿಗಳನ್ನು ಕೊಟ್ಟು ಸಿಹಿಊಟವನ್ನು ತಯಾರಿಸಿ ಸಂಬಂಧಿಕರನ್ನೆಲ್ಲಾ ಕರೆದು ಬಡಿಸುವುದು ಕಂಡು ಬರುತ್ತಿದೆ.

**ಮರಣ ಸಂಸ್ಕಾರ**

ಬುಡಕಟ್ಟು ಸಮುದಾಯಗಳ ಜನರು ಸಾವಿಗೆ ಹೆಚ್ಚಾಗಿ ಭಯಪಡುತ್ತಾರೆ. ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗವೂ ಕೂಡ ಸಾವಿಗೆ ಹೆಚ್ಚು ಭಯಪಡುತ್ತಾರೆ. ತಮ್ಮ ತಾಂಡ(ಹಟ್ಟಿ)ಗಳಲ್ಲಿ ಯಾರಾದರೂ ಸತ್ತರೆ ಸತ್ತವನ ಸಂಬಂಧಿಕರನ್ನು ಬಿಟ್ಟು ಉಳಿದೆಲ್ಲರೂ ತಮ್ಮ ತಮ್ಮ ಗುಡಲುಗಳನ್ನು ಖಾಲಿಮಾಡಿಕೊಂಡು ಬೇರೆ ಸ್ಥಳಗಳಿಗೆ ವಲಸೆ ಹೋಗಿಬಿಡುತ್ತಾರೆ. ಸಾವು ಸಂಭವಿಸಿರುವುದಕ್ಕೆ ಅವರ ದಾದಾಜಿ(ದೇವರು) ಅಥವಾ ದೈವದ ಶಕ್ತಿ ಕಾರಣವೆಂದು ನಂಬಿರುತ್ತಾರೆ. ಸತ್ತ ಹೆಣಕ್ಕೆ ಸ್ನಾನವನ್ನು ಮಾಡಿಸಿ ಹೊಸಬಟ್ಟೆಯನ್ನು ಹೊದಿಸಿ ಚಟ್ಟವನ್ನು ಕಟ್ಟಿ ಅದರ ಮೂಲಕ ಹೆಣವನ್ನು ಹೊತ್ತುಕೊಂಡು ಹೂಳುವ ಜಾಗಕ್ಕೆ ಹೋಗುತ್ತಾರೆ. ಹೆಣವನ್ನು ಹೊರುವವರು ಸತ್ತ ವ್ಯಕ್ತಿಯ ಬೆಡಗಿನವರೇ ಆಗಿರುತ್ತಾರೆ. ಸ್ವಲ್ಪ ದೂರ ಹೊತ್ತುಕೊಂಡು ಹೋದ ಮೇಲೆ ಬೇರೆ ಬೆಡಗಿನವರು ಹೊತ್ತುಕೊಂಡು ಹೋಗಬಹುದು. ಚಟ್ಟವನ್ನು ಕಟ್ಟುವುದಕ್ಕಾಗಿ ಈ ಹಿಂದೆ ಕಳ್ಳಿಯಕಟ್ಟಿಗೆ ಮತ್ತು ಸೊಪ್ಪುಗಳನ್ನು ಬಳಕೆ ಮಾಡುತ್ತಿದ್ದರು. ಇತ್ತೀಚಿಗೆ ಬಿದಿರುಕಟ್ಟಿಗೆಗಳನ್ನು ಉಪಯೋಗಿಸುವುದು ಕಂಡುಬರುತ್ತಿದೆ.

**ಖಾಂದೋದೇರೊ**

ಹಕ್ಕಿಪಿಕ್ಕಿ ಜನಾಂಗದಲ್ಲಿ ಸತ್ತವ್ಯಕ್ತಿಯ ಹಿರಿಯ ಮಗನು ಸತ್ತವ್ಯಕ್ತಿಯ ಶವಸಂಸ್ಕಾರದ ಎಲ್ಲಾ ಕಾರ್ಯಗಳ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ಸತ್ತವ್ಯಕ್ತಿಯು ತಂದೆಯಾಗಿದ್ದರೆ ಹಿರಿಯ ಮಗನು ಮೊದಲು ಹೆಗಲು ಕೊಟ್ಟು ಹೆಣವನ್ನು ಚಟ್ಟದ ಮೂಲಕ ಹೊತ್ತುಕೊಂಡು ಹೋಗಬೇಕಾಗುತ್ತದೆ. ಈ ಕಾರ್ಯಕ್ಕೆ 'ಖಾಂದೋದೇರೋ' ಅಥವಾ 'ಖಾಂದ್ಯು' ಎನ್ನಲಾಗುತ್ತದೆ. ಹಕ್ಕಿಪಿಕ್ಕಿಯಲ್ಲಿ ಸತ್ತ ವ್ಯಕ್ತಿಯ ಹೆಣವನ್ನು ಸುಡುವುದಿಲ್ಲ. ಬದಲಾಗಿ ಹೂಳುತ್ತಾರೆ. ಕಾರಣವೇನೆಂದರೆ ಸತ್ತ ವ್ಯಕ್ತಿಯನ್ನು ಸುಟ್ಟರೆ ದೇವದೇವತೆಗಳು ಸಿಟ್ಟನ್ನು ಮಾಡಿಕೊಳ್ಳುತ್ತಾರೆ ಎನ್ನುವ ಭಯ. ಸತ್ತ ವ್ಯಕ್ತಿಯನ್ನು ಮಣ್ಣು ಮಾಡಿ ಬರುವ ಸಂದರ್ಭದಲ್ಲಿ ಮೂರುಗಿಡಗಳನ್ನು ಅಥವಾ ಬಳ್ಳಿಯನ್ನು ಸುತ್ತುವರಿದು ಬರುತ್ತಾರೆ. ಕಾರಣವೇನೆಂದರೆ, 'ಸತ್ತವ್ಯಕ್ತಿ ದೆವ್ವವಾದರೆ, ಒಂದುವೇಳೆ ಮನೆಗೆ ಬಂದರೆ, ಮನೆಗೆ ಬರುವುದಕ್ಕಿಂತ ಮುಂಚೆ, ಈಗಾಗಲೇ ಸುತ್ತಿಬಂದಿರುವ ಮೂರು ಮರ ಅಥವಾ ಬಳ್ಳಿಯ ಎಲೆ, ರೊಂಬೆ, ಕೊಂಬೆ, ಬೇರುಗಳನ್ನು ಎಣಿಸಿದ ಮೇಲೆ ಬರಬೇಕಾಗುತ್ತದೆ. ಅವುಗಳನ್ನು ಎಣಿಸುವುದರೊಳಗಾಗಿ, ಬೆಳಕು ಮೂಡುವುದರಿಂದಾಗಿ ದೆವ್ವವು ಹಟ್ಟಿಯ ಮನೆಗೆ ಬರುವುದಿಲ್ಲ' ಎಂದು ನಂಬುತ್ತಾರೆ. ಮಣ್ಣು

ಮಾಡಿ ಬಂದ ಮೇಲೆ ಶವಸಂಸ್ಕಾರಕ್ಕಾಗಿ ಬಂದಿದ್ದವರಿಗೆಲ್ಲಾ ಹಿರಿಯ ಮಗನು ಮದ್ಯಪಾನವನ್ನು ಮಾಡಿಸಬೇಕು. ಈ ಕಾರ್ಯಕ್ಕೆ ಹಕ್ಕಿಪಿಕ್ಕಿಯರು 'ಹಾತ್‌ದೊವನು' (ಕೈ ತೊಳೆಸುವುದು) ಎನ್ನುತ್ತಾರೆ. ಸತ್ತವ್ಯಕ್ತಿಯ ಮಗ ಅಥವಾ ಸತ್ತವ್ಯಕ್ತಿಯ ಹೆಂಡತಿಯು ನಾಲ್ಕುದಿನಗಳ ಕಾಲ ಊಟ ಮಾಡದೆ ಹಾಲು, ನೀರು, ಮದ್ಯವನ್ನು ಕುಡಿಯುತ್ತಾರೆ. ಪ್ರತಿದಿನ ಅವರು ಸತ್ತವ್ಯಕ್ತಿಯ ಸಮಾಧಿಯನ್ನು ಹನ್ನೆರಡು ದಿನಗಳ ಕಾಲ ನೋಡಬೇಕು. ಸತ್ತ ವ್ಯಕ್ತಿಯು ತನ್ನ ಜೀವನದಲ್ಲಿ ಏನೇನನ್ನು ಇಷ್ಟಪಡುತ್ತಿದ್ದನೋ ಅವುಗಳನ್ನೆಲ್ಲಾ ಅವನ ಸಮಾಧಿಯ ಮೇಲಿಟ್ಟು ಪೂಜಿಸಬೇಕು. ಇಲ್ಲದೇ ಇದ್ದರೆ ದೆವ್ವವಾಗಿ ಬಂದು ಕಾಡುತ್ತಾನೆ ಎಂದು ನಂಬುತ್ತಾರೆ. ಸತ್ತ ವ್ಯಕ್ತಿಯ ಆತ್ಮದ ಶಾಂತಿಗಾಗಿ ಕುರಿ, ಮೇಕೆಯನ್ನು ಬಲಿಕೊಟ್ಟು ಮಾಂಸದ ಊಟವನ್ನು ಸಂಬಂಧಿಕರಿಗೆ ಹಾಕುವುದರಿಂದ ಆತ್ಮಕ್ಕೆ ಶಾಂತಿ ದೊರಕುತ್ತದೆ ಎನ್ನುವ ನಂಬಿಕೆ ಇದೆ. ಅತಿ ಚಿಕ್ಕವಯಸ್ಸಿಗೆ ಸತ್ತ ವ್ಯಕ್ತಿಗಳ ಆಸೆಗಳು ಪೂರೈಕೆಯಾಗದಿದ್ದರೆ ಅಂತವರು ಸೈತಾನಗಳಾಗುತ್ತಾರೆ ಎನ್ನುವ ಭಯ ಇವರಿಗಿದೆ. ಅದಕ್ಕಾಗಿ ಆತ್ಮದ ಶಾಂತಿ ಮಾಡುವುದಕ್ಕಾಗಿ ಕುರಿ, ಮೇಕೆಗಳನ್ನು ಬಲಿಕೊಟ್ಟು ಅವರ ಆತ್ಮಕ್ಕೆ ಶಾಂತಿಯನ್ನು ಮಾಡಿಸುತ್ತಾರೆ.

ಸತ್ತವ್ಯಕ್ತಿಯ ಹೆಣವನ್ನು ಹೂಳುವುದಕ್ಕಿಂತ ಮುಂಚೆ ಸತ್ತವ್ಯಕ್ತಿಯನ್ನು ಹೂಳುವ ಗುಂಡಿಯನ್ನು ತೆಗೆಯಲು ಮೂರು ಅಥವಾ ನಾಲ್ಕು ಜನ ಮೊದಲೇ ಹೋಗಿ ಗುಂಡಿಯನ್ನು ತೆಗೆದು ಅಲ್ಲೇ ಇರುತ್ತಾರೆ. ಮಣ್ಣು ಮಾಡಿದ ಸಮಾಧಿಯ ಮೇಲೆ ತೆಂಗಿನಕಾಯಿ, ಮಂಡಕ್ಕಿ, ತರಕಾರಿ, ವಡೆ, ಸತ್ತವ್ಯಕ್ತಿ ಪುರುಷನಾಗಿದ್ದರೆ, ಬೀಡಿ, ಮಿಠಾಯಿ, ಜಿಲೇಬಿ, ಮಾವಿನಕಾಯಿ, ಪೇರಲಹಣ್ಣು ಮುಂತಾದವುಗಳನ್ನು ಇಡುತ್ತಾರೆ. ಮದ್ಯವನ್ನೂ ಇಡುತ್ತಾರೆ. ತೆಂಗಿನಕಾಯಿಯನ್ನು ಹೊಡೆದು ಪೂಜೆ ಮಾಡುತ್ತಾರೆ. ಹಳೆಯ ಕಾಲದ ಪದ್ಧತಿಯಂತೆ 'ರೊಟೊ ಮಾರ್ಚೇನಿ ಚಟ್ನಿ(ರೊಟ್ಟಿ, ರಾಗಿ ಜೋಳ, ಮೆಣಸಿನ ಕಾಯಿ ಚಟ್ನಿ)ಯನ್ನು ಮೂರನೆಯ ದಿನಕ್ಕೆ ಇಡುತ್ತಾರೆ. ಅಲ್ಲದೆ, ತರಕಾರಿ, ಒಂಬತ್ತು ಮಡಕೆ ಅಕ್ಕಿ, ಬೇಳೆ, ಎಣ್ಣೆ ಇತ್ಯಾದಿ ಸಾಮಗ್ರಿಗಳನ್ನು ಇಟ್ಟು ರಾತ್ರಿಯಲ್ಲಿ ಕಾವಲು ಕಾಯುತ್ತಾರೆ. ಬೆಳಗ್ಗೆ ನಾಲ್ಕು ಅಥವಾ ಐದು ಗಂಟೆಯ ಸಮಯಕ್ಕೆ ಖಾಂದ್ಯ ಆದ ವ್ಯಕ್ತಿ ನಾಲ್ಕು ಮಡಿಕೆಗಳನ್ನು ಅವನು ತೆಗೆದುಕೊಂಡು ಮೈತೊಳೆಯುವುದಕ್ಕೆ ಹೋಗಬೇಕು. ಒಂದೊಂದು ಕೈಯಲ್ಲಿ ಎರಡು ಮಡಕೆಗಳನ್ನು ಹಿಡಿದುಕೊಂಡಿರುತ್ತಾನೆ. ಇವುಗಳು ಒಂದೊಂದು ಹಿಡಿಯಷ್ಟು ಗಾತ್ರದಷ್ಟು ಇರುತ್ತವೆ. ಮಡಕೆಗಳಿಂದ ಏಳು ಸಲ ಭುಜದಿಂದ ಕೆಳಗೆ ಇಳಿಸಿಕೊಳ್ಳಬೇಕು. ಇದನ್ನು ಹೆಣ ಎತ್ತಿದ ಭಾರ ಇಳಿಯುವುದಕ್ಕೆ ಮಾಡುವ ಆಚರಣೆಯಾಗಿದೆ. ಈ ಆಚರಣೆಯ ನಂತರ ಅವನು ಮೈತೊಳೆದುಕೊಳ್ಳುತ್ತಾನೆ. ನಾಲ್ಕು ಕುಡಿಕೆಗಳನ್ನು ಆಚರಣೆ ಮಾಡುವ ಜಾಗದ ಸ್ವಲ್ಪ ದೂರದಲ್ಲಿ ಉತ್ತರಾಭಿಮುಖವಾಗಿ ಸ್ವಲ್ಪ ಬಗ್ಗಿಸಿ ಇಡುತ್ತಾರೆ. ಇದನ್ನು 'ಘೋರವಾಡೆ' ಎನ್ನುತ್ತಾರೆ. ಇದನ್ನು 'ಖಾಂದ್ಯು'ವೇ ತೆಗೆದುಕೊಳ್ಳುತ್ತಾನೆ ಉಳಿಯುವ ನಾಲ್ಕು ಕುಡಿಕೆಗಳನ್ನು ನೀರು ತುಂಬಿ ಇಟ್ಟು ಅವುಗಳ ಮೇಲೆ 'ಥಾಳ್' (ದೊಡ್ಡ ಹರಿವಾಣ) ಇಟ್ಟು, ಕುಲದವರೆಲ್ಲಾ ಒಂದೊಂದು ಹಿಡಿಯ ಅನ್ನವನ್ನು ಇಟ್ಟು, ತಂದಂತಹ ತಿಂಡಿ, ತರಕಾರಿ ಹಾಗೂ ಸಾರನ್ನು ಒಂದೊಂದು ಚಮಚ

ಅನ್ನದ ಮೇಲೆ ಹಾಕಿ, ಕುಡಿಕೆಗಳಿಗೆ ಕಟ್ಟಿರುವ ದಾರವನ್ನು ನಾಲ್ಕು ತುಂಡುಮಾಡಿ ನಾಲ್ಕು ಕುಡಿಕೆಗಳಿಗೆ ಹಾಕುತ್ತಾರೆ. ಈ ನಾಲ್ಕು ಕುಡಿಕೆಗಳನ್ನು ಕುಲಬಾಂಧವರು ಎತ್ತಿಕೊಳ್ಳುತ್ತಾರೆ. ಘೋರವಾಡೆಯನ್ನು ಖಾಂದ್ಯು ಎತ್ತಿಕೊಳ್ಳುತ್ತಾನೆ. ಇದರ ಮೇಲೆ ಒಂದು ರೊಟ್ಟಿಯನ್ನು ಇಟ್ಟಿರುತ್ತಾರೆ. ಥಾಳ್‌ನ ಮೇಲೆ ಐದು ರೊಟ್ಟಿಗಳನ್ನು ಇಟ್ಟಿರುತ್ತಾರೆ. ಇವೆರಡರ ಪಕ್ಕದಲ್ಲಿ ಒಲೆಯ ಕೆಂಡವನ್ನು ಇಡಲಾಗಿರುತ್ತದೆ. ಸ್ವಲ್ಪ ಸ್ವಲ್ಪವೇ ಅನ್ನವನ್ನು ಕೊಡಕ್ಕೆ ಹಾಕಲಾಗುತ್ತಿರುತ್ತದೆ. ಕುಲಬಾಂಧವರು 'ಥಾಳ್'ಗೆ ಅನ್ನವನ್ನು ಬಲಕೈಯಲ್ಲಿ ಹಾಕುವ ಸಂದರ್ಭದಲ್ಲಿ ಎಡಕೈಯಲ್ಲಿ 'ಘೋರವಾಡೆ'ಗೆ ಹಾಕುತ್ತಾರೆ. ಘೋರವಾಡೆಯನ್ನು ಖಾಂದ್ಯು ಅದೇ ಸ್ಥಳದಲ್ಲಿ ಕಲ್ಲಿನ ಮೇಲೆ ಜೋರಾಗಿ ತುಂಡಾಗುವಂತೆ ಎತ್ತಿ ಹಾಕುತ್ತಾನೆ. ಖಾಂದ್ಯು ಇಟ್ಟ ನಾಲ್ಕು ಕುಡಿಕೆಗಳ ಜೊತೆಗೆ ಥಾಳ್ ಕೆಳಗಿದ್ದಂತಹ ಕುಡಿಕೆಗಳನ್ನು ಇಡಲಾಗುತ್ತದೆ. ಖಾಂದ್ಯು ಘೋರವಾಡೆಯ ಚೂರನ್ನು ಮತ್ತು ಉಳಿದ ಎಂಟು ಕುಡಿಕೆಗಳನ್ನು ಅದೇ ಸ್ಥಳದಲ್ಲಿ ಒಡೆದು ಚೂರು ಮಾಡಿ ತೆಗೆದುಕೊಂಡು ಹೋಗಿ ನೀರಿನಲ್ಲಿ ಹಾಕುತ್ತಾರೆ. ನಂತರ ಬಂದು ಅದನ್ನೆಲ್ಲಾ ಮನೆಗೆ ತಂದು ಊಟ ಮಾಡುತ್ತಾರೆ. ಇವನು ಕೂಳು ಹಾಳುವ ಬಳಿ ಊಟ ಮಾಡುವಂತಿರುವುದಿಲ್ಲ. ನಂತರ ಮತ್ತೊಂದು ಕೂಳು ಇನ್ನೊಂದು ಕೂಳು, ಎಂದು ಒಟ್ಟು ಮೂರು ಕೂಳನ್ನು ಹಾಕಲಾಗುತ್ತದೆ. ಮೊದಲ ಕೂಳನ್ನು ಮನೆಯ ಹೊರಗೆ ಹಾಕಲಾಗುತ್ತದೆ. ಎರಡು ಮತ್ತು ಮೂರನೇ ಕೂಳನ್ನು ಮನೆಯ ಹತ್ತಿರವೇ ಹಾಕಲಾಗುತ್ತದೆ. ಮೂರು 'ಕೂಳು'ಗಳನ್ನು ಹಾಕಿದರೆ ಸತ್ತ ವ್ಯಕ್ತಿಯು ಗುರುವಿನ ಸ್ಥಾನ ಮುಟ್ಟುತ್ತಾನೆ ಎನ್ನುವ ನಂಬಿಕೆಯು ಹಕ್ಕಿಪಿಕ್ಕಿ ಸಮುದಾಯದಲ್ಲಿದೆ.

**ಧಾರ್ಮಿಕ ಆಚರಣೆಗಳು**

**ದೇವರು:** ಯಾವುದೇ ಬುಡಕಟ್ಟು ಜನಾಂಗವು ದೇವರು, ದೈವದ ಮೇಲೆ ಅಪಾರ ನಂಬಿಕೆಯನ್ನು ಹೊಂದಿರುತ್ತದೆ. ಸೃಷ್ಟಿಯಲ್ಲಿನ ಪ್ರತಿಯೊಂದು ಘಟನೆಗಳಿಗೆ ದೈವಶಕ್ತಿಯೇ ಕಾರಣವೆಂದು ಪ್ರಬಲವಾಗಿ ನಂಬಿರುತ್ತಾರೆ. ಹಕ್ಕಿಪಿಕ್ಕಿ ಜನಾಂಗವು ಕೂಡ ದೈವದ ಬಗ್ಗೆ ಅಪಾರ ನಂಬಿಕೆಯನ್ನು ಹೊಂದಿದೆ. ತಮ್ಮ ಅಳಿವು ಮತ್ತು ಉಳಿವು ಇವುಗಳೆಲ್ಲವೂ ದೈವಶಕ್ತಿಯಿಂದ ಎಂದು ನಂಬಿರುತ್ತಾರೆ. ಹಕ್ಕಿಪಿಕ್ಕಿ ಜನಾಂಗವು ಸಾಮೂಹಿಕವಾಗಿ ಖುದಾ(ಶಿವ), ಪರ್ವಾಣದೇವಿ(ಗಂಗಾದೇವಿ), ವಿಕೋತಿದೇವಿ (ತುಳಜಾದೇವಿ), ಶೀಳ್‌ದೇವಿ(ಸುಂಕ್ಲಮ್ಮ), ಕಂಕಾಳಿ, ಬೊಮ್ಮಾಯಿ, ಬಿನಸಾರ್, ಚಾಂದಬಿ, ಕಾಳಿಕಾ ದೇವರುಗಳನ್ನು ಪೂಜಿಸುತ್ತಾರೆ. ಅಲ್ಲದೇ, ಹಕ್ಕಿಪಿಕ್ಕಿಯರಿಗೆ ತಮ್ಮದೇ ಆದ ಕುಲದೇವರುಗಳು ಇವೆ. ದೇವರನ್ನು ದೇವಸ್ಥಾನದಲ್ಲಿ ಇಟ್ಟಿರುತ್ತಾರೆ. ಈ ದೇವಸ್ಥಾನವು ಪೂರ್ವಾಭಿಮುಖವಾಗಿರುತ್ತದೆ. ದೇವಸ್ಥಾನಕ್ಕೆ ಪ್ರತ್ಯೇಕವಾದ ಗುಡಿಸಲನ್ನು ನಿರ್ಮಾಣ ಮಾಡಿರುತ್ತಾರೆ. ಸುತ್ತಲೂ ಗೋಡೆಯನ್ನು ಕಟ್ಟಿ ಮೇಲೆ ಬಿದಿರು, ತಡಿಕೆ ಅಥವಾ ಆಪಿನಿಂದ ಮುಚ್ಚಿರುತ್ತಾರೆ. ಗುಡಿಸಲಿನ ಮಧ್ಯೆ ಚಿಕ್ಕದಾದ ಜಗುಲಿ ಇರುತ್ತದೆ. ಅದರ ಮೇಲೆ ದೇವರುಗಳನ್ನು ಇಟ್ಟು ಭದ್ರಪಡಿಸಿರುವ ಪೆಟ್ಟಿಗೆಯನ್ನು ಇಟ್ಟಿರುತ್ತಾರೆ. ಬೆಳ್ಳಿ ಮತ್ತು ಬಂಗಾರದ ದೇವರ ಮೂರ್ತಿಗಳು ಇರುತ್ತವೆ. ಶಿವ(ಖುದಾ) ದೇವರು ಗಂಡು ದೇವರಾಗಿದ್ದು, ಉಳಿದ ದೇವರುಗಳು ಹೆಣ್ಣು ದೇವರುಗಳು ಆಗಿರುತ್ತವೆ. ದೇವರುಗಳ ಅಂಗೈ

ಅಗಲದ ಆಕಾರವನ್ನು ಹೊಂದಿರುತ್ತವೆ. ದೇವರುಗಳನ್ನು ಕೆಂಪು ಬಣ್ಣದ ತುಂಡು ಬಟ್ಟೆಗಳಲ್ಲಿ ಇಟ್ಟು ಮುಚ್ಚಿಟ್ಟಿರಲಾಗುತ್ತದೆ. ಹಕ್ಕಿ ಪಿಕ್ಕಿ ಜನಾಂಗದಲ್ಲಿ ಯಾರ ಮೈಯಲ್ಲಿ ದೇವರು ಬರುತ್ತದೆಯೋ ಅವನೇ ಪೂಜಾರಿಯಾಗಿ ಪೂಜಾ ಕಾರ್ಯವನ್ನು ನೆರವೇರಿಸುತ್ತಾನೆ. ಪೂಜಾರಿಯು ಸಾಮಾನ್ಯವಾದ ಉಡುಪನ್ನು ಹೊಂದಿದ್ದರೂ, ದೇವರ ಪೂಜಾಕಾರ್ಯಗಳಲ್ಲಿ ಕೆಂಪು ಬಟ್ಟೆಯನ್ನು ಧರಿಸುತ್ತಾನೆ. ಕಾಲಿಗೆ ಮತ್ತು ಸೊಂಟಕ್ಕೆ ಗೆಜ್ಜೆಯನ್ನು ಕಟ್ಟಿಕೊಳ್ಳುತ್ತಾನೆ. ದೇವರನ್ನು ಮಂಗಳವಾರ ಮತ್ತು ಶುಕ್ರವಾರಗಳಂದು ಪೂಜೆಯನ್ನು ಮಾಡುತ್ತಾರೆ. ಹೂವು, ಊದುಬತ್ತಿ, ಅರಿಶಿಣ, ಕುಂಕುಮ, ಲೋಬಾನ, ದೂಪಗಳನ್ನು ಬಳಸುತ್ತಾರೆ. ಹುಣ್ಣಿಮೆ, ಅಮವಾಸ್ಯೆಗಳಂದು ದೇವರುಗಳಿಗೆ ವಿಶೇಷವಾಗಿ ಪೂಜೆಯನ್ನು ಮಾಡುತ್ತಾರೆ.

**ಕಂಕಾಳಿ:** ಹಕ್ಕಿಪಿಕ್ಕಿ ಜನಾಂಗದವರು ಪೂಜಿಸುವ ದೇವತೆಗಳಲ್ಲಿ ಕಂಕಾಳಿ ದೇವತೆಯು ಹೆಚ್ಚು ಶಕ್ತಿಶಾಲಿಯೆಂದು ನಂಬಿದ್ದಾರೆ. ಈ ದೇವತೆಗೆ ವರ್ಷಕ್ಕೊಮ್ಮೆ ಅಥವಾ ಕೆಲವು ವರ್ಷಗಳ ಅಂತರದಲ್ಲಿ ಕೋಣವನ್ನು ಬಲಿಕೊಡಲಾಗುತ್ತದೆ. ಹನ್ನೆರಡು ವರ್ಷಗಳಿಗೊಮ್ಮೆ ಕಂಕಾಳಿ ದೇವತೆಯ ಪೂಜೆಯನ್ನು ವಿಶೇಷವಾಗಿ ಆಚರಿಸಲಾಗುತ್ತದೆ. ಈ ದೇವತೆಗೆ ಕೋಣವನ್ನು ಬಲಿಕೊಡುತ್ತಾರೆ. ಆಗದಿದ್ದರೆ, 'ಸುವಾಳಿ' ಸಿಹಿ ತಿನಿಸನ್ನು ತಯಾರಿಸಿ ನೈವೇದ್ಯ ಮಾಡಿ ಪೂಜಿಸಲಾಗುತ್ತದೆ. 'ಸುವಾಳಿ' ಸಿಹಿ ತಿನಿಸನ್ನು ಅಕ್ಕಿ ಹಿಟ್ಟಿನಲ್ಲಿ ಹಿತಮಿತವಾಗಿ ಬೆಲ್ಲವನ್ನು ಬೆರೆಸಿ ವಡೆಗಳ ಆಕಾರದಂತೆ ಮಾಡಿ ಕುದಿಯುವ ಎಣ್ಣೆಯಲ್ಲಿ ಇವುಗಳನ್ನು ಕರಿಯುತ್ತಾರೆ. ಬೆಂದಂತಹ ಈ ಸುವುಳಿಗಳನ್ನು ಕೈಯಿಂದಲೇ ಪೂಜಾರಿಯು ತೆಗೆಯುತ್ತಾನೆ. ಅವನಿಗೆ ದೇವರು ಮೈಮೇಲೆ ಬರುವುದರಿಂದ ಇದು ಸಾಧ್ಯವಾಗುತ್ತದೆಂದು ಭಾವಿಸಲಾಗುತ್ತದೆ. ಈ ದೇವತೆಯ ಪೂಜೆಗೆ ಯಾವುದೇ ನಿರ್ದಿಷ್ಟವಾದ ಋತುಮಾನ ಮತ್ತು ಕಾಲಗಳು ಇರುವುದಿಲ್ಲ. ಯಾವಾಗ ಸಂಕಷ್ಟಗಳು ಬಂದಿವೆ ಎನಿಸಿದಾಗ ಸಂಕಷ್ಟದ ಪರಿಹಾರಕ್ಕಾಗಿ ವಿಶೇಷ ಪೂಜೆಯನ್ನು ಮಾಡುತ್ತಾರೆ.

**ಮೊಮ್ಮಾಯಿ:** ಹಕ್ಕಿಪಿಕ್ಕಿಯರ ಈ 'ಮೊಮ್ಮಾಯಿ ದೇವತೆ'ಯು ಗಾಳಿದೇವತೆಯಾಗಿದೆ. ಈ ದೇವತೆಯ ಪೂಜೆಯನ್ನು ಪ್ರತೀ ವರ್ಷದ ಆಷಾಢ ಮಾಸದಲ್ಲಿ ಆಚರಿಸುತ್ತಾರೆ. ಈ ದೇವತೆಯ ಪೂಜೆಯನ್ನು ಮಾಡದಿದ್ದರೆ, ಗಾಳಿದೇವತೆಗೆ ಸಿಟ್ಟುಬಂದು ರೋಗರುಜಿನಗಳನ್ನು ತರುತ್ತಾಳೆ ಎಂದು ನಂಬಿರುತ್ತಾರೆ. ಈ ದೇವತೆಗೆ ಹಕ್ಕಿಪಿಕ್ಕಿಯವರ ಹಟ್ಟಿ(ತಾಂಡ)ಯಿಂದ, ಸ್ವಲ್ಪ ದೂರದಲ್ಲಿ ಸಣ್ಣ ಮಂಟಪವನ್ನು ಸಿದ್ಧಪಡಿಸಿ, ತಾತ್ಕಾಲಿಕವಾಗಿ ಪ್ರತಿಷ್ಠಾಪನೆ ಮಾಡಿದ ದೇವತೆಯ ಎದುರಿನ ಸ್ಥಳದಲ್ಲಿ ಹೋತದ (ಗಂಡು ಮೇಕೆ)ಮರಿಯನ್ನು ಬಲಿಕೊಟ್ಟು ಪೂಜೆಯನ್ನು ಮಾಡುತ್ತಾರೆ. ತಮ್ಮ ಗುಡಾರ(ಬಿಡಾರ)ಗಳಲ್ಲಿ ತಯಾರಿಸಿದ ಪಾಯಸ(ಹುಗ್ಗಿ) ಮತ್ತು ಬೇಯಿಸಿದ ನವಧಾನ್ಯದ ಕಾಳುಗಳನ್ನು ಒಂದು ತಟ್ಟೆಯಲ್ಲಿ ಹಾಕಿ ದೇವತೆಗೆ ನೈವೇದ್ಯವನ್ನು ಮಾಡಿ ಪೂಜಾಸ್ಥಳದಲ್ಲಿ ಸೇರಿದ ಎಲ್ಲಾ ಹಿರಿಯರಿಗೂ, ಕಿರಿಯರಿಗೂ ಹಂಚಲಾಗುತ್ತದೆ. ಪೂಜೆಯ ನಂತರ ಬಲಿ ಮಾಂಸದಿಂದ ಮಾಂಸದ ಅಡುಗೆಯನ್ನು ತಯಾರಿಸಿ ಎಲ್ಲರಿಗೂ ಮಾಂಸದ ಊಟವನ್ನು ಹಾಕುತ್ತಾರೆ. ಎಲ್ಲಾ ಕಾರ್ಯವು ಮುಗಿದ ನಂತರ ದೇವತೆಗೆ ತಾತ್ಕಾಲಿಕವಾಗಿ ಹಾಕಲಾಗಿದ್ದ ದೇವತೆಯ ಚಪ್ಪರವನ್ನು ಕಿತ್ತು ಬಿಸಾಡುತ್ತಾರೆ.

**ದೇವರುಗಳ ಪೂಜಾ ವಿಧಾನಗಳು:** ಹಕ್ಕಿ ಪಿಕ್ಕಿ ಜನಾಂಗದವರು ಶಕ್ತಿದೇವತೆಗಳಾದ ಗಂಗಾದೇವಿ, ತುಳಜಾದೇವಿ, ಶೀಳಾದೇವಿ, ಸಂಕ್ಲಮ್ಮ, ಬಿಸಸಾರ್, ಚಾಂದಬಿ, ಕಾಳಿಕಾ ಇತ್ಯಾದಿ ಸ್ತ್ರೀ ದೇವತೆಗಳ ಪೂಜೆಯನ್ನು ವಿಶೇಷವಾಗಿ ಆಚರಿಸುತ್ತಾರೆ. ಈ ದೇವತೆಗಳಿಗೆ ಪ್ರಾಣಿಬಲಿಗಳನ್ನು ಕೊಡುತ್ತಾರೆ. ಕೋಳಿ, ಕುರಿ, ಕೋಣಗಳನ್ನು ಬಲಿಕೊಡುತ್ತಾರೆ. ದೇವತೆಗಳಿಗೆ ಪ್ರಾಣಿಬಲಿಯನ್ನು ಎರಡು ರೀತಿಯಲ್ಲಿ ಕೊಡುತ್ತಾರೆ. ಪ್ರಾಣಿಯ ತಲೆಯನ್ನು ಹರಿತವಾದ ಆಯುಧದಿಂದ ಎತ್ತಿ ಕಡಿಯುವುದು ಮತ್ತು ಪ್ರಾಣಿಯ ತಲೆಯನ್ನು ಹರಿತವಾದ ಆಯುಧದಿಂದ ಕೊಯ್ಯುವುದು. ಪ್ರಾಣಿಬಲಿಯನ್ನು ಕೊಟ್ಟ ನಂತರ ಮಾಂಸದ ಸ್ವಲ್ಪಭಾಗವನ್ನು ಪೂಜಾ ಸ್ಥಳದಲ್ಲಿ ಬೇಯಿಸುವುದರ ಮೂಲಕ ದೇವರಿಗೆ ನೈವೇದ್ಯವನ್ನು ಮಾಡಿ ದೇವರ ಪೂಜಾಕಾರ್ಯಕ್ಕೆ ಬಂದಿರುವ ಎಲ್ಲಾ ಭಕ್ತರಿಗೆ ಪ್ರಸಾದವನ್ನು ಹಂಚುತ್ತಾರೆ. ಪೂಜೆಯನ್ನು ಮಾಡಿದ ರಾತ್ರಿಯಂದು ಪೂಜೆಯನ್ನು ಮಾಡಿದ ಜಾಗದಲ್ಲಿ ಹಕ್ಕಿಪಿಕ್ಕಿ ಜನಾಂಗದ ಮುಖಂಡರು, ಹಿರಿಯರು, ಕೊಳಲು ಡಾಕ್(ಡಮರುಗದಂತಹ ಒಂದು ವಾದ್ಯ) ಮುಂತಾದ ವಾದ್ಯಗಳನ್ನು ಬಾರಿಸುತ್ತಾ ರಾತ್ರಿಪೂರ್ತಿ ಜಾಗರಣೆ ಮಾಡುತ್ತಾರೆ. ಪ್ರಾಣಿಬಲಿಯನ್ನು ಕೊಟ್ಟ ನಂತರ ದಿನದ ಬೆಳಗಿನ ಜಾವದ ಸಮಯದಲ್ಲಿ ಪೂಜಾಸ್ಥಳದಲ್ಲಿ ಎಲ್ಲಾ ಹಿರಿಯರು, ಮುಖಂಡರು, ಜನಾಂಗದ ಎಲ್ಲರೂ ಸೇರಿ ಮಂಗಳಾರತಿ ಪೂಜೆಯನ್ನು ಮಾಡುತ್ತಾರೆ. ದೇವತೆಗಳಿಗೆ ಭಕ್ತಿಯಿಂದ ಪ್ರಾರ್ಥನೆ ಸಲ್ಲಿಸುತ್ತಾರೆ.

**ಈದ್ ಹಬ್ಬದ ಆಚರಣೆ**

ಹಕ್ಕಿಪಿಕ್ಕಿ ಜನಾಂಗದವರು 'ಈದ್' ಹಬ್ಬವನ್ನು ವರ್ಷಕ್ಕೊಮ್ಮೆ ಆಚರಣೆ ಮಾಡುತ್ತರೆ. ಕೋಳಿ, ಕುರಿ, ಮೇಕೆ, ಕೋಣಗಳನ್ನು ದೇವರಿಗೆ ಬಲಿಯನ್ನು ಕೊಡುತ್ತಾರೆ. ಹನ್ನೆರಡು ವರ್ಷಗಳಿಗೊಮ್ಮೆ 'ದೊಡ್ಡಹಬ್ಬ'ವನ್ನು ಆಚರಣೆ ಮಾಡುತ್ತಾರೆ. ಚಾಮುಂಡಿ, ದುರ್ಗೆ, ಎಲ್ಲಮ್ಮ ದೇವರುಗಳಿಗೆ ಆಗಿಂದಾಗ್ಗೆ ಹಬ್ಬಗಳನ್ನು ಮಾಡುತ್ತಾರೆ. ಒಂದು ವರ್ಷಕ್ಕೊಮ್ಮೆ ಆಚರಿಸುವ ಹಬ್ಬವನ್ನು ಭರ್ನು ಎಂದೂ ಕರೆಯುತ್ತಾರೆ.

**ದೇವರನ್ನು ಕರೆಯುವುದು (ದೇವ್‌ನೋ ಬುಲಾವೋ)**

ಹಕ್ಕಿಪಿಕ್ಕಿ ಸಮುದಾಯದವರಲ್ಲಿ ದೇವರನ್ನು ಕರೆಯುವ ಆಚರಣೆಯು ವಿಶೇಷವಾದದ್ದಾಗಿದೆ. ದೇವರ ಕಟ್ಟೆಯ ಮುಂದೆ ಮೂರು ಕಲ್ಲುಗಳು ಜೋಡಿಸಿ ಖವಾಳಿ (ಸಿಹಿ ಕಜ್ಜಾಯ)ಯನ್ನು ಮಾಡಲಾಗುತ್ತದೆ. ದೇವಾಯು(ದೇವರು ಮೈಮೇಲೆ ಬಂದಿರುವವನು) ಕಡಾಯಿಯಿಂದ ಒಂಭತ್ತು ಖವಾಳಿಗಳನ್ನು ತೆಗೆಯುತ್ತಿರುತ್ತಾನೆ. ಈ ಆಚರಣೆಯು ರಾತ್ರಿ ನಡೆಯುತ್ತದೆ. ರಾತ್ರಿಯ ಹೊತ್ತು ಈ ಖವಾಳಿಗಳನ್ನು ತಿನ್ನುವ ಹಾಗಿಲ್ಲ. ಮರುದಿನದ ಬೆಳಿಗ್ಗೆ ತಿನ್ನುತ್ತಾರೆ. ಚಾಮುಂಡಿ ದೇವತೆಯನ್ನು ಪೂಜಿಸಿರುತ್ತಾರೆ. ಒಬ್ಬನು ಹಾಡನ್ನು ಹೇಳಿ ದೇವರನ್ನು ಕರೆಯುತ್ತಾನೆ. ಗುಲಗಂಜಿ ಇಡುವಂತಹ ಶಾಸ್ತ್ರಕ್ಕೆ 'ವಧಾಹೊ ಮಾಂಡವಾನು' ಎನ್ನುತ್ತಾರೆ. ಇದರ ಅರ್ಥವೇನೆಂದರೆ ಮಾತನಾಡುತ್ತಾ ಇಡುವುದು. ಈ ಲೆಕ್ಕದ ಪ್ರಕಾರ ಒಂದು ಹಿಡಿಯಲ್ಲಿ ಹದಿನೈದು ಆಗಿರಬೇಕು. ಮೂರು ಗುಂಪಿಗೆ

ಸರಿಯಾಗಿ ಐದೈದು ಬರಬೇಕಾಗುತ್ತದೆ. ಸರಿಯಾಗಿ ಲೆಕ್ಕ ಬರುವವರೆಗೂ ಓಡಿಯನ್ನು ಓಡಿದು ಇಡುವಂತಹ ಕಾರ್ಯವನ್ನು ಮಾಡಬೇಕಾಗುತ್ತದೆ.

**ಭಂಡಾರ್‍ಯ ಎತ್ತುವುದು**

ಹಕ್ಕಿಪಿಕ್ಕಿಯರು ತಮ್ಮ ಕಷ್ಟ ಸುಖಗಳ ಬಗ್ಗೆ ಗುಲಗಂಜಿ ಶಾಸ್ತ್ರದ ಮೂಲಕ ಹಿರಿಯರು ಕಣಿಯನ್ನು ದೇವರಿಗೆ ಕೇಳುತ್ತಾರೆ. ದೇವರ ಹಬ್ಬ ಮಾಡಬೇಕೆಂದು ಕಣಿಯನ್ನು ಹೇಳಿದರೆ ಹಬ್ಬವನ್ನು ಆಚರಿಸುತ್ತಾರೆ. ಉಳಿದ ಅವಶೇಷಗಳನ್ನು ಪತ್ತಾರ್(ಹರಿವಾಣ)ನಲ್ಲಿ ತುಂಬಿ, ವೀಳ್ಯದ ಎಲೆಗಳನ್ನು ಕೂರಿಸಿ, ತೆಂಗಿನಕಾಯಿಯನ್ನು ಒಡೆಯುತ್ತಾರೆ. ಕರ್ಪೂರ, ಲೋಬಾನಗಳ ಮೂಲಕ ಪೂಜೆಯನ್ನು ಮಾಡುತ್ತಾರೆ. ಒಂದು ವೇಳೆ ತಂದೆಯು ಕಾಲವಾಗಿದ್ದರೆ ಗಂಡು ಮಕ್ಕಳೆಲ್ಲಾ ಸೇರಿ ಈ ಹಬ್ಬವನ್ನು ಆಚರಿಸಿದ್ದರೆ, ತಾಯಿಗೆ 'ಭಂಡಾರ್‍ಯ' ಕೊಡುತ್ತಾರೆ. ಹಬ್ಬದ ಅವಶೇಷಗಳನ್ನು ತುಂಬಿದ ಹರಿವಾಣವನ್ನು 'ಭಂಡಾರ್‍ಯ' ಎನ್ನುತ್ತಾರೆ. ಇದಕ್ಕಿಂತಲೂ ಮೊದಲು ಆಕೆಯಿಂದ ಹಿರಿಯರು, ಐದು ರೂಪಾಯಿಯಂತೆ (ಪಾಂಚ್ ಫದ್ಯಾ) ದಂಡವನ್ನು ಪಡೆಯುತ್ತಾರೆ. ಒಂದು ವೇಳೆ ಆಕೆಯು ಬೇರೆಯವರಿಗೆ ಕೋಪದಿಂದ ಮಾತನಾಡಿದ್ದರೆ ಅಂತಹ ದುರ್ನಡತೆಗೆ ಕ್ಷಮೆ ಕೊಟ್ಟಂತೆ ಆಗುತ್ತದೆ. 'ಭಂಡಾರ್‍ಯ'ವನ್ನು ಎತ್ತಿಕೊಳ್ಳುವ ಸ್ತ್ರೀಯ ನಡತೆಯು ಒಳ್ಳೆಯದಾಗಿರಬೇಕಾಗುತ್ತದೆ. ತಲೆಯ ತುಂಬಾ ಸೆರಗನ್ನು ಹೊದ್ದುಕೊಂಡ ಆಕೆಯು ಭಂಡಾರ್‍ಯವನ್ನು ತಲೆಯ ಮೇಲೆ ಹೊತ್ತುಕೊಂಡು ಒಂದು ನಿಗದಿಯಾದ ಜಾಗದಲ್ಲಿ ಪೂಜೆಯನ್ನು ಮಾಡಿ ಗುಲಗಂಜಿಶಾಸ್ತ್ರ(ವಧಾವ)ವನ್ನು ನೋಡುತ್ತಾರೆ. ಭಂಡಾರ್‍ಯವನ್ನು ಎತ್ತುವುದರಿಂದ 'ಗುರುಗಳ್ನಿ' ಎಂದು ಕರೆಯಿಸಿಕೊಂಡವಳು ಮರಣ ಹೊಂದಿದಾಗ ಆಕೆಯ ಶಿರಾಣೆಗೆ ಯಾವುದೇ ನಿರ್ಬಂಧವಿಲ್ಲದೆ ದೇವರ ತ್ರಾಂಗಡೂ ಇಡುತ್ತಾರೆ. ಈ ಪದ್ಧತಿಯು ಪಾಟ್‌ಗುರಿಗೆ(ಸೀರುಡಿಕೆ ಮಾಡಿಕೊಂಡವಳು) ಅನ್ವಯವಾಗುವುದಿಲ್ಲ.

**ದೇವರನ್ನು ಕೂರಿಸುವ ವಿಧಾನಗಳು**

೧. **ಗುಜರಾತ್ಯೋ:** ದಾದಾಜಿಗೆ(ಶಿವ) ವೀಳ್ಯದ ಎಲೆ ಮೇಲೆ ಕೂರಿಸುತ್ತಾರೆ. ನಂತರ ಅಖ್‌ಪಾಳ್ (ನಾಗದೇವರು)ಗೆ ಗುಣೇಖ್(ಗಣೇಶ)ನನ್ನು ವೀಳ್ಯದ ಎಲೆಯಲ್ಲಿ ಕೂರಿಸುತ್ತಾರೆ. ನಂತರದಲ್ಲಿ ವಿಖಳೀ(ಚಾಮುಂಡೇಶ್ವರಿ)ಯ ಮೂರ್ತಿಯನ್ನು ಬೆಳ್ಳಿಯಿಂದ ಮಾಡಿಸಿದ ಮೂರ್ತಿಯನ್ನು ಕೂರಿಸುತ್ತಾರೆ. ಆನಂತರ ಕ್ರಮವಾಗಿ ಖಕ್ಕತ್, ಕೇಳ್, ಮಹ್ಮಮಯಿ ಸಿಕೋತರ(ನಾಯಿಕೆಮ್ಮಿನ ದೇವರು) ಚಾಂದ್‌ಡಿ, ಪಾರ್ಧನ್, ಭಖಾಖರ್, ಹನುಮಾನ್ ಮತ್ತು ಪಂಗಡದ ಪಿತೃ, ಗುರುಪಾತಿಯೊ' ಇವುಗಳ ಎಲೆ ಅಥವಾ ಮೂರ್ತಿಗಳನ್ನು ಕೂರಿಸುತ್ತಾರೆ.

೨. **ಪವಾರ್:** ದಾದಾಜಿಗೆ(ಶಿವ) ಮೋಳ್‌ಯು(ಬಟ್ಟೆದೇವರು)ನ್ನು ಕೂರಿಸುತ್ತಾರೆ. ನಂತರ ಅಖಂಪಾಳ್ ನಾಗದೇವರು ಗುಣೇಖ್(ಗಣೇಶ) ಆನಂತರ ಕ್ರಮವಾಗಿ ಜೊಗಾಯಿ(ಮೂಕಾಂಬಿಕೆ) ಮೈಲಿದೇವಿ, ಶೇಳ್, ಮಹಮ್ಮಯಿ, ಓಘಂಬರ್(ಸರಸ್ವತಿ) ಖಾತ್ ಖಂಬ್ರಿ, ರಣಚಂಡಿ, ಮಗ್ರಿ ಖಾದಾರು ಅಗಾಖೊಡ, ಬಾವನ್‌ಖೂರಿ ಬೆಖಾಖರ್ ಮತ್ತು ಪಂಗಡದ ಪಿತೃ 'ಉಬಾರಿಯೋ' ಮೂರ್ತಿಗಳನ್ನು ಕೂರಿಸುತ್ತಾರೆ.

೩. **ಕಾಳಿವಾಳೋ:** ತ್ರಿಕೋನಕಾರದಲ್ಲಿ ಸುತ್ತಿರುವ ಬಟ್ಟೆಯ ದೇವರನ್ನು 'ದಾದಾಜಿಯ(ಶಿವ) ಮೊಳಯು' ಎಂದು ಕರೆಯುತ್ತಾರೆ. ಒಮ್ಮೆ ತಯಾರಿಸಿದಂತಹ ಮೊಳಯು ಮುಂದಿನ ಪೀಳಿಗೆಯವರಿಗೆ ಮುಂದುವರೆಯುತ್ತದೆ. ಯಾವ ಕಾರಣಕ್ಕಾಗಿಯೂ ಅದನ್ನು ನಾಶಪಡಿಸಲು ಯಾರೂ ಮುಂದಾಗುವುದಿಲ್ಲ. ನಂತರ ದುಗಾವ್ ಎಂಬ(ಕಾಳಿಕಾ) ದೇವಿಯ ಮೂರ್ತಿ(ಖಪ್ಪರ್)ಯನ್ನು ಕೂರಿಸುತ್ತಾರೆ. ತರುವಾಯ ಕ್ರಮವಾಗಿ ಮಹಮ್ಮಾಯಿ(ಮುಂಬಾದೇವಿ), ಶೇಳ್, ಲೋದವ್(ಖಾಂದಾರು) ಭಣಾಜಾರಿ(ಮಗರಿ), ಭಿಮ್, ಬೆಖಬಾರ್, ಕೊನೆಯದಾಗಿ ಭರಕ್‌ನ ಭೈ(ಬೀರದೇವರು) ಮತ್ತು ಪಂಗಡದ ಪಿತೃ ಗುರುಢಾಡರ್' ಹೆಸರಿನಲ್ಲಿ ವೀಳ್ಯೆ ಎಲೆ ಇಟ್ಟು ಪೂಜಿಸುತ್ತಾರೆ.

೪. **ಮೆವಾಡೋ:** ದಾದಾಜಿಗೆ(ಶಿವ) ವೀಳ್ಯದ ಎಲೆ ಮೇಲೆ ಕೂರಿಸುತ್ತಾರೆ. ನಂತರ ನೌಕೋಡ್ (ಎಲ್ಲಮ್ಮ)ನ ಮೂರ್ತಿಯನ್ನು ಕೂರಿಸುತ್ತಾರೆ. ತರುವಾಯ ಕ್ರಮವಾಗಿ ಮಹಮ್ಮಯಿ, ಶೇಳ್, ತೋಲಾವ್, ಖಾಂದಾರು, ಭಣಾಜಾರಿ, ಮಗರಿ, ಬಿಮ್, ಬೆಖಾಬರ್, ಭರಕನಾ ಭೈ(ಬೀರದೇವರು) ವಾಘೈ(ಸರಸ್ವತಿ) ಮತ್ತು ಪಂಗಡದ ಪಿತೃ ಗುರುಧಾನವತ್ ಮೂರ್ತಿಗಳನ್ನು ಕೂರಿಸುತ್ತಾರೆ.[೧೧]

**ಕೋಣವನ್ನು ಬಲಿ ಕೊಡುವ ದೇವರುಗಳು**

೧. ದಾದಾಜಿ
೨. ಅಕಪಾಳ
೩. ಈಕಳಿ
೪. ಖಖತ್
೫. ಶೇಳ್
೬. ಮಮ್ಮಯ್
೭. ಶಿಕೋತರ್
೮. ಫಾಳನ್ನಾರ್
೯. ರಹಾವುಂಡಿ
೧೦. ಚಾಂದಡಿ
೧೧. ಇಂಗಳರಾಜ್

**ಕೋಣವನ್ನು ಬಲಿ ಕೊಡದೇ ಇರುವ ದೇವರುಗಳು**

೧. ದಾದಾಜಿ
೨. ದುಗಾವ್
೩. ಕಾಳ್‌ಕಾ
೪. ಹಕ್ಕತ್
೫. ಶೇಳ್
೬. ಮಮ್ಮಯ್

೭. ಇಂಗಳರಾಜ್

೮. ಬರಕನಾಬೈ

೯. ವಾಗಯ್

೧೦. ಬೆಕಾಕರ್

**ನಂಬಿಕೆಗಳು**

೧. ಹಕ್ಕಿಪಿಕ್ಕಿ ಜನಾಂಗದವರು ನರಿಯನ್ನು ತಿನ್ನುವುದರಿಂದ ನರಿಯ ವಾಸನೆ ಯಾವಾಗಲೂ ಇರುತ್ತದೆ ಎನ್ನುವ ನಂಬಿಕೆ ಇದೆ. ಆದ್ದರಿಂದ ನಾಯಿಗಳು ಇವರನ್ನು ಕಂಡಕೂಡಲೇ ವಾಸನೆಯನ್ನು ಗ್ರಹಿಸಿ ಬೊಗಳುತ್ತವೆ.

೨. ಕೊಂಬುಗಳಿರುವ ನರಿಗಳು ಅದೃಷ್ಟವಂತರಿಗೆ ಮಾತ್ರ ಸಿಗುತ್ತವೆ.

೩. ಕೈಕಾಲುಗಳು ಒಡೆದಿದ್ದಾಗ(ಬಿರಿದಾಗ) ನರಿಯ ರಕ್ತವನ್ನು ಹಚ್ಚಿದರೆ ವಾಸಿಯಾಗುತ್ತದೆ.

೪. ಹುಟ್ಟುವುದು ಮತ್ತು ಬದುಕುವುದು ದೇವರ ಆಶೀರ್ವಾದದಿಂದ ಎನ್ನುವ ನಂಬಿಕೆ.

೫. ದೇವತೆಗಳಿಗೆ ಮರ್ಯಾದೆ ಕೊಡದಿದ್ದರೆ ಪೂರ್ವಜರಿಗೆ ಅವಮಾನ ಮಾಡಿದಂತೆ ಎನ್ನುವ ನಂಬಿಕೆ.

೬. ದೊಡ್ಡ ನರಿಯ ದಿಕ್ಕನ್ನು ಅಪಶಕುನ ಎಂದು ನಂಬುತ್ತಾರೆ.

೭. ಮೊಲ ಬಲದಿಂದ ಎಡಕ್ಕೆ ಹಾದು ಹೋದರೆ, ಹಾವು ಅಡ್ಡ ಬಂದರೆ, ಖಾಲಿ ಕೊಡ ಎದುರು ಬಂದರೆ ಕೆಟ್ಟದಾಗುತ್ತದೆ.

೮. ಶರೀರದ ಎಡಭಾಗಕ್ಕೆ ಗುದ್ದಿದಂತೆ ಆದರೆ ಬಹಳ ಹಕ್ಕಿಗಳು ಸಿಗುತ್ತವೆ. ಬಲಭಾಗಕ್ಕೆ ಗುದ್ದಿದಂತೆ ಆದರೆ ಕೆಟ್ಟದಾಗುತ್ತದೆ ಎನ್ನುವ ನಂಬಿಕೆ.

೯. ಶನಿವಾರ ಭಾನುವಾರಗಳು ಕೆಟ್ಟದಿನಗಳು. ಈ ದಿನಗಳಲ್ಲಿ ಹಕ್ಕಿಗಳ ಬೇಟೆ ಸಿಗುವುದಿಲ್ಲ.

**ಆಚರಣೆಗಳು**

೧. **ದೃಷ್ಟಿ ತೆಗೆಯುವುದು:** ಕಾಲು ಧೂಳಾದರೆ ಮೂರು ಕಲ್ಲು ತಂದು ಮೂರು ಸಲ ಒಟ್ಟಿಗೆ ನೀವಳಿಸುತ್ತ

ಅವರ ಕಣ್ಣು

ಇವರ ಕಣ್ಣು

ಅವರ ಬಾಯಿಗೆ ಮಣ್ಣು

ಎಂದು ಹೇಳುತ್ತಾ ಮೂರು ದಾರಿ ಸೇರುವ ಕಡೆ ಪುಡಿ ಪುಡಿಯಾಗುವಂತೆ ಆ ಕಲ್ಲುಗಳನ್ನು ಹೊಡೆದು ಹಾಕುತ್ತಾರೆ. ಕಾಲುದೂಳು ಆರೋಗ್ಯವನ್ನು ಕೆಡಿಸಿ ಹೊಟ್ಟೆಉಬ್ಬರ ಆಗದಿರಲೆಂದು ರಂಚು ಹಾಕುತ್ತಾರೆ. ತಟ್ಟೆಯಲ್ಲಿ ಸಗಣಿಯನ್ನು ಕಲಸಿದ ನೀರಿಗೆ ಕೆಂಡ ತುಂಬಿದ ಲೋಟವನ್ನು ದಬ್ಬಾಕುತ್ತಾರೆ.

೨. **ನೀರಿಳಿಸುವುದು :** ಒಂದು ಮಡಕೆ ಚೊಂಬಿನಲ್ಲಿ ನೀರು ಕುದಿಸುವುದು. ಕುದಿಸಿ ಒಂದು ತಟ್ಟೆ ಕೆಳಗೆ ಇಡುವುದು. ಚೊಂಬನ್ನು ಕೈಯಲ್ಲಿ ಎತ್ತಿಕೊಳ್ಳುವುದು. ಇದು ಮುಖ್ಯವಾಗಿ ಮಕ್ಕಳು ಹಸಿರಾಗಿ ಮಲವಿಸರ್ಜನೆ ಮಾಡುತ್ತಿದ್ದರೆ ಮಾಡುವ ಆಚರಣೆ. ನಾಲ್ಕೈದು ಈಚಲು ಚಾಪೆಗರಿಗಳಿಂದ ನೀವಳಿಸಿ ಏಳು ಗರಿಕೆ ಎಸಳಿಗೆ ಒಂದೊಂದು ಗಂಟು ಹಾಕುತ್ತಾ ಸುಟ್ಟು ಒಟ್ಟು ಏಳು ಗಂಟು ಹಾಕಿ ಸುಡುತ್ತಾರೆ. ಹೀಗೆ ಸುಡುವಾಗ, ಈ ಶ್ಲೋಕ ಹೇಳುತ್ತಾರೆ.

ಚೋದ್ ಬಾಂದು
ಚೋಡೋ ಬಾಂದು
ದಾಗರೋ ಬಾಂದು
ಧಾತಕ ಬಾಂದು
ಬತ್ತೇಶಿ ಬಾಂದು
ಚೋಟಿ ಬಾಂದು
ಲಾವಣ ಬಾಂದು
ಥಾಕಣ ಬಾಂದು
ಗರ್ಲಿ ಬಾಂದು
ಬಾರ್ಲಿ ಬಾಂದು ಎಂದು ಹೇಳುತ್ತಾರೆ.
ಹೀಗೆಂದರೆ,
ಸೆರಗ ಕಟ್ಟು
ಲಂಗದ ಕಟ್ಟು
ಹಲ್ಲು ಕಟ್ಟು
ಹಲ್ಲಿನ ವಸಡು ಕಟ್ಟು
ಜಡೆ ಕಟ್ಟು
ಜಾಕೀಟ ಕಟ್ಟು
ದೆವ್ವದ ಕಟ್ಟು
ಅಕ್ಕಪಕ್ಕದ ಮನೆ ಹೆಂಗಸರ ಕಟ್ಟು
ಹೊರಗಡೆ ಹೆಂಗಸರ ಕಟ್ಟು

ಎಂದು ಹೇಳುವುದರ ಜತೆಗೆ ಗಂಟು ಹಾಕುತ್ತಾರೆ. ಮತ್ತೊಮ್ಮೆ ಹೇಳಿ ಮತ್ತೊಂದು ಗಂಟು ಹಾಕುತ್ತಾರೆ. ಹೀಗೆ ಏಳು ಗಂಟು ಹಾಕಿ ಏಳು ಬಾರಿ ಕುದಿಯುವ ನೀರನ್ನು ನೀವಳಿಸಿ ತಟ್ಟೆಗೆ ಅರ್ಧ ಚೊಂಬಿನ ನೀರನ್ನು ದಬ್ಬಾಕಿದಾಗ ಮೇಲೆ ಒಂದು ಕಬ್ಬಿಣದ ತುಂಡಿನಿಂದ ಅಡ್ಡದಿಡ್ಡಿ ಒಂದು ಗೆರೆಯನ್ನು ಹಾಕಿ ತಟ್ಟೆಯಲ್ಲಿರುವ ನೀರೆಲ್ಲ ಚೊಂಬಿನ ಒಳಕ್ಕೆ ಹೋಗುವಂತೆ ಮಾಡುತ್ತಾರೆ. ಹೀಗೆ ಮಾಡಿದಾಗ ಒಂದು ವೇಳೆ ದೃಷ್ಟಿಯಾಗಿದ್ದರೆ ಖಂಡಿತವಾಗಿಯೂ ದೃಷ್ಟಿ ಹೋಗುತ್ತದೆ ಎನ್ನುವ ನಂಬಿಕೆ ಇದೆ.

೩. **ಎದೆಹಾಲಿನ ದೃಷ್ಟಿ ತೆಗೆಯುವುದು:** ಎದೆ ಹಾಲನ್ನು ಕಪ್ಪೆ ಚಿಪ್ಪಿಗೆ ಕರೆದು ಬೆಂಕಿ ಮೇಲೆ ಇಟ್ಟು ಕಾಯಿಸುತ್ತಾರೆ. ಆಗ ಅದು ಕೆಂಪಗೆ ಆದರೆ ಮಗುವಿಗೆ ಸೂತಕ ತಗುಲಿದೆ ಎಂದು ನಿರ್ಧರಿಸುತ್ತಾರೆ. ಬೆಳಿಗ್ಗೆ ಸಾಯಂಕಾಲ ಮೂರು ಬಾರಿ ಈ ರೀತಿ ಹಾಲು ಸುಟ್ಟು ಬಿಟ್ಟರೆ ಸೂತಕ ಹೋಗುತ್ತದೆ.

೪. **ವೈರಿಗಳು ಮತ್ತು ದೆವ್ವಗಳ ದೃಷ್ಟಿ ತೆಗೆಯುವುದು:** ವೈರಿಗಳು ಮತ್ತು ದೆವ್ವಗಳು ರಾತ್ರಿ ಎರಡು–ಮೂರು ಗಂಟೆಯ ಹೊತ್ತಿನಲ್ಲಿ ಓಡಾಡುತ್ತಿರುತ್ತವೆಯಂತೆ. ಮನೆ ಮುಂದೆ ಅಕ್ಕೋಲೆ ಗಿಡದ ಕೊನೆಯನ್ನು ಸೂರಿನಲ್ಲಿ ಸಿಗಿಸಿರುತ್ತಾರೆ. ಇದರಿಂದ ದೆವ್ವ ಬಿಟ್ಟು ಓಡಿ ಹೋಗುತ್ತವೆ ಎನ್ನುವ ನಂಬಿಕೆ ಇದೆ. ಇತ್ತೀಚೆಗೆ ಮಂತ್ರಿಸಿದ ತೆಂಗಿನಕಾಯಿ, ಬರೆಸಿದ ತಾಮ್ರದ ತಗಡು, ಮಣ್ಣಿನ ಕುಡಿಕೆಗಳನ್ನು ಮಂತ್ರ ಯಂತ್ರ ಮಾಡಿಸಿ ಕಟ್ಟುತ್ತಾರೆ.[೨]

ಈ ರೀತಿಯಾಗಿ ಹಕ್ಕಿಪಿಕ್ಕಿ ಜನಾಂಗವು ತನ್ನದೇ ಆದ ಜನಪದ ನಂಬಿಕೆಗಳನ್ನು ಹೊಂದಿದೆ. ಪ್ರತಿಯೊಂದು ಜನಾಂಗವೂ ತನ್ನದೇ ಆದ ಸಾಂಪ್ರದಾಯಿಕ ಜ್ಞಾನ ಮತ್ತು ನಂಬಿಕೆಗಳನ್ನು ಹೊಂದಿರುತ್ತದೆ. ಪ್ರತಿಯೊಂದು ಜನಾಂಗದ ಆಲೋಚನಾ ಕ್ರಮ, ಕಲ್ಪನಾಶಕ್ತಿ, ಗ್ರಹಿಕೆಗಳ ಆಧಾರದ ಮೇಲೆ ವಿಭಿನ್ನವಾದ ನಂಬಿಕೆಗಳು ಆಚರಣೆಯಲ್ಲಿರುತ್ತವೆ. ಈ ನಂಬಿಕೆಗಳು ಆ ಜನಾಂಗಗಳ ಸಂಪ್ರದಾಯಗಳೂ ಕೂಡ ಆಗಿರುತ್ತವೆ.

### ೪.೬. ಒಳಾಡಳಿತ ವ್ಯವಸ್ಥೆ

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ತಮ್ಮದೇ ಆದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿದೆ. ಪ್ರತಿಯೊಂದು ಬುಡಕಟ್ಟು ಸಮುದಾಯವೂ ತಮ್ಮದೇ ಆದ ರೀತಿ ನೀತಿಗಳು, ನಿಯಮ ನಿಬಂಧನೆಗಳು, ಸಂಪ್ರದಾಯಗಳನ್ನು ಹೊಂದಿರುವಂತೆಯೇ ಹಕ್ಕಿಪಿಕ್ಕಿ ಜನಾಂಗವು ತಮ್ಮದೇ ಆದ ನೀತಿ ನಿಯಮಗಳನ್ನು ಒಳಗೊಂಡ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದೆ. ಈ ಜನಾಂಗದಲ್ಲಿನ ಕುಟುಂಬ ವ್ಯವಸ್ಥೆಯು, ಮುಖ್ಯವಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಸಾಮಾನ್ಯವಾಗಿ ಹೊಂದಿದೆ. ಕುಟುಂಬದಲ್ಲಿನ ಗಂಡಸಿಗಿಂತ ಹೆಣ್ಣಿನ ಮಾತಿಗೆ ಪ್ರಾಶಸ್ತ್ಯವಿದೆ. ಕುಟುಂಬದಲ್ಲಿನ ಹೆಣ್ಣಿನ ನಿರ್ಧಾರವು ಪ್ರಮುಖ ಪಾತ್ರವಹಿಸುತ್ತದೆ. ಗಂಡಸು ತಮ್ಮ ಕುಟುಂಬಕ್ಕೆ ಬೇಕಾದ ಅಗತ್ಯತೆಗಳಾದ ಆಹಾರ, ಬಟ್ಟೆ, ಇತ್ಯಾದಿಗಳನ್ನು ಒದಗಿಸಿದರೆ, ಕುಟುಂಬದ ಸ್ತ್ರೀಯು, ಮಕ್ಕಳ ಪಾಲನೆ, ಪೋಷಣೆಗಳನ್ನು ನೋಡಿಕೊಳ್ಳುತ್ತಾರೆ. ಕೆಲವೊಮ್ಮೆ ಹೆಂಡತಿಯೂ ಕೂಡ ಗಂಡನೊಂದಿಗೆ ಕೆಲಸ ಕಾರ್ಯಗಳಲ್ಲಿ ಸಮಾನವಾಗಿ ಪಾಲ್ಗೊಳ್ಳುತ್ತಾಳೆ. ಹಕ್ಕಿಪಿಕ್ಕಿ ಸಮುದಾಯದಲ್ಲಿ ವಿಭಕ್ತ ಕುಟುಂಬ ಪದ್ಧತಿಯನ್ನು ಅಳವಡಿಸಿಕೊಂಡಿರುತ್ತಾರೆ. ದಂಪತಿಗಳು ತಮ್ಮ ಜೀವನೋಪಾಯಕ್ಕಾಗಿ ಬೇರೆ ಕಡೆ ಹೋದಾಗ ತಮ್ಮ ಮಕ್ಕಳನ್ನು ಆ ಮನೆಯ ಹಿರಿಯರ ಆಶ್ರಯದಲ್ಲಿ ಬಿಟ್ಟುಹೋಗುತ್ತಾರೆ. ಆ ಹಿರಿಯರು, ಮಕ್ಕಳನ್ನು ನೋಡಿಕೊಳ್ಳುತ್ತಾರೆ. ಹಕ್ಕಿಪಿಕ್ಕಿಯರು ತಮ್ಮದೇ ಆಡಳಿತ ವ್ಯವಸ್ಥೆಯನ್ನು ಹೊಂದಿ ತಮ್ಮ ಪೂರ್ವಜರು ಉಳಿಸಿಕೊಂಡು ಬಂದಂತಹ ಸಂಪ್ರದಾಯಗಳು, ಕಟ್ಟುಪಾಡುಗಳು, ರೀತಿನೀತಿಗಳನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಮಕ್ಕಳ ಪಾಲನೆ ಮತ್ತು ಪೋಷಣೆಯಲ್ಲಿ ಕುಟುಂಬದ ಹಿರಿಯರು ಬಹಳ ಪ್ರಮುಖವಾದ

ಪಾತ್ರವನ್ನು ವಹಿಸುತ್ತಾರೆ. ಹಕ್ಕಿಪಿಕ್ಕಿ ಸಮುದಾಯದಲ್ಲಿ ಅನಾಥಪ್ರಜ್ಞೆ ಮಕ್ಕಳಿಗೆ ಕಾಡುವುದಿಲ್ಲ. ಈ ಜನಾಂಗದ ಹಿರಿಯರು ಮಕ್ಕಳ ಬಗ್ಗೆ ವಿಶೇಷವಾದ ಪ್ರೀತಿ, ಕಾಳಜಿಯನ್ನು ಹೊಂದಿರುತ್ತಾರೆ. ಗಂಡು ಮತ್ತು ಹೆಣ್ಣು ಪರಸ್ಪರ ಸಹಬಾಳ್ವೆಯಿಂದ ಬಾಳುತ್ತಾರೆ. ಒಂದು ವೇಳೆ ಗಂಡನನ್ನು ಹೆಂಡತಿ ಬಿಟ್ಟು ಹೋದರೆ, ಹೆಂಡತಿಯನ್ನು ಗಂಡ ಬಿಟ್ಟುಹೋದರೆ, ಹಕ್ಕಿಪಿಕ್ಕಿಯರ ಹಿರಿಯರು ಪಂಚಾಯ್ತಿ ಸೇರಿ ಪರಸ್ಪರ ಗಂಡ ಮತ್ತು ಹೆಂಡತಿಯನ್ನು ಒಟ್ಟುಗೂಡಿಸಿ ರಾಜಿ ಪಂಚಾಯಿತಿ ಮಾಡುತ್ತಾರೆ. ಒಂದು ವೇಳೆ ಗಂಡ ಅಥವಾ ಹೆಂಡತಿ ಮರಣ ಹೊಂದಿದರೆ, ಪುನರ್ ವಿವಾಹದ ಮೂಲಕ ಸಂಸಾರವನ್ನು ಪುನರ್ ಸ್ಥಾಪಿಸುತ್ತಾರೆ.

**ನ್ಯಾಯ ಪಂಚಾಯಿತಿ ವ್ಯವಸ್ಥೆ:** ಹಕ್ಕಿಪಿಕ್ಕಿ ಜನಾಂಗದಲ್ಲಿ ಉದ್ಭವಿಸುವ ಯಾವುದೇ ಸಮಸ್ಯೆಯನ್ನು ನ್ಯಾಯ ಪಂಚಾಯಿತಿ ವ್ಯವಸ್ಥೆಯ ಮೂಲಕ ಬಗೆಹರಿಸಿಕೊಳ್ಳುತ್ತಾರೆ. ಕೋರ್ಟ್, ಕಚೇರಿಗಳವರೆಗೂ ಸಮಸ್ಯೆಗಳನ್ನು ಮುಂದುವರೆಸುವುದಿಲ್ಲ. ಹಕ್ಕಿಪಿಕ್ಕಿ ಜನಾಂಗವು ವಲಸೆ ಹೋಗುವಂತಹ ತಂಡದಲ್ಲಿ ಎಲ್ಲಾ ಗೋತ್ರದವರೂ ಇರುತ್ತಾರೆ. ಪ್ರತಿಯೊಂದೂ ತಂಡದಲ್ಲಿಯೂ, ನಾಯಕ(ಮುಖ್ಯಸ್ಥ), ಕಾರಭಾರಿ (ಕಾರ್ಯದರ್ಶಿ) ಹಾಗೂ ಡಾವ್(ಹಿರಿಯ ದೈವದವ)ಗಳೆಂಬ ಪ್ರಮುಖರು ಇರುತ್ತಾರೆ. ಪ್ರತಿಯೊಂದು ತಂಡದ ನಾಯಕನ ಹುದ್ದೆ ವಂಶಪಾರಂಪರ್ಯವಾಗಿ ಬಂದಿರುತ್ತದೆ. ಕಾರಭಾರಿ ಹುದ್ದೆಯು ತಂದೆಯಿಂದ ಕೊನೆಯ ಮಗನಿಗೆ ಬಳುವಳಿಯಾಗಿ ಬಂದಿರುತ್ತದೆ. ಬಹಳ ಕುಶಲಮತಿಗಳು, ಬುದ್ಧಿವಂತರು, ವೀರರು, ಧೀರರು, ಈ ಹುದ್ದೆಗಳನ್ನು ಹೊಂದಿರುತ್ತಾರೆ. ಇವರ ತಂಡದಲ್ಲಿನ ಹಿರಿಯರನ್ನು ಡಾವ್(ದೈವದವರು) ಎಂದು ಕರೆಯುತ್ತಾರೆ. ತಂಡದ ಒಳ ಆಡಳಿತವೆಲ್ಲವನ್ನು ಇವರು ನಿಯಂತ್ರಿಸುತ್ತಾರೆ. ಸಭೆ ಸಮಾರಂಭಗಳನ್ನು ನಡೆಸುವುದು, ಗಲಾಟೆಗಳನ್ನು ನಿಯಂತ್ರಿಸುವುದು ಇತ್ಯಾದಿ ಯಾವುದೇ ಸಮಸ್ಯೆಗಳಿದ್ದರೂ ತಮ್ಮ ನ್ಯಾಯ ಪಂಚಾಯಿತಿಗಳಲ್ಲೇ ಬಗೆಹರಿಸಿಕೊಳ್ಳುತ್ತಾರೆ. ಜನಾಂಗದ ಹಿರಿಯ ವ್ಯಕ್ತಿಗೆ ತುಂಬಾ ಪ್ರಾಮುಖ್ಯತೆ ಇರುತ್ತದೆ.

ಹಕ್ಕಿಪಿಕ್ಕಿಯರಲ್ಲಿ ಅನೈತಿಕ ಸಂಬಂಧದ ನಿಷೇಧವಿದೆ. ಒಂದು ವೇಳೆ ಈ ರೀತಿಯ ಅನೈತಿಕ ಸಂಬಂಧವನ್ನು ಗಂಡಾಗಲೀ, ಹೆಣ್ಣಾಗಲಿ, ಇಟ್ಟುಕೊಂಡಿದ್ದರೆ ದಂಡವನ್ನು ವಿಧಿಸುವುದರ ಮೂಲಕ ಸೂಕ್ತ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಒಬ್ಬ ಗಂಡಸು ತನ್ನ ತಂಗಿ, ಅಕ್ಕ, ಅತ್ತಿಗೆ, ಚಿಕ್ಕಮ್ಮ, ಅತ್ತೆ ಇವರೊಂದಿಗೆ ಲೈಂಗಿಕ ಸಂಪರ್ಕವನ್ನು ಇಟ್ಟುಕೊಳ್ಳುವಂತಿಲ್ಲ. ಒಂದು ವೇಳೆ ಲೈಂಗಿಕ ಸಂಬಂಧವನ್ನು ಇಟ್ಟುಕೊಂಡಿದ್ದರೆ, ಸೂಕ್ತ ದಂಡ ಮತ್ತು ಶಿಕ್ಷೆಯನ್ನು ಪಂಚಾಯಿತಿಯ ಮೂಲಕ ನ್ಯಾಯನಿರ್ಣಯ ಮಾಡಲಾಗುತ್ತದೆ.

ಅಕ್ಕ ಅಥವಾ ತಂಗಿಯರೊಂದಿಗೆ ರೂ.೬೦೦ ರಿಂದ ೮೦೦

ಅತ್ತಿಗೆಯೊಂದಿಗೆ ರೂ.೩೦೦ ರಿಂದ ೪೦೦

ಚಿಕ್ಕಮ್ಮ ಅಥವಾ ದೊಡ್ಡಮ್ಮರೊಂದಿಗೆ ರೂ.೬೦೦ ರಿಂದ ೭೦೦

ಅತ್ತೆಯೊಂದಿಗೆ ರೂ.೧೦೦೦ವರೆಗೆ

ಈ ರೀತಿಯಾಗಿ ಪುರುಷರಿಗೆ ದಂಡ ವಿಧಿಸಿದರೆ, ಅನೈತಿಕ ಸಂಬಂಧದಲ್ಲಿ ಸಿಕ್ಕಿಬಿದ್ದ ಹೆಣ್ಣಿಗೆ ಹತ್ತು, ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಹಬ್ಬದಲ್ಲಿ ದೇವರ ಮುಂದೆ ಕೂರಿಸಿ, ತಲೆಗೆ ಸಗಣಿಯನ್ನು ಬಳಿದು ಶುದ್ಧ ಮಾಡುತ್ತಾರೆ. ಸಾವಿರ ರೂಪಾಯಿಗಳನ್ನು ದಂಡ ಹಾಕುತ್ತಾರೆ. ಈ ಹಣವನ್ನು ಖರ್ಚು ಮಾಡಿ ಕುಲಸ್ಥರೆಲ್ಲರೂ ಸೇರಿ ಕುಡಿದು, ತಿಂದು ಖರ್ಚು ಮಾಡುತ್ತಾರೆ. ಶುದ್ಧ ಮಾಡಿದ ಹೆಣ್ಣನ್ನು ಕುಲಕ್ಕೆ ಸೇರಿಸಿಕೊಳ್ಳಲಾಗುವುದು.

**ಹಕ್ಕಿಪಿಕ್ಕಿಯರಲ್ಲಿ ರೂಢಿಯಲ್ಲಿರುವ ನಿರ್ಬಂಧಗಳು:** ಹಕ್ಕಿಪಿಕ್ಕಿ ಜನಾಂಗದಲ್ಲಿ ವಿವಿಧ ರೀತಿಯ ರೀತಿ–ನೀತಿ, ನಿಯಮ–ನಿರ್ಬಂಧಗಳಿವೆ. ಈ ನಿಯಮ–ನಿರ್ಬಂಧಗಳು ಸಂದರ್ಭಕ್ಕೆ ತಕ್ಕಂತೆ ಅನ್ವಯವಾಗುತ್ತವೆ. ಅವಶ್ಯಕವಾಗಿ ಮಾಡಬೇಕಾದ, ಮಾಡಬಾರದ ಕರ್ತವ್ಯಗಳನ್ನು ನಿಯಮ–ನಿರ್ಬಂಧಗಳು ತಿಳಿಸುತ್ತವೆ. ಈ ಕಟ್ಟುಪಾಡುಗಳು ವ್ಯಕ್ತಿಯನ್ನು ಸಾಂಪ್ರದಾಯಿಕ ಚೌಕಟ್ಟು ಮೀರದಂತೆ ನಿರ್ಬಂಧಿಸುತ್ತವೆ.

೧. ಹಕ್ಕಿಪಿಕ್ಕಿ ಜನಾಂಗದವರು ಮಾದಿಗರು ಮತ್ತು ಮುಸ್ಲಿಂ ಜನಾಂಗಗಳ ಮನೆಯಲ್ಲಿ ನೀರು ಕುಡಿಯುವುದನ್ನು ನಿರ್ಬಂಧಿಸಲಾಗಿದೆ. ಒಂದು ವೇಳೆ ನೀರು ಕುಡಿದರೆ ೨೧ ರೂಪಾಯಿಗಳಿಂದ ೧೦೦ ರೂಪಾಯಿಗಳವರೆಗೆ ದಂಡ ವಿಧಿಸಲಾಗುತ್ತದೆ. ಯಾಕೆಂದರೆ, ಹಕ್ಕಿಪಿಕ್ಕಿಯರು ಕ್ಷತ್ರಿಯ ವಂಶದವರಾಗಿದ್ದು, ಅವರು ಶೂದ್ರರು ಎನ್ನುವ ನಿಯಮವಾಗಿದೆ.

೨. ಹೆಂಗಸರು ಉಟ್ಟು ಬಿಟ್ಟ ಲಂಗವನ್ನು ಗಂಡಸರಿಗೆ ತಗಲುವಂತೆ ಇಟ್ಟಿದ್ದರೆ ಅಂತಹ ಹೆಂಗಸರಿಗೆ ೧೦೧ ರೂಪಾಯಿ ದಂಡ ಹಾಕುತ್ತಾರೆ. ಹರೆಯದ ಹುಡುಗಿಯ ಲಂಗವಾದರೆ ರಿಯಾಯಿತಿ ಇದೆ. ವಿವಾಹ ಆದವರಿಗೆ ಈ ನಿಯಮ ಈಗಲೂ ಇದೆ.

೩. ಗಂಡ ಹೆಂಡತಿಯ ನಡುವೆ ಜಗಳವಾದರೆ, ಗಂಡ ಹೆಂಡತಿಗೆ ಹೊಡೆಯುವ ಸಂದರ್ಭದಲ್ಲಿ ಹೆಂಡತಿಯು ತಿರುಗಿ ಗಂಡನಿಗೆ ಹೊಡೆದರೆ ೧೦೧ ರೂಪಾಯಿ ದಂಡವನ್ನು ವಿಧಿಸಲಾಗುತ್ತದೆ. ದಂಡವನ್ನು ಕಟ್ಟಲು ನಿರಾಕರಿಸಿದರೆ ಅಂತಹ ಹೆಂಗಸನ್ನು ಜಾತಿ ಬಿಟ್ಟು ಹೊರಹಾಕಲಾಗುತ್ತದೆ. ೧೦೧ ರೂಪಾಯಿ ದಂಡವನ್ನು ಕಟ್ಟಿದ ನಂತರ ಜಾತಿಗೆ ಸೇರಿಸಿಕೊಳ್ಳಾಗುವುದು.

೪. ಹಕ್ಕಿಪಿಕ್ಕಿಯರು ಬೇಟೆಗೆ ಹೋದಾಗ ಸರಿಸಮನಾಗಿ ಪಾಲು ಮಾಡಿಕೊಳ್ಳುವ ಪದ್ಧತಿ ಇದೆ. ಇಬ್ಬರು ಬೇಟೆಗೆ ಹೋದಾಗ ಬೇಟೆಯನ್ನು ಸಮನಾಗಿ ಹಂಚಿಕೊಳ್ಳುತ್ತಾರೆ. ಒಂದು ವೇಳೆ ಸರಿಸಮನಾಗಿ ಪಾಲು ಸಿಗದಿದ್ದರೆ ಹಿರಿಯರ ಪಂಚಾಯಿತಿಯನ್ನು ಕರೆದು ದಂಡವನ್ನು ಹಾಕಿಸುವ ಪದ್ಧತಿ ಇದೆ.

೫. ಪರಸ್ಪರ ಜಗಳವಾಡುವ ಸಂದರ್ಭದಲ್ಲಿ ಯಾರಾದರೂ ಚಪ್ಪಲಿಯಿಂದ ಇನ್ನೊಬ್ಬರಿಗೆ ಹೊಡೆದರೆ ೧೦೦ ರೂಪಾಯಿಗಳವರೆಗೆ ದಂಡವನ್ನು ವಿಧಿಸುತ್ತಾರೆ. ನಂತರ ಇಬ್ಬರಿಗೂ ಕೈತೊಳೆಸಿ, ರಾಜಿಯನ್ನು ಮಾಡಿಸುತ್ತಾರೆ.

೬. ಹಕ್ಕಿಪಿಕ್ಕಿ ಹೆಂಗಸು ಗಂಡಸಿಗೆ ಕಾಲಿನಿಂದ ಹೊಡೆದರೆ, ಅಂತಹ ಹೆಣ್ಣಿಗೆ ೫೦೦ ರೂಪಾಯಿ ದಂಡವನ್ನು ವಿಧಿಸುತ್ತಾರೆ. ಆಕೆಯು ಕುಲ ಬಾಂಧವರೆಲ್ಲರಿಗೂ ಕುಡಿಸಿ, ಊಟವನ್ನು

ಹಾಕಿಸಿದ ಮೇಲೆ ಅವಳ ತಪ್ಪು ಮುಗಿಯುತ್ತದೆ. ಹೆಂಗಸಿನಿಂದ ಕಾಲಿನಿಂದ ಹೊಡೆಸಿಕೊಂಡ ಗಂಡಸಿಗೆ 'ಲಾತ್‌ನಾ ಮಾರ್‌ಕಾ ಘಾತೆಲೊ' ಎಂದು ಕರೆಯಲಾಗುತ್ತದೆ.

೭. ಗಂಡನು ಹೆಂಡತಿಯ ಬಾಣಂತಿತನ ಮುಗಿಯುವ ಮೊದಲು ಸುಮಾರು ಮೂರು ತಿಂಗಳಿನ ಒಳಗೆ ಹೆಂಡತಿಯೊಂದಿಗೆ ಸಂಭೋಗವನ್ನು ಮಾಡುವಂತಿಲ್ಲ.

೮. ಋತುಮತಿಯಾದ ಹೆಂಗಸನ್ನು ಏಳು ದಿನಗಳವರೆಗೆ ಮುಟ್ಟುವಂತಿಲ್ಲ. ಒಂದು ವೇಳೆ ಮುಟ್ಟಿದರೆ ಅಂತಹ ಗಂಡಸಿಗೆ ಇನ್ನೂರು ರೂಪಾಯಿ ದಂಡವನ್ನು ವಿಧಿಸಲಾಗುತ್ತದೆ. ಜಾತಿಯಿಂದ ಒಂದು ತಿಂಗಳ ಕಾಲ ಹೊರಗೆ ಇಡುತ್ತಾರೆ. ಇಂತಹ ಅಪರಾಧ ಮಾಡಿದ ಗಂಡಸಿಗೆ 'ಬಾರ್‌ಲುಯ್‌ ಬಾಯಿಕೋನ ಚೂದು ಲೊಹೊವ್ ವಾಳೊವ್' ಎಂದು ಕರೆಯಲಾಗುತ್ತದೆ.

೯. ಒಂದು ವೇಳೆ ಬೇರೆಯವರ ಹೆಂಡತಿಯನ್ನು ಅಪಹರಿಸಿದವನನ್ನು 'ಚೊಟ್ಟಿಚೋದು ಉಪ್ಪರೀನ ಉಡೌಯ್‌ಲೀಗೊ' ಎಂದು ಕರೆಯಲಾಗುತ್ತದೆ. ಅಪಹರಣ ಮಾಡಿದ ಹೆಂಗಸಿನೊಂದಿಗೆ ವಾಪಸ್ಸು ಬಂದರೆ, ಕುಲಬಾಂಧವರೆಲ್ಲಾ ಸೇರಿ ಅವರನ್ನು ಹಿಡಿದು ಬೆತ್ತಲು ಮಾಡಿ ಕಂಬಕ್ಕೆ ಕಟ್ಟಿ ಚರ್ಮದ ಬಾರುಕೋಲಿನಿಂದ ಘಟಗೀರನಾದವನ ಕೈಯಿಂದ ಗಂಡಸಿಗೆ ಹನ್ನೆರಡು ಸಲ, ಹೆಂಗಸಿಗೆ ಇಪ್ಪತ್ತೆಂಟು ಸಲ ಏಟುಗಳನ್ನು ಹೊಡೆಯುತ್ತಾರೆ. ನಂತರ ಆ ಗಂಡಸಿಗೆ, 'ಇದೆ ಹೆಣ್ಣು ಬೇಕೋ? ಅಥವಾ ಆಕೆಯ ಗಂಡನಿಗೆ ಆಕೆಯನ್ನು ಬಿಡುತ್ತೀಯೋ? ಈಕೆಯನ್ನು ನೀನೇ ಇಟ್ಟುಕೊಳ್ಳುವುದಾದರೆ, ಗಂಡನಿಗೆ ಬೇರೆ ಮದುವೆಯನ್ನು ಮಾಡಿಸಿಕೊಡು' ಎಂದು ಕುಲಬಾಂಧವರು ಹೇಳುತ್ತಾರೆ. ಇಂತಹ ಸಂದರ್ಭದಲ್ಲಿ ದಂಡವನ್ನು ಕಟ್ಟಿಸಿಕೊಂಡು ಅಂತಹ ಹೆಣ್ಣನ್ನು ಕುಲಕ್ಕೆ ಸೇರಿಸಿಕೊಂಡು ಮೊದಲ ಗಂಡನಿಗೆ ಬಿಟ್ಟು ಕೊಡಬಹುದು ಅಥವಾ ಅಪಹರಿಸಿದ ಗಂಡಿನೊಂದಿಗೆ ಕೂಡಿಸಿ, ಮೊದಲ ಗಂಡನಿಗೆ ಬೇರೆ ಮದುವೆಯನ್ನು ಮಾಡಬಹುದು. ಅಪರಾಧಿಗಳಿಬ್ಬರೂ ಒಂದೇ ಕುಲದವರಾಗಿದ್ದಾರೆ. ಕುಲಬಾಂಧವರೆಲ್ಲರೂ ದಂಡದ ರೂಪದ ಕುಡಿತ ಮತ್ತು ಊಟವನ್ನು ಹಾಕಿಸಿದ ನಂತರ ಹೆಂಗಸಿನ ಕೈಯಿಂದ ಗಂಡಸಿನ ತಲೆಗೆ ಎಣ್ಣೆಯನ್ನು ಹಾಕಿಸುತ್ತಾರೆ. ಇದನ್ನು ಮಾಡುವ ಕಾರಣವೇನೆಂದರೆ, ಇನ್ನು ಮುಂದೆ ಈ ಹೆಂಗಸನ್ನು ಕೆಟ್ಟ ದೃಷ್ಟಿಯಿಂದ ನೋಡಬಾರದೆಂಬುದಾಗಿರುತ್ತದೆ. ತದನಂತರ ಗಂಡಸಿಗೆ ೫೦೦ ರಿಂದ ೬೦೦ ವರೆಗೆ ದಂಡವನ್ನು ವಿಧಿಸುತ್ತಾರೆ. ಈ ಗಂಡಸಿಗೆ 'ಜನಿ ರಾಂಡ್ ತಿನ ಮೆಹಲಿದಿದೊ'(ಅವನ ಹೆಂಡತಿಯನ್ನು ಅವನಿಗೆ ಕೊಟ್ಟವನು) ಎಂದು ಮತ್ತು ತೇಲ್ ಗಲಾಯೊ(ಎಣ್ಣೆ ಹಚ್ಚಿಸಿಕೊಂಡವನು) ಎಂದು ಕರೆಯಲಾಗುತ್ತದೆ. ಈ ರೀತಿ ಕರೆಸಿಕೊಳ್ಳುವುದು ಅವಮಾನದ ಪ್ರಕರಣವಾಗುತ್ತದೆ.

೧೦. ಮದುವೆಗಿಂತ ಮುಂಚೆ ಹಕ್ಕಿಪಿಕ್ಕಿ ಹೆಣ್ಣು ಅನೈತಿಕವಾಗಿದ್ದಳೆಂದು ಅನುಮಾನ ಕುಲಬಾಂಧವರಿಗೆ ಬಂದರೆ, ಆ ಹೆಣ್ಣನ್ನು ಪರೀಕ್ಷಿಸುವ ವಿಧಾನ ಅಸಹ್ಯಕರವಾದುದಾಗಿದೆ. ಹೆಂಗಸರು ಅಪರಾಧಿ ಹೆಣ್ಣಿನ ಯೋನಿಗಳಿಗೆ ಕೋಳಿ ಮೊಟ್ಟೆಯನ್ನು ತುರುಕುವ ಮೂಲಕ ಪರೀಕ್ಷೆಯನ್ನು ಮಾಡುತ್ತಾರೆ. ಮೊಟ್ಟೆ ಯೋನಿಯ ಒಳಗೆ ಹೋಗದಿದ್ದರೆ ಹೆಣ್ಣು ಯಾರೊಂದಿಗೂ ಸಂಭೋಗ ಮಾಡಿಸಿಕೊಂಡಿಲ್ಲ ಎಂದು, ಮೊಟ್ಟೆ ಯೋನಿಯ ಒಳಗೆ ಹೋದರೆ ಸಂಭೋಗವನ್ನು ಮಾಡಿಸಿಕೊಂಡಿದ್ದಾಳೆ

ಎಂದು ಅಂತಹವಳಿಗೆ 'ದೇವಿನಾ ಟೀಕ ಬಂದ್' (ದೇವಿಯ ಆಶೀರ್ವಾದದ ಬೊಟ್ಟು ಇಲ್ಲ) ಎಂಬುದಾಗಿ ನಿರ್ಧಾರ ಮಾಡುವುದರಿಂದ ಯಾರೂ ಕೂಡ ಆಕೆಯನ್ನು ಮದುವೆ ಮಾಡಿಕೊಳ್ಳದೇ ಇರಬಹುದಾಗಿದೆ. ಆದರೆ ಅಂತಹ ಹೆಣ್ಣನ್ನು 'ಸೀರುಡಿಕೆ' ಮಾಡಿಕೊಳ್ಳಬಹುದಾಗಿರುತ್ತದೆ. ಈ ಪ್ರಕರಣದ ದಂಡದ ರೂಪದಲ್ಲಿ ಮದುವೆಯ ಸಂದರ್ಭದಲ್ಲಿ ಕುಲಬಾಂಧವರೆಲ್ಲರಿಗೂ 'ವೀಳ್ಯದ ಎಲೆ' ಕೊಡಬೇಕಾಗುತ್ತದೆ. ಈ ರೀತಿ ವೀಳ್ಯೆ ಎಲೆ ಕೊಟ್ಟವಳನ್ನು 'ಕವಾರೆ ಚೋದಿ' (ಮದುವೆಗಿಂತ ಮುಂಚೆಯೇ ಹಿಡಿಸಿಕೊಂಡವಳು) ಎಂದು ಕರೆಯಲಾಗುತ್ತದೆ.

೧೧. ಹಕ್ಕಿಪಿಕ್ಕಿ ಹೆಣ್ಣು ಅಥವಾ ಗಂಡಾಗಲೀ ಹಳ್ಳಿಗಳಿಗೆ ವ್ಯಾಪಾರ ಮತ್ತು ಭಿಕ್ಷೆಗೆ ಹೋದಾಗ ತಮ್ಮ ಗುಡುಲುಗಳು ಅಥವಾ ಟೆಂಟುಗಳನ್ನು ಬಿಟ್ಟು ರಾತ್ರಿ ಎಲ್ಲಿಯೂ ಬೇರೆ ಕಡೆ ಉಳಿದುಕೊಳ್ಳುವಂತಿರುವುದಿಲ್ಲ. ಒಂದು ವೇಳೆ ಗಂಡಸಾಗಲಿ, ಹೆಂಗಸಾಗಲಿ ಹೊರಗಡೆ ಉಳಿದುಕೊಂಡರೆ ಅಕ್ರಮ ಸಂಬಂಧವನ್ನು ಇಟ್ಟುಕೊಂಡಿದ್ದಾರೆಂದೂ, ಮೈಲಿಗೆ ಎಂದು ಭಾವಿಸುತ್ತಾರೆ. ಈ ವಿಷಯದಲ್ಲಿ ಹಕ್ಕಿಪಿಕ್ಕಿಯರಲ್ಲಿ ಕಟ್ಟುನಿಟ್ಟಾದ ಪದ್ಧತಿ ಇದೆ.

ಇಂತಹ ಪ್ರಕರಣದಲ್ಲಿ ಪ್ರಮಾಣ ಮಾಡಿಸುವ ಎರಡು ಘೋರವಾದ ಪದ್ಧತಿಗಳು ಇವೆ.

೧. ಕುಲಬಾಂಧವರೆಲ್ಲರೂ ಕುಲಪಂಚಾಯಿತಿ ಸೇರಿ, ಕುಲಪಂಚಾಯಿತಿ ಎದುರಲ್ಲಿ ಪಾತ್ರೆಯಲ್ಲಿ ಸಗಣಿ ನೀರನ್ನು ಚೆನ್ನಾಗಿ ಕುದಿಸಿ ಅದರಲ್ಲಿ ಉಂಗುರ ಅಥವಾ ನಾಣ್ಯವನ್ನೂ ಹಾಕಿ ಅದನ್ನು ತೆಗೆಯುವಂತೆ ತಪ್ಪಿತಸ್ಥರಿಗೆ ಹೇಳುತ್ತಾರೆ. ತಪ್ಪನ್ನು ಮಾಡಿದ್ದರೆ ಚರ್ಮ ಸುಡುತ್ತದೆ. ತಪ್ಪನ್ನು ಮಾಡಿಲ್ಲದಿದ್ದರೆ ಚರ್ಮ ಸುಡುವುದಿಲ್ಲ ಎನ್ನುವ ನಂಬಿಕೆಯ ಪದ್ಧತಿ ಇದೆ.

೨. ಒಂದು ಕೊಡಲಿಯನ್ನು ಕೆಂಪಾಗಿ ಕಾಯಿಸಿ ತಪ್ಪಿತಸ್ಥನ ಕೈಯ ಅಂಗೈ ಮೇಲೆ ಒಂದು ವೀಳೆ ಎಲೆ ಇಟ್ಟು, ಅದರ ಮೇಲೆ ಕೊಡಲಿಯನ್ನು ಇಡುತ್ತಾರೆ. ತಪ್ಪು ಮಾಡಿದ್ದರೆ ಕೈಸುಡುತ್ತದೆ. ತಪ್ಪು ಮಾಡಿಲ್ಲದಿದ್ದರೆ ಕೈ ಸುಡುವುದಿಲ್ಲ ಎನ್ನುವ ನಂಬಿಕೆ ಇದೆ.

೧೨. ಹಕ್ಕಿಪಿಕ್ಕಿಯರು ಬೇಟೆಗೆ ಹೋದಂತಹ ಸಂದರ್ಭದಲ್ಲಿ ಒಬ್ಬನು ಬೇಟೆಯಾಡುತ್ತಿದ್ದಂತಹ ಬೇಟೆ, ಇನ್ನೊಬ್ಬ ಬೇಟೆಯಾಡಿದರೆ ಅಂತಹ ಬೇಟೆಯು ಈ ಪಂಚಾಯಿತಿಯ ಕುಲಬಾಂಧವರಿಗೆ ಸೇರುತ್ತದೆ. ಕುಲಬಾಂಧವರು ಅಂತಹ ಬೇಟೆಯನ್ನು ಪಾಲು ಮಾಡಿಕೊಂಡು ಮದ್ಯಪಾನ ಮಾಡಿ ಸಂಭ್ರಮಿಸುತ್ತಾರೆ.

ಹಕ್ಕಿಪಿಕ್ಕಿಯರ ನ್ಯಾಯ, ನೀತಿ, ನಿಯಮಗಳು ಇಂದಿಗೂ ಆಚರಣೆಯಲ್ಲಿವೆ. ಕೆಲವು ನಿಯಮಗಳಲ್ಲಿ ಸಡಿಲಿಕೆ ಉಂಟಾಗಿವೆ. ಕೆಲವು ನಿಯಮಗಳು ಆಚರಣೆಯಲ್ಲಿ ಇಲ್ಲ. ಇಂದಿನ ಸಾಮಾಜಿಕ ಬದಲಾವಣೆಗೆ ಅನುಗುಣವಾಗಿ ಅವರ ನೀತಿ-ನಿಯಮಗಳೂ ಸಡಿಲವಾಗಿ ಸರಳವಾಗುತ್ತಿವೆ.

**೪.೭. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ**

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ತನ್ನದೇ ಆದ ಸಾಮಾಜಿಕ ಜೀವನ ವಿಧಾನವನ್ನು ಹೊಂದಿದೆ. ಹಕ್ಕಿಪಿಕ್ಕಿ ಜನಾಂಗದವರ ಸಾಮಾಜಿಕ ವ್ಯವಸ್ಥೆಯಲ್ಲಿ ಅವರ ಆಹಾರ ಪದ್ಧತಿ, ವಸತಿ,

ವೃತ್ತಿ ಕಸುಬು, ರಕ್ತಸಂಬಂಧ, ಬೆಡಗುಗಳು, ಕುಟುಂಬ ವ್ಯವಸ್ಥೆ, ನ್ಯಾಯಪದ್ಧತಿ, ವಿಧಿನಿಷೇಧಗಳು, ವೇಷಭೂಷಣಗಳನ್ನು ಕಾಣಬಹುದಾಗಿದೆ. ಭೌಗೋಳಿಕ ಮತ್ತು ಆರ್ಥಿಕ ವ್ಯವಸ್ಥೆಯ ಮೇಲೆ ಈ ಬುಡಕಟ್ಟು ಜನಾಂಗದ ಸಂಸ್ಕೃತಿಯು ಅಸ್ತಿತ್ವದಲ್ಲಿದೆ. ಪ್ರಾಚೀನ ಕಾಲದ ಬುಡಕಟ್ಟು ವ್ಯವಸ್ಥೆಯನ್ನು ಇಂದಿಗೂ ಹಕ್ಕಿಪಿಕ್ಕಿ ಜನಾಂಗದಲ್ಲಿ ಕಾಣುತ್ತೇವೆ. ಇಂದಿನ ಆಧುನಿಕ ಕಾಲದ ಕಾಲಘಟ್ಟದಲ್ಲಿಯೂ ತಮ್ಮ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನ, ಶಿಕ್ಷಣ, ನಗರೀಕರಣ ವ್ಯವಸ್ಥೆಗಳ ಮಧ್ಯೆಯೂ ತಮ್ಮ ಸಾಮಾಜಿಕ ಜೀವನ ಪದ್ಧತಿಯನ್ನು ಹಕ್ಕಿಪಿಕ್ಕಿ ಜನಾಂಗವು ಉಳಿಸಿಕೊಂಡು ಬಂದಿದೆ.

ಹಕ್ಕಿಪಿಕ್ಕಿ ಜನಾಂಗದವರ ಮೂಲ ಕಸುಬು ಹಕ್ಕಿಗಳನ್ನು ಬೇಟೆಯಾಡಿ ತಂದು ಜೀವನವನ್ನು ಸಾಗಿಸುವುದಾಗಿದೆ. ಅಲ್ಲದೇ ಇವರಲ್ಲಿ ಅನೇಕ ಉಪಕಸುಬುಗಳೂ ಇವೆ. ಟಾಕಣಿಕರು(ಬೀಸುವ ಕಲ್ಲು ಸಾಣೆ ಹಿಡಿಯುವವರು) ಕೂಲಿ ಕೆಲಸ, ಮೀನುಗಾರಿಕೆ, ಪ್ರಾಣಿ ಪಕ್ಷಿಗಳ ಬೇಟೆ, ಹಂದಿ ಸಾಕಾಣಿಕೆ, ಕುರಿಸಾಕಾಣಿಕೆ, ಮೇಕೆ ಸಾಕಾಣಿಕೆ, ಗೋರಂಜನೆ, ಕರಿಮಣಿಗಳ ವ್ಯಾಪಾರ, ವನಸ್ಪತಿ ಔಷಧ, ಗಿಡಮೂಲಿಕೆ ಔಷಧ ಮಾರಾಟ, ತೈಲದಿಂದ ಮಸಾಜ್ ಮಾಡುವ ವೃತ್ತಿ ಇತ್ಯಾದಿ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಆಧುನಿಕ ನಗರ ಜೀವನ ಪದ್ಧತಿಗೆ ಹಕ್ಕಿಪಿಕ್ಕಿ ಜನಾಂಗದವರೂ ಹೊಂದಿಕೊಂಡಿದ್ದಾರೆ. ದೇಶ, ವಿದೇಶಗಳಿಗೂ ಈ ಜನಾಂಗವು ತಮ್ಮ ವೃತ್ತಿ ವ್ಯಾಪಾರಕ್ಕೆ ಸಂಬಂಧಿಸಿದಂತೆ, ತೈಲದ ಮಸಾಜ್ ವೃತ್ತಿಗೆ ಸಂಬಂಧಿಸಿದಂತೆ ಹೋಗಿ ಬರುವುದು ಕಂಡುಬರುತ್ತಿದೆ. ಸ್ವಾತಂತ್ರ್ಯ ನಂತರದ ಕಾನೂನು ಕಾಯ್ದೆಗಳ ಜಾರಿಯಿಂದಾಗಿ, ಈ ಜನಾಂಗವು ಬೇಟೆ ವೃತ್ತಿಯನ್ನು ಮುಕ್ತವಾಗಿ ಮಾಡುತ್ತಿಲ್ಲ. ಆದರೂ ಹಕ್ಕಿಪಿಕ್ಕಿ ಜನಾಂಗವು ಬೇಟೆ ವೃತ್ತಿಯನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಆದಾಗ್ಯೂ ಹಕ್ಕಿಪಿಕ್ಕಿ ಜನಾಂಗದವರು ಇಂದಿನ ಆಧುನಿಕ ಕಾಲಕ್ಕೆ ತಕ್ಕಂತೆ ಬದಲಾಗುವ ಅನಿವಾರ್ಯತೆಗೆ ಒಳಗಾಗಿದ್ದಾರೆ. ಹಕ್ಕಿಪಿಕ್ಕಿ ಜನಾಂಗದವರು ಇತ್ತೀಚೆಗೆ ಒಂದು ಕಡೆ ನೆಲೆ ನಿಲ್ಲುವ ವ್ಯವಸ್ಥೆಗೆ ಹೊಂದಿಕೊಳ್ಳುತ್ತಿದ್ದಾರೆ. ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸುತ್ತಿರುವ ಹಾಗೂ ಆಧುನಿಕ ಶಿಕ್ಷಣವನ್ನು ಕೊಡಿಸುವ ಮನಸ್ಥಿತಿಯನ್ನು ಬೆಳೆಸಿಕೊಳ್ಳುತ್ತಿದ್ದಾರೆ. ಹಕ್ಕಿಪಿಕ್ಕಿ ಜನಾಂಗದ ಹಿರಿಯ ವ್ಯಕ್ತಿಗಳು ತಮ್ಮ ಮೂಲ ಕಸುಬನ್ನು, ವೃತ್ತಿಯನ್ನು ಮುಂದುವರೆಸಿಕೊಂಡು ಬರುತ್ತಿದ್ದರೂ ಕೂಡ ತಮ್ಮ ಮಕ್ಕಳನ್ನು ಎಲ್ಲರಂತೆ ಶಿಕ್ಷಣಕೊಡಿಸಿ, ಒಳ್ಳೆಯ ಉದ್ಯೋಗಕ್ಕೆ ಸೇರಿಸಬೇಕೆಂಬ ಹಂಬಲ ಕಂಡುಬರುತ್ತಿದೆ. ಹಕ್ಕಿಪಿಕ್ಕಿ ಜನಾಂಗದ ಯುವಕರೂ ಕೂಡ ಇಂದು ಬೇರೆ-ಬೇರೆ ಸರ್ಕಾರಿ ಮತ್ತು ಖಾಸಗಿ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪ್ರಸ್ತುತ ಅಧ್ಯಯನವು ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಯನ್ನು ಒಳಗೊಂಡಿದ್ದರೂ ಹಕ್ಕಿಪಿಕ್ಕಿ ಜನಾಂಗದವರ ಹೆಚ್ಚಿನ ಅಧ್ಯಯನಕ್ಕಾಗಿ ಮೈಸೂರು ಜಿಲ್ಲೆಯ ಎಚ್.ಡಿ.ಕೋಟೆ ತಾಲ್ಲೂಕಿನ ಪಕ್ಷಿರಾಜಪುರ ಗ್ರಾಮದಲ್ಲಿನ ಹಕ್ಕಿಪಿಕ್ಕಿ ಜನಾಂಗದವರೊಂದಿಗೆ ಚರ್ಚಿಸಿ, ಅವಲೋಕನ ಮಾಡಿ ಮಾಹಿತಿಗಳನ್ನು ಪಡೆಯಲಾಗಿದೆ.

ಹಕ್ಕಿಪಿಕ್ಕಿ ಜನಾಂಗದವರು ತಮ್ಮ ಮೂಲ ವೃತ್ತಿಯಾದ ಬೇಟೆಗಾರಿಕೆಯಲ್ಲಿ ತುಂಬಾ ಚಾಣಾಕ್ಷರು. ಇವರು ಪ್ರಾಣಿಗಳ ಮತ್ತು ಪಕ್ಷಿಗಳ ಚಲನವಲನಗಳನ್ನು ತುಂಬಾ ಸೂಕ್ಷ್ಮವಾಗಿ ಗಮನಿಸಬಲ್ಲವರಾಗಿದ್ದು,

ನಿರ್ದಿಷ್ಟವಾಗಿ ಬೇಟೆಯನ್ನು ಹೊಡೆದು ಉರುಳಿಸುತ್ತಾರೆ. ವಿವಿಧ ರೀತಿಯ ಬೇಟೆಯ ತಂತ್ರಗಾರಿಕೆಯನ್ನು ರೂಢಿಸಿಕೊಂಡಿದ್ದಾರೆ. ಪಕ್ಷಿಗಳ ರೀತಿಯಲ್ಲಿ ಕೂಗುವುದು, ಶಬ್ದ ಮಾಡುವುದು, ಪ್ರಾಣಿಗಳ ರೀತಿಯಲ್ಲಿ ಕೂಗುವುದು, ಶಬ್ದಮಾಡುವುದರ ಮೂಲಕ, ಪ್ರಾಣಿ–ಪಕ್ಷಿಗಳನ್ನು ಸುಲಭವಾಗಿ ಬೇಟೆ ಮಾಡುತ್ತಾರೆ. ಇವರ ಬೇಟೆಗಾರಿಕೆಯಲ್ಲಿ ಎರಡು ವಿಧಗಳಿವೆ.

**ಕಾಡಿನ ಬೇಟೆಗಳು:** ಹಕ್ಕಿಪಿಕ್ಕಿಯರು ಕಾಡಿನಲ್ಲಿ ಪಕ್ಷಿಗಳು ಮತ್ತು ಪ್ರಾಣಿಗಳನ್ನು ಸಾಮಾನ್ಯವಾಗಿ ಬೇಟೆಯಾಡುತ್ತಾರೆ. ಹಕ್ಕಿಗಳನ್ನು ಹಿಡಿಯುವುದರಿಂದ ಇವರಿಗೆ 'ಹಕ್ಕಿಪಿಕ್ಕಿ' ಎಂಬ ಹೆಸರು ಬಂದಿರಬಹುದು. ಹಕ್ಕಿಗಳನ್ನು ಇವರು ಬಹಳ ಚಾಣಾಕ್ಷತೆಯಿಂದ ಹಿಡಿಯುತ್ತಾರೆ. ಪ್ರತಿಯೊಂದು ಪಕ್ಷಿಗಳ ಮತ್ತು ಪ್ರಾಣಿಗಳ ಚಲನವಲನದ ಬಗ್ಗೆ ತಿಳಿದಿರುತ್ತಾರೆ. ಪ್ರಾಣಿ–ಪಕ್ಷಿಗಳು ನೀರು ಕುಡಿಯಲು ಬರುವ ಸಂದರ್ಭಗಳು, ಪಕ್ಷಿಗಳು ಮೊಟ್ಟೆಗಳನ್ನು ಇಡುವ ಕಾಲ, ವಲಸೆ ಹೋಗುವ ಕಾಲ, ವಲಸೆ ಬರುವ ಕಾಲ ಇತ್ಯಾದಿಗಳ ಬಗ್ಗೆ ಅಪಾರವಾದ ಜ್ಞಾನವನ್ನು ಹೊಂದಿರುತ್ತಾರೆ. ಹಕ್ಕಿಗಳನ್ನು ಹಿಡಿಯುವುದಕ್ಕೆ ಬೇಕಾದ ಉಪಕರಣಗಳಾದ ಉರುಲು, ಚಾಟ್ ಬಿಲ್, ಪುಟ್ಟಿ, ತಂತಿಗಳು, ವೈರ್‌ಗಳು, ಶಬ್ದ ಮಾಡುವ ಉಪಕರಣಗಳನ್ನು ಹೊಂದಿರುತ್ತಾರೆ. ಕಾಡುಕೋಳಿ, ನವಿಲು, ಕೌಜಹಕ್ಕಿ, ಬೆಳವ, ಪಾರಿವಾಳ, ಗುಬ್ಬಚ್ಚಿ, ಸಾಂಬಾರ್ ಕಾಗೆ ಇತ್ಯಾದಿ ಹಕ್ಕಿಗಳನ್ನು ಬೇಟೆಯಾಡುತ್ತಾರೆ. ಮೊಲ, ನರಿ, ಹಂದಿ, ಜಿಂಕೆ, ಕಾಡುಬೆಕ್ಕು ಇತ್ಯಾದಿ ಪ್ರಾಣಿಗಳನ್ನು ಬೇಟೆಯಾಡುತ್ತಾರೆ. ಮೊಲಗಳನ್ನು ಬೇಟೆಯಾಡಲು ಬೇಕಾದ ಕೈಬಲೆ, ಬ್ಯಾಟರಿಗಳನ್ನು ತೆಗೆದುಕೊಂಡು ಹೋಗಿ ಬೇಟೆಯಾಡುತ್ತಾರೆ. ಹುಲಿಯ ಮರಿಗಳು, ಸಿಂಹದ ಮರಿಗಳನ್ನು ಬೇಟೆಯಾಡುತ್ತಾರೆ. ಬೇಟೆಯಾಡಲು ಬೇಕಾದ ಅಪಾರವಾದ ತಾಳ್ಮೆ ಮತ್ತು ಚಾಣಾಕ್ಷತೆಯ ಬುದ್ಧಿಯನ್ನು ಹಕ್ಕಿಪಿಕ್ಕಿಯರು ಹೊಂದಿರುತ್ತಾರೆ.

**ನೀರಿನ ಬೇಟೆಗಳು:** ಹಕ್ಕಿಪಿಕ್ಕಿಯರು ಕಾಡುಪ್ರಾಣಿಗಳು ಮತ್ತು ಪಕ್ಷಿಗಳನ್ನಲ್ಲದೆ ನೀರಿನಲ್ಲಿರುವ ನೀರು ಕೋಳಿ, ಕೊಕ್ಕರೆಗಳು, ಮೀನು, ಮೊಸಳೆ, ಆಮೆ, ಏಡಿ ಇತ್ಯಾದಿ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುತ್ತಾರೆ. ಹಕ್ಕಿಪಿಕ್ಕಿಯರು ಬಹುತೇಕ ಎಲ್ಲಾ ಪ್ರಾಣಿಪಕ್ಷಿಗಳನ್ನು ಬೇಟೆಯಾಡುತ್ತಾರೆ.

**ಬೇಟೆಯ ತಂತ್ರಗಳ ಬಳಕೆ:** ಹಕ್ಕಿಪಿಕ್ಕಿಯರು ಬೇಟೆಯಾಡಲು ಹಲವಾರು ತಂತ್ರಗಳನ್ನು ಬಳಸುತ್ತಾರೆ. ಹಸುಗಳು ಅಥವಾ ಎತ್ತುಗಳನ್ನು ಬಳಸಿ ಪಕ್ಷಿಗಳನ್ನು ಬಹಳ ಚಾಣಾಕ್ಷತೆಯಿಂದ ಬೇಟೆಯಾಡುತ್ತಾರೆ. ಇದಕ್ಕೋಸ್ಕರ ಪ್ರಾಣಿಗಳನ್ನು ಪಳಗಿಸಿಕೊಂಡಿರುತ್ತಾರೆ. ತಾನು ಪಳಗಿಸಿದ ಎತ್ತು ಅಥವಾ ಹಸುವಿಗೆ ಸಂಕೇತಗಳನ್ನು ಶಬ್ದದ ಮೂಲಕ ನೀಡಿ ಪಕ್ಷಿಗಳನ್ನು ಬೇಟೆಯಾಡುತ್ತಾರೆ. ಸಂಕೇತಗಳನ್ನು ನೀಡುತ್ತಾ ಹಸು ಅಥವಾ ಎತ್ತುಗಳನ್ನು ನಿಲ್ಲುವ, ನಡೆಯುವ, ಅಕ್ಕಪಕ್ಕ ಸರಿಯುವ ಸಂಕೇತಗಳನ್ನು ನೀಡುವುದರ ಮೂಲಕ ಪಕ್ಷಿಗಳನ್ನು ಹಿಡಿಯುತ್ತಾರೆ. ಒಂದು ವೇಳೆ ಬರಿಗೈಯಲ್ಲಿ ಪಕ್ಷಿಗಳು ಸಿಗದಿದ್ದರೆ ಉರುಲನ್ನು ಹಾಕುವುದರ ಮೂಲಕ ಹಿಡಿಯುತ್ತಾರೆ. ಹಕ್ಕಿಪಿಕ್ಕಿಯರು ಬೇಟೆಯಾಡುವ ಸಂದರ್ಭದಲ್ಲಿ ತಂತ್ರಗಳನ್ನು ಬಹಳ ಬುದ್ಧಿವಂತಿಕೆಯಿಂದ ಉಪಯೋಗಿಸುತ್ತಾರೆ. ಶಬ್ದವನ್ನು ಉಪಯೋಗಿಸುವುದರ ಮೂಲಕ ಪಕ್ಷಿಗಳನ್ನು ಹಿಡಿಯುತ್ತಾರೆ. ಹಕ್ಕಿಪಿಕ್ಕಿಯರು ತಮ್ಮ ಬೇಟೆಯಲ್ಲಿ 'ಶಬ್ದತಂತ್ರ'ವನ್ನು ವಿಶೇಷವಾಗಿ ಬಳಸುತ್ತಾರೆ. ಕಾಲು ಉರುಲು, ಖಂದಾರು, ಬಲೆಯನ್ನು ಹಾಕುವುದರ

ಮೂಲಕ ಮರದ ಮರೆಯಲ್ಲಿ ನಿಂತು ಶಬ್ಧವನ್ನು ಮಾಡುವುದು, ಸೀಟಿಯನ್ನು ಊದುವುದನ್ನು ಮಾಡಿ ಪಕ್ಷಿಗಳಿಗೆ ಅಥವಾ ಪ್ರಾಣಿಗಳಿಗೆ ದ್ವಂದ್ವವನ್ನು ಉಂಟುಮಾಡುತ್ತಾರೆ. ಪಕ್ಷಿಗಳ ರೀತಿಯಲ್ಲೇ, ಪ್ರಾಣಿಗಳ ರೀತಿಯಲ್ಲೇ ಶಬ್ಧಗಳನ್ನು ಮಾಡುವುದರಿಂದ ಪ್ರಾಣಿಗಳು ಅಥವಾ ಪಕ್ಷಿಗಳು ತಮ್ಮದೇ ಪ್ರಾಣಿ, ಪಕ್ಷಿಗಳ ಧ್ವನಿಯೆಂದು ಭ್ರಮಿಸಿ ಬಲೆಗೆ, ಉರುಲಿಗೆ ಬಂದು ಬೀಳುತ್ತವೆ. ಕಾಡುಕೋಳಿ, ನವಿಲು, ಕೌಜುಗ, ಗೀಜುಗಹಕ್ಕಿ, ಪಾರಿವಾಳ, ಗೂಬೆ ಇತ್ಯಾದಿ ಪಕ್ಷಿಗಳ ಶಬ್ಧವನ್ನು ಅನುಕರಣೆ ಮಾಡುತ್ತಾರೆ. ಪಕ್ಷಿಗಳು ಈ ಶಬ್ಧಗಳನ್ನು ಕೇಳಿ ತಮ್ಮದೇ ಸಂಗಾತಿಗಳೆಂದು ತಿಳಿದುಬರುತ್ತವೆ. ಹಕ್ಕಿಪಿಕ್ಕಿಯರು ಹಾಕಿರುವ ಬಲೆಗೆ, ಉರುಲಿಗೆ ಬೀಳುತ್ತವೆ.

**ಬೇಟೆಗೆ ಬಳಸುವಂತಹ ಉಪಕರಣಗಳು**

**ದಂಗ್ ದರಾನಿ ಮರಾಶಿ(ಕಾಲು ಉರುಲು):** ಕಾಲು ಉರುಲನ್ನು ಪ್ರಾಣಿ ಮತ್ತು ಪಕ್ಷಿಗಳನ್ನು ಬೇಟೆಯಾಡಲು ಬಳಸುತ್ತಾರೆ. ಕಬ್ಬಿಣದ ಮೊಳೆಗಳು, ವೈರ್‌ಗಳು, ತಂತಿಗಳನ್ನು ಬಳಸಿ ಸರಕುಣಿಕೆಯ ರೀತಿಯಲ್ಲಿ ತಯಾರಿಸುತ್ತಾರೆ. ಪ್ರಾಣಿಗಳು, ಪಕ್ಷಿಗಳ ಕಾಲು ಸಿಲುಕಿ ಸ್ವಲ್ಪವೇ ಎಳೆದರೂ ಕೂಡ ಬಿಗಿಯಾಗಿ ಬಂಧಿಸಲ್ಪಡುತ್ತವೆ. ನೆಲದ ಮೇಲೆ, ಮರದ ಟೊಂಗೆಯ ಮೇಲೆ, ಹಕ್ಕಿಗಳು, ಪ್ರಾಣಿಗಳು ಓಡಾಡುವ ಕಡೆ ಉರುಲನ್ನು ಇಡುತ್ತಾರೆ. ನವಿಲು, ಕೊಕ್ಕರೆ, ಹದ್ದು, ಕಾಡುಕೋಳಿ, ಬೆಳವ, ಕೌಜುಗ ಇತ್ಯಾದಿ ಹಕ್ಕಿಗಳು, ಮೊಲ, ಜಿಂಕೆ, ಕಾಡುಹಂದಿ, ನರಿ, ತೋಳ ಇತ್ಯಾದಿ ಪ್ರಾಣಿಗಳನ್ನು ಬೇಟೆಯಾಡುತ್ತಾರೆ.

**ಖಂದಾರು(ಕೌಜುಗ ಹಕ್ಕಿ ಹಿಡಿಯುವ ಬಲೆ):** ಸಾಮಾನ್ಯವಾಗಿ ಹಕ್ಕಿಪಿಕ್ಕಿಯರ ಜೊತೆಗೆ ಖಂದಾರು ಇರುತ್ತದೆ. ಒಂದು ರೀತಿಯಲ್ಲಿ ಪೆಟ್ಟಿಗೆಯಂತೆ ಇರುತ್ತದೆ. ಹೆಗಲಿಗೆ ಹಾಕಿಕೊಂಡು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಅನುಕೂಲಕರವಾದ ರೀತಿಯಲ್ಲಿ ಇರುತ್ತದೆ. ಖಂದಾರು ತಯಾರಿಸಲು ಈ ವಸ್ತುಗಳನ್ನು ಬಳಸುತ್ತಾರೆ.

ಶೇಲಿ- ಕೂದಲುಗಳಿಂದ ಮಾಡಿದ ದಾರ

ಝೂಟು- ಬಿದಿರಿನ ಕಡ್ಡಿಗಳು

ಖಾಡಿ- ಅಡ್ಡ ಇರುವ ಬಿದಿರಿನ ಕಡ್ಡಿಗಳು

ಪಾಂದ್- ನೈಲಾನ್ ದಾರಗಳು

ಟಾಟಿ- ಕಡ್ಡಿಗಳನ್ನು ಮುಚ್ಚುವ ಬಾಗಿಲು

**ಕಣ್ಣಿನ ಬಲೆಗಳು:** ಈ ಬಲೆಗಳನ್ನು ನೈಲಾನ್ ನಾರುಗಳಿಂದ ತಯಾರಿಸಿರುತ್ತಾರೆ. ಸುಮಾರು ಇಪ್ಪತ್ತರಿಂದ ಮೂವತ್ತು ಕಣ್ಣುಗಳನ್ನು ಸರಿಕುಣಿಕೆಯ ರೀತಿಯಲ್ಲಿ ತಯಾರಿಸಿರುತ್ತಾರೆ. ಕೊಕ್ಕರೆ, ನವಿಲು, ಕಾಡುಕೋಳಿ, ಬೆಳವ, ಕೌಜುಗ ಇತ್ಯಾದಿ ಹಕ್ಕಿಗಳನ್ನು, ಮೊಲ, ನರಿ, ಕಾಡುಬೆಕ್ಕು, ಮುಂಗುಸಿ ಇತ್ಯಾದಿ ಪ್ರಾಣಿಗಳನ್ನು ಹಕ್ಕಿಪಿಕ್ಕಿಯರು ಬೇಟೆಯಾಡುತ್ತಾರೆ.

**ವ್ಯವಸಾಯ:** ಹಕ್ಕಿಪಿಕ್ಕಿಯರು ಇತ್ತೀಚಿನ ದಿನಗಳಲ್ಲಿ ಸರ್ಕಾರದಿಂದ ಭೂಮಿಯನ್ನು ಪಡೆದು ವ್ಯವಸಾಯದಲ್ಲಿ ತೊಡಗಿರುವುದು ಕಂಡುಬರುತ್ತಿದೆ. ಅಲ್ಪಸ್ವಲ್ಪ ಜಮೀನನ್ನು ಖರೀದಿಸಿ, ಎತ್ತುಗಳನ್ನು

ಖರೀದಿಸಿ ವ್ಯವಸಾಯ ಮಾಡುತ್ತಿದ್ದಾರೆ. ಇವರ ವ್ಯವಸಾಯವು ಅರೆಕಾಲಿಕವಾಗಿದೆ. ಕೆಲವು ಸಂದರ್ಭಗಳಲ್ಲಿ ವ್ಯವಸಾಯ ಮಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಅಲೆಮಾರಿ ಜೀವನವನ್ನು ನಡೆಸುತ್ತಾರೆ.

**ವ್ಯಾಪಾರ:** ಹಕ್ಕಿಪಿಕ್ಕಿ ಜನಾಂಗದವರು ಹಲವಾರು ವ್ಯಾಪಾರ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ. ಹಕ್ಕಿಪಿಕ್ಕಿ ಗಂಡಸರು ಬೇಟೆ, ವ್ಯಾಪಾರ ಚಟುವಟಿಕೆಗಳಲ್ಲಿ ತೊಡಗಿಕೊಂಡು ಕುಟುಂಬಕ್ಕೆ ಆಹಾರ ಸಾಮಗ್ರಿಗಳನ್ನು ತಂದುಹಾಕುತ್ತಾರೆ. ಹಕ್ಕಿಪಿಕ್ಕಿ ಹೆಂಗಸರೂ ಕೂಡ ಹಲವಾರು ಸಾಮಗ್ರಿಗಳನ್ನು ಮಾರಾಟ ಮಾಡುತ್ತಾರೆ. ಭಿಕ್ಷೆಯನ್ನು ಬೇಡುವುದರ ಮೂಲಕ ತಮ್ಮ ಆಹಾರದ ಅಗತ್ಯತೆಗಳನ್ನು ಪೂರೈಸಿಕೊಳ್ಳುತ್ತಾರೆ. ಸೂಜಿ, ದಬ್ಬಣ, ಪಿನ್ನು, ಕಸ್ತೂರಿ, ಕರಿಮಣಿ, ಹಾಲಮಣಿ, ರುದ್ರಾಕ್ಷಿ, ಉಡದ ತುಪ್ಪ, ನವಿಲು ತುಪ್ಪ ಮುಂತಾದವುಗಳನ್ನು ಮಾರಾಟ ಮಾಡುವುದರ ಮೂಲಕ ಆದಾಯವನ್ನು ಸಂಪಾದಿಸುತ್ತಾರೆ. ಅಲ್ಲದೇ, ಏಕಮುಖ ರುದ್ರಾಕ್ಷಿ, ಪಂಚಮುಖಿ ರುದ್ರಾಕ್ಷಿಗಳನ್ನು ಮಾರಾಟ ಮಾಡುತ್ತಾರೆ. ಜೇನುತುಪ್ಪ, ಹುಲಿಯ ಉಗುರು, ಹುಲಿಹಲ್ಲು, ಕರಡಿ ಉಗುರು, ಕರಡಿ ಕೂದಲು, ಹದ್ದಿನ ಪುಕ್ಕ, ಹದ್ದಿನ ಉಗುರು, ಹದ್ದಿನ ಕೊಕ್ಕು ಮುಂತಾದವುಗಳನ್ನು ಮಾರಾಟ ಮಾಡುತ್ತಾರೆ. ಸಾಲಿಗ್ರಾಮ ವಸ್ತುಗಳು, ಸಮುದ್ರ ತೀರದಲ್ಲಿ ದೊರೆಯುವ ಶಂಖಗಳನ್ನೂ ಕೂಡ ಮಾರಾಟ ಮಾಡುತ್ತಾರೆ.

**ನಾಟಿ ಔಷಧ ಪದ್ಧತಿ:** ಹಕ್ಕಿಪಿಕ್ಕಿ ಜನಾಂಗದವರು ತಮ್ಮದೇ ಆದ ನಾಟಿ ಔಷಧ ಪದ್ಧತಿಯನ್ನು ಹೊಂದಿದ್ದಾರೆ. ಅವರಿಗೆ ಬರುವ ಹಲವಾರು ರೋಗಗಳಿಗೆ ತಾವೇ ತಯಾರಿಸಿದ ನಾಟಿ ಔಷಧವನ್ನು ಬಳಕೆ ಮಾಡುತ್ತಾರೆ. ಹಕ್ಕಿಪಿಕ್ಕಿಯರು ತಮ್ಮ ನಾಟಿ ವೈದ್ಯಪದ್ಧತಿಯ ಮೂಲಕ ಬೇರೆ ಜನಾಂಗದವರಿಗೂ ಔಷಧಿಯನ್ನು ನೀಡುತ್ತಾರೆ. ತಮ್ಮ ಜನಾಂಗದವರಿಗೆ ಉಚಿತ ವೈದ್ಯಕೀಯ ಚಿಕಿತ್ಸೆಯನ್ನು ನೀಡುವ ಹಕ್ಕಿಪಿಕ್ಕಿಯರು, ಬೇರೆ ಜನಾಂಗದವರಿಗೆ ಹಣಕ್ಕಾಗಿ ಅಥವಾ ಇತರೇ ವಸ್ತುಗಳಿಗಾಗಿ ಮಾರಾಟ ಮಾಡುತ್ತಾರೆ. ಕೆಲವೊಮ್ಮೆ ಉಚಿತವಾಗಿಯೂ ಔಷಧವನ್ನು ನೀಡುತ್ತಾರೆ.

**ಕೆಮ್ಮು:** ಅರಿಶಿನ ಕೊರಡನ್ನು ಬೆಂಕಿಯ ಕೆಂಡದಲ್ಲಿ ಸುಟ್ಟು ಪುಡಿಮಾಡಿ ಜೇನಿನಲ್ಲಿ ಬೆರೆಸಿ ಕೊಡಬೇಕು. ಶುಂಠಿಯನ್ನು ಜಜ್ಜಿ, ರಸವನ್ನು ತೆಗೆದು ಅದಕ್ಕೆ ಅಲ್ಪಪ್ರಮಾಣದ ನಿಂಬೆರಸವನ್ನು ಕಲೆಸಿ ಕುಡಿಯಬೇಕು. ನವಿಲುಗರಿಯ ಕೂದಲನ್ನು ಕಿತ್ತು ದಿಂಡನ್ನು ಮಾತ್ರ ಹರಳೆಣ್ಣೆ ದೀಪದಲ್ಲಿ ಸುಟ್ಟು ಅದಕ್ಕೆ ಬೆರೆಸಿ ನೆಕ್ಕಬೇಕು. ದಿನಕ್ಕೆ ಮೂರರಿಂದ ನಾಲ್ಕು ಸಲ ನೆಕ್ಕಿದರೆ ಕೆಮ್ಮು ಕಡಿಮೆಯಾಗುತ್ತದೆ.

**ಹಾವು ಕಚ್ಚಿದರೆ:** ಹಾವು ಕಚ್ಚಿಸಿಕೊಂಡ ವ್ಯಕ್ತಿಯನ್ನು ಕರೆತಂದು ಹಾವು ಕಚ್ಚಿದ ಜಾಗದ ಸ್ವಲ್ಪ ಮೇಲಕ್ಕೆ ಬಿಗಿಯಾಗಿ ಬಟ್ಟೆಯನ್ನು ಕಟ್ಟಿ, ಹಾವು ಕಚ್ಚಿದ ಜಾಗಕ್ಕೆ ಸುಣ್ಣ ಹಚ್ಚಿ, ಜೀವಂತ ಕೋಳಿಯ ಪೃಷ್ಠಭಾಗ(ಮಲದಜಾಗ)ವನ್ನು ಕಚ್ಚಿದ ಜಾಗಕ್ಕೆ ಹಿಡಿದಾಗ ಕೋಳಿಯು ವಿಷವನ್ನು ಎಳೆದುಕೊಳ್ಳುತ್ತದೆ. ಕೋಳಿ ಸಾಯುವವರೆಗೂ ಒಂದಾದ ನಂತರ ಕೋಳಿಗಳನ್ನು ಹಿಡಿಯಬೇಕು. ಕೋಳಿ ಸಾಯದೇ ಬದುಕುಳಿದರೆ ವಿಷ ಇಳಿಯಿತೆಂದು ತಿಳಿಯಲಾಗುತ್ತದೆ. ಆಗ ಹಾವು ಕಚ್ಚಿದ ವ್ಯಕ್ತಿ ಬದುಕುತ್ತಾನೆ.

**ಬಾಯಿಹುಣ್ಣು:** ಉಷ್ಣತೆಯಿಂದ ಬಾಯಿಹುಣ್ಣು ಉಂಟಾದರೆ, ಕಹಿಬೇವಿನ ಸೊಪ್ಪು ಅಥವಾ ಪಂಚಪತ್ರೆ ಸೊಪ್ಪಿನ ರಸದಲ್ಲಿ ಬಾಯಿಯನ್ನು ಮುಕ್ಕಳಿಸಬೇಕು ಅಥವಾ ಬೇವಿನ ಸೊಪ್ಪನ್ನು ಚೆನ್ನಾಗಿ ಜಗಿದು ಉಗಿಯಬೇಕಾಗುತ್ತದೆ.

**ದಡಾರ:** ಮಗುವಿಗೆ ದಡಾರ ಕಾಣಿಸಿಕೊಂಡರೆ ಎಳನೀರು, ಅನ್ನ, ಆಕಳಮಜ್ಜಿಗೆ, ಎಣ್ಣೆ, ಬೆಣ್ಣೆ, ಎಮ್ಮೆ ಮಜ್ಜಿಗೆ ಕೊಡಬಾರದು. ಗ್ರಾಮದೇವತೆಗೆ ಮೊಸರನ್ನು ಅರ್ಪಿಸಿ ಪ್ರಾರ್ಥಿಸಿಕೊಳ್ಳಬೇಕು. ತುರಿಕೆಗೆ ಕಹಿಬೇವಿನ ಸೊಪ್ಪನ್ನು ಅರೆದು ಹಚ್ಚಿದರೆ ವಾಸಿಯಾಗುತ್ತದೆ.

**ಗಾಯ:** ಗಾಯವು ರಕ್ತಸ್ರಾವವಾಗುತ್ತಿದ್ದರೆ ಅರಿಶಿಣ ಪುಡಿ ಹಾಕಬೇಕು. ಗಾಯವು ಬೇಗನೆ ವಾಸಿಯಾಗದಿದ್ದರೆ ಲೋಳೆಸರವನ್ನು ಕತ್ತರಿಸಿ ಗಾಯಕ್ಕೆ ಕಟ್ಟಬೇಕಾಗುತ್ತದೆ.

**ಜಂತುಹುಳು:** ಪಪ್ಪಾಯ ಕಾಯಿಯನ್ನು ತಿಂದರೆ ಜಂತುಹುಳು ಸತ್ತುಹೋಗುತ್ತವೆ.

**ವಾಂತಿ:** ವಾಂತಿಯಾಗುವ ಲಕ್ಷಣ ಕಂಡುಬಂದರೆ ಏಲಕ್ಕಿಕಾಳನ್ನು ಜಗಿಯಬೇಕು. ಅಥವಾ ಸಿಹಿ ಮಾದಲದ ಎಲೆಯನ್ನು ಸುಟ್ಟು ಮಜ್ಜಿಗೆ ಅಥವಾ ಹಾಲಿನಲ್ಲಿ ಬೆರೆಸಿ ಕುಡಿಯಬೇಕು. ಪದೇ ಪದೇ ವಾಂತಿ ಅಥವಾ ಭೇದಿಯಾದರೆ ಅಕ್ಕಿಯ ಗಂಜಿಯನ್ನು ಕುಡಿಸಬೇಕು.

**ಅಜೀರ್ಣ:** ಆಹಾರದಿಂದ ಅಜೀರ್ಣವಾದರೆ, ಹುಳಿತೇಗು ಬಂದರೆ, ಮೆಣಸು, ಬೆಳ್ಳುಳ್ಳಿ ಮತ್ತು ಬಜೆಯನ್ನು ಅರೆದು ನೀರಿನಲ್ಲಿ ಕುಡಿಸಬೇಕು.

**ನಾಯಿ ಕಚ್ಚಿದರೆ:** ನಾಯಿ ಕಚ್ಚಿದರೆ, ಹಂದಿರಕ್ತ, ಮೊಸರು, ಅವರೆಕಾಯಿ ಅಥವಾ ಸಜ್ಜೆ ತೆನೆಯ ಮೇಲೆ ಇರುವ ಮೈಮೇಲೆ ಹಸಿರು ಬಣ್ಣ ಇರುವ ಹುಳವನ್ನು ತಂದು ಮೂರನ್ನು ಅರೆದು ಕುಡಿಸಿದರೆ ನಾಯಿ ಕಡಿತವು ವಾಸಿಯಾಗುತ್ತದೆ.

**ನೆಗಡಿ:** ಈರುಳ್ಳಿಯನ್ನು ಸುಟ್ಟು ಬೆಲ್ಲದ ಜೊತೆಗೆ ತಿನ್ನಬೇಕು.

**ಬಂಜೆ ನಿವಾರಣೆ:** ಮದುವೆಯಾದ ಹೆಣ್ಣು ಮಕ್ಕಳು ಬಂಜೆಯಾಗಿದ್ದರೆ, ಪಚೇಲಿ ಸೊಪ್ಪನ್ನು ತಂದು ಅರೆದು ಕುಡಿದರೆ ಮಕ್ಕಳು ಆಗುತ್ತವೆ.

**ರತನ ಪುರುಸ್:** ರತನ್‌ಪುರುಸ್ ಎನ್ನುವ ಗಿಡದ ಸೊಪ್ಪನ್ನು ಒಣಗಿಸಿ ಪುಡಿ ಮಾಡಿ ನೀರಿಗೆ ಹಾಕಿದಾಗ ಬರುವ ಲೋಳೆ ತರದ ರಸವನ್ನು ಸೇವಿಸಿದರೆ ಪುರುಷನ ವೀರ್ಯವು ಗಟ್ಟಿಯಾಗುತ್ತದೆ.

**ಶೀಘ್ರ ಪ್ರಸವವಾಗುವುದು:** ಗರ್ಭಿಣಿಯರಿಗೆ ನೋವು ಕಾಣಿಸಿಕೊಂಡ ನಂತರ ಜೀರಿಗೆ ಪುಡಿಯನ್ನು ನೀರಿನಲ್ಲಿ ಕುದಿಸಿ ಬೆಣ್ಣೆಯನ್ನು ಹಾಕಿ ಕುಡಿಸಿದರೆ ಪ್ರಸವವು ಸುಲಭವಾಗುತ್ತದೆ.

**ಮದನ್‌ಮಸ್ತು:** ಪುರುಷನ ಸಂಭೋಗ ಸಾಮರ್ಥ್ಯವನ್ನು ಹೆಚ್ಚಿಸಲು ಈ ಔಷಧವನ್ನು ಬಳಸುತ್ತಾರೆ. ಕಡಲೆಹಿಟ್ಟನ್ನು ಸವರಿ ಮೀನಿನ ಮೇಲಿರುವ ಜಿಡ್ಡು ತೆಗೆದು, ಚೆನ್ನಾಗಿ ಒಣಗಿಸಿ ಗುಳಿಗೆಗಳನ್ನು ಮಾಡಿ ತಣ್ಣಗಿರುವ ಹಾಲಿನಲ್ಲಿ ಕರಗಿಸಿ ಏಳು ದಿನಗಳವರೆಗೆ ಕುಡಿದರೆ ನಪುಂಸಕತ್ವವನ್ನು ನಿವಾರಿಸಿ ಸಂಭೋಗ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ.

**ಆಹಾರ ಪದ್ಧತಿ:**

ಹಕ್ಕಿಪಿಕ್ಕಿ ಜನಾಂಗದವರು ಮೂಲತಃವಾಗಿ ಅಲೆಮಾರಿ ಜನಾಂಗವಾಗಿರುವುದರಿಂದಾಗಿ ಅವರು ಬಳಸುವ ಆಹಾರಗಳೂ ಕೂಡ ಅಲೆಮಾರಿತನವನ್ನು ಅವಲಂಬಿಸಿವೆ. ನೆಲೆನಿಂತ ಹಕ್ಕಿಪಿಕ್ಕಿಯರು ಒಂದೇ ಕಡೆ ಆಹಾರವನ್ನು ತಯಾರಿಸಿ ಸೇವಿಸುತ್ತಾರೆ. ಆದರೆ ಅಲೆಮಾರಿ ಹಕ್ಕಿಪಿಕ್ಕಿ ಜನಾಂಗದವರು ತಮ್ಮ ಬಡತನದ ಕಾರಣದಿಂದಾಗಿ ಭಿಕ್ಷೆಯನ್ನು ಬೇಡುವುದರ ಮೂಲಕ ಹಾಗೂ ಬೇಟೆಯಾಡುವುದರ ಮೂಲಕ ಇಲ್ಲವೇ, ವ್ಯಾಪಾರದ ಮೂಲಕ ತಮ್ಮ ಆಹಾರದ ಅಗತ್ಯತೆಗಳನ್ನು ಪೂರೈಸಿಕೊಳ್ಳುತ್ತಾರೆ. ಬೆಳಗ್ಗೆಯ ಸಮಯದಲ್ಲಿ ಹತ್ತಿರದ ಹೋಟೆಲುಗಳಿಗೆ ಹೋಗಿ ಕಾಫಿ, ಟೀ, ಸೇವಿಸುವುದು, ತಿಂಡಿಯನ್ನು ತಿನ್ನುವುದು ಮಾಡುತ್ತಾರೆ. ಹೆಂಗಸರು ಊರುಗಳಲ್ಲಿ ಭಿಕ್ಷೆ ಬೇಡುವುದರ ಮೂಲಕ ಆಹಾರ ಸಂಗ್ರಹಿಸಿ ಸೇವಿಸುತ್ತಾರೆ. ಗಂಡಸರು ಬೇಟೆಯಾಡಿ ಮಾಂಸವನ್ನು ತಂದರೆ ರಾತ್ರಿಯ ಹೊತ್ತು ಮಾಂಸಾಹಾರ ಅಡುಗೆಯನ್ನು ಮಾಡಿ ಸೇವಿಸುತ್ತಾರೆ. ಸಾಮಾನ್ಯವಾಗಿ ಹಕ್ಕಿಪಿಕ್ಕಿಯರು ಪ್ರತಿದಿನ ಯಾವುದಾದರೊಂದು ಪ್ರಾಣಿ ಇಲ್ಲವೇ ಪಕ್ಷಿಯನ್ನು ಬೇಟೆಯಾಡಿ ಮಾಂಸಾಹಾರವನ್ನು ಸೇವಿಸುತ್ತಾರೆ. ಹಕ್ಕಿಪಿಕ್ಕಿಯರು ತಿನ್ನುವಷ್ಟು ಬಗೆಬಗೆಯ ಆಹಾರವನ್ನು ಬಹುಶಃ ಬೇರಾವ ಜನಾಂಗವೂ ತಿನ್ನಲಾರದು. ಅವರ ಸಸ್ಯಾಹಾರ ಪದ್ಧತಿ ಮುಖ್ಯವಾಗಿ ಔಷಧಿಯುಕ್ತವಾದುದು. ಇದಕ್ಕೆ ಕಾರಣ ಹಕ್ಕಿಪಿಕ್ಕಿಯರ ಮುಖ್ಯಕಸುಬುಗಳಲ್ಲಿ ವೈದ್ಯಪದ್ಧತಿಯೂ ಒಂದು.[೧೩]

**ಸಸ್ಯಾಹಾರಗಳು:** ಹಕ್ಕಿಪಿಕ್ಕಿಯರು ಸಾಮಾನ್ಯವಾಗಿ ಎಲ್ಲಾ ಜನಾಂಗದವರು ಬಳಸುವಂತಹ ಮುದ್ದೆ, ರೊಟ್ಟಿ, ಅನ್ನ, ಸಾರು, ಇಡ್ಲಿ, ಚಿತ್ರಾನ್ನ, ಪಾಯಸ, ಚಟ್ನಿ, ಉಪ್ಪಿಟ್ಟು ಇತ್ಯಾದಿಗಳನ್ನು ಬಳಸುತ್ತಾರೆ. ಸ್ಥಳೀಯವಾಗಿ ಹಾಗೂ ನಗರಗಳಲ್ಲಿ ದೊರಕುವ ತರಕಾರಿಗಳನ್ನು ಅಡುಗೆಗಾಗಿ ಬಳಸುತ್ತಾರೆ. ಕಾಡಿನಲ್ಲಿ ಸಿಗುವ ದೇವದಾರಿನಿ ಬಾಜಿಯಿಂದ ಸಾರು ತಯಾರಿಸಿ ಹೆಚ್ಚಾಗಿ ಬಳಸುತ್ತಾರೆ. ಪಂಬೊಡಾನಿಬಾಜಿ(ಶೇಂಗಾ ಸೊಪ್ಪಿನ ರೀತಿಯದ್ದು) ಅಂಬೊಡಾನಿ ಬಾಜಿ(ಹುಳಿಸೊಪ್ಪು) ಗೌಡರ ಗುಮ್ಮ(ತುಂಬೆಸೊಪ್ಪು) ಕಾಗಲಾನಿ ಬಾಜಿ(ದೊಡ್ಡ ಕನ್ನಸೊಪ್ಪು) ಕಾಟಾನಿಬಾಜಿ(ಮುಳ್ಳು ಸೊಪ್ಪು) ಮುಂಗ್ಯಾನಿಬಾಜಿ(ನುಗ್ಗೆಸೊಪ್ಪು) ಮುಂತಾದ ಸೊಪ್ಪುಗಳನ್ನು ಬಳಸುತ್ತಾರೆ. ಕ್ಯಾರೇಟ್, ಮೂಲಂಗಿ, ಈರೇಕಾಯಿ, ಸೂರೇಕಾಯಿ, ಬದನೆಕಾಯಿ, ಪುದೀನ, ಬಹೋಪ್‌ಳು(ಕುಂಬಳ), ಗೋಬಿ(ಹೂಕೋಸು), ಲೋಭಿಯೊ(ಹಲಸಂದೆ) ಬಲ್ಲರ್(ಆವರೆಕಾಳು), ಕಾಳಿ ಮಂಜೀರು(ಜೀರಿಗೆ), ಕಸ್‌ಕಸ್(ಗಸಗಸೆ), ಲೊಂಗೊಪಟೆ(ಲವಂಗ ಚಕ್ಕೆ), ಮಖಾಲೋ(ಕೊತ್ತಂಬರಿ ಬೀಜ), ಮಿಠ್ಠುತೇಲ್ (ಒಳ್ಳೆಣ್ಣೆ), ಬಿಲ್ಲಾತಿ(ಶೇಂಗಾ) ಖಾರೇಳೊ(ಕುರೆಸಗಣಿ ಉಚ್ಚೆಳ್ಳು) ತಿಲ್ಲಿ(ಎಳ್ಳು), ನಾರೇಳ್(ತೆಂಗು) ಲಖಾಣು(ಬೆಳ್ಳುಳ್ಳಿ) ಖಾಂದೋ(ಈರುಳ್ಳಿ) ಮುಂತಾದವುಗಳನ್ನು ಬಳಸುತ್ತಾರೆ. ಹುರುಳಿ, ಅಲಸಂದೆ, ಇತ್ಯಾದಿ ಕಾಳುಗಳು, ಎಳ್ಳು, ಕಾರೆಳ್ಳು, ಚಕ್ಕೆ, ಲವಂಗ, ಬೀಜ, ಇತ್ಯಾದಿ ಪದಾರ್ಥಗಳನ್ನು ಬಳಸುತ್ತಾರೆ.

**ಮಾಂಸದ ಆಹಾರಗಳು:** ಹಕ್ಕಿಪಿಕ್ಕಿ ಜನಾಂಗದವರು ಮಾಂಸಪ್ರಿಯರು, ಇವರ ಮೂಲ ವೃತ್ತಿ ಬೇಟೆಯಾಗಿರುವುದರಿಂದ ಸಹಜವಾಗಿಯೇ ಮಾಂಸದ ಆಹಾರಗಳನ್ನು ಇಷ್ಟಪಟ್ಟು ತಿನ್ನುತ್ತಾರೆ. ಹಕ್ಕಿಪಿಕ್ಕಿಯರು ವಿವಿಧ ರೀತಿಯ ಮಾಂಸದಿಂದ ತಯಾರಿಸಿದ ಆಹಾರಗಳನ್ನು ಸೇವಿಸುತ್ತಾರೆ. ವೈವಿಧ್ಯಮಯ ಮಾಂಸಾಹಾರಗಳನ್ನು ಇವರು ಸೇವಿಸುತ್ತಾರೆ.

| | |
|---|---|
| ಮುರಗಾನಿ ಬೋಟಿ | – ಕೋಳಿಮಾಂಸ |
| ಮೇಡಾನಿಕಿ ಬೋಟಿ | – ಕುರಿಮಾಂಸ |
| ಭೋಕತಾನಿ ಬೋಟಿ | – ಆಡಿನ ಮಾಂಸ |
| ಭೇಖೊನಿ ಬೋಟಿ | – ಕೋಣದ ಮಾಂಸ |
| ಗೇರಜಾನಿ ಬೋಟಿ | – ಕಾಡುಹಕ್ಕಿ ಮಾಂಸ |
| ಧಾತಿನಿ ಬೋಟಿ | – ಮೊಲದ ಮಾಂಸ |
| ತೀತರೊನಿ ಬೋಟಿ | – ಗೌಜನಹಕ್ಕಿ ಮಾಂಸ |
| ಬಿಲ್ಲಾತಾನಿ ಬೋಟಿ | – ಕಾಡುಬೆಕ್ಕಿನ ಮಾಂಸ |
| ಮುಂಗಶ್ಸ್ ಬೋಟಿ | – ಮುಂಗಸಿ ಮಾಂಸ |
| ನೋರೀನಿ ಬೋಟಿ | – ಗುಳ್ಳೆನರಿ ಮಾಂಸ |
| ಗರದ್‌ನಿ ಬೋಟಿ | – ರಣಹದ್ದಿನ ಮಾಂಸ |
| ಜಹಕ್‌ನೀ ಬೋಟಿ | – ಕತ್ತೆ ಕಿರುಬನ ಮಾಂಸ |
| ಡಿಗಾಡೋನಿ ಬೋಟಿ | – ನವಿಲು ಮಾಂಸ |
| ಲೋಖಡ್‌ನಿ ಬೋಟಿ | – ಸಣ್ಣನರಿ(ಹಕ್ಕನರಿ) ಮಾಂಸ |
| ಟೀಹರ ಕಿನಿ ಬೋಟಿ | – ಟಿಟ್ಟಿಭ ಹಕ್ಕಿ ಮಾಂಸ |
| ರುದ್‌ನಿ ಬೋಟಿ | – ಗಂಡು ಹಕ್ಕಿ 'ಹೂ' ಎಂದು ಹೆಣ್ಣು ಹಕ್ಕಿ 'ಆ' ಎಂದು ಕೂಗುವ ಹಕ್ಕಿಗಳ ಮಾಂಸ |
| ಹಿಲೊಯ್‌ನಿ ಬೋಟಿ | – ಸೋರಕ್ಕಿ ಮಾಂಸ(ಗುಬ್ಬಿಜಾತಿ) |
| ಕೇಬರ್‌ನಿ ಬೋಟಿ | – ಗೊರವಂಕನ ಮಾಂಸ |
| ಚಕತಾಂಡೊ ಬೋಟಿ | – ಸಣ್ಣಗೂಜಿ ಮಾಂಸ(ಹಾಲಕ್ಕಿ) |
| ಗಿಲ್ಲೋರಿ ಬೋಟಿ | – ಅಳಿಲು ಮಾಂಸ |
| ಗೋಯಿನಿ ಬೋಟಿ | – ಉಡದ ಮಾಂಸ |
| ಶಾವ್ ಮರಗನಿ ಬೋಟಿ | – ನೀರುಕೋಳಿ ಮಾಂಸ(ಕರಿತಲೆ) |
| ಕಕರಾಣಿ ಬೋಟಿ | – ಕರಿಕೊಕ್ಕರೆ ಮಾಂಸ |
| ಕೊಂಗಾಣಿ ಬೋಟಿ | – ಬಿಳಿಕೊಕ್ಕರೆ ಮಾಂಸ |
| ರಾತಲ್‌ನಿ ಬೋಟಿ | – ಕೆಂಪುತಲೆ ಹದ್ದಿನ ಮಾಂಸ |

| | |
|---|---|
| ದೌಳುಹುನಿ ಬೋಟಿ | – ಗರುಡನ ಮಾಂಸ |
| ಗುಗ್ಗೂನಿ ಬೋಟಿ | – ಗೂಬೆ ಮಾಂಸ |
| ಜಂಗಳಿ ಡೂಕರ್‌ನಿ ಬೋಟಿ | – ಕಾಡುಹಂದಿ ಮಾಂಸ |
| ಮಾತ್ಸುಲುನಿ ಬೋಟಿ | – ಮೀನು |
| ಖೇಕಡೋನಿ ಬೋಟಿ | – ಏಡಿ ಮಾಂಸ |
| ಬತಕ್‌ನಿ ಬೋಟಿ | – ಬಾತುಕೋಳಿ ಮಾಂಸ |
| ಜಂಗಳಿ ಮುರಗಾನಿ ಬೋಟಿ | – ಕಾಡುಕೋಳಿ ಮಾಂಸ |
| ಕಡವೆ ಬೋಟಿ | – ಕಡವೆ ಮಾಂಸ |
| ಚಾರಿನಿ ಬೋಟಿ | – ಕಾಡುಮೇಕೆ ಮಾಂಸ |
| ಹರಣ್‌ಯಿ ಬೋಟಿ | – ಜಿಂಕೆ ಮಾಂಸ |
| ಪುಲೆತ್ರೊ ಬೋಟಿ | – ಗೌಜ(ಹಕ್ಕಿಯ ಒಂದು ಜಾತಿ)ದ ಮಾಂಸ |
| ಶಕತ್ರೊನಿ ಬೋಟಿ | – ಗೆದ್ದಲ ಕೋಳಿ ಮಾಂಸ(ಚಿಟ್ ಕೋಳಿ) |
| ಪಪೋಯ್ ಬೋಟಿ | – ಆಲದ ಮರದಲ್ಲಿರುವ ಕಾಡುಹಕ್ಕಿ ಮಾಂಸ |
| ಟೂರೂನಿ ಬೋಟಿ | – ಪುರ್ಲಕ್ಕಿ ಮಾಂಸ(ಸಣ್ಣ ಹಕ್ಕಿ) |
| ಗುಣದ್ ಬೋಟಿ | – ಹದ್ದಿನ ಮಾಂಸ |
| ಶಾಂಡನಿ ಬೋಟಿ | – ಗಾಳಿಉಡದ ಮಾಂಸ |
| ಪೊಗರೋನಿ ಬೋಟಿ | – ಮಳೆಚಿಟ್ಟೆ ಮಾಂಸ |
| ತಾಂಬೇಲ್ ಬೋಟಿ | – ಆಮೆ ಜಾತಿಯ ಮಾಂಸ |
| ಕಾಚರ್‌ನಿ ಬೋಟಿ | – ಆಮೆ ಮಾಂಸ |
| ಕವಲೆ ಮಾಂಜೂರ್ | – ಒಂದು ಬಗೆಯ ಉಡದ ಮಾಂಸ. |
| ಮಗರ್‌ನಿ ಬೋಟಿ | – ಮೊಸಳೆ ಮಾಂಸ |
| ಪಾಣುಮಾನು ಖುತ್ರ್ಯಾನಿ ಬೋಟಿ | – ನೀರುನಾಯಿ ಮಾಂಸ |
| ಮಿಶ್‌ಕ್ ಬಿಲ್ಲೈನಿ ಬೋಟಿ | – ಪುನಗಿನ ಬೆಕ್ಕಿನ ಮಾಂಸ |
| ಬಿಲ್ಲಾಡಿನಿ ಬೋಟಿ | – ಬೆಕ್ಕಿನ ಮಾಂಸ |
| ಗೂಖ್‌ನಿ ಬೋಟಿ | – ಹೆಗ್ಗಣದ ಮಾಂಸ |
| ಉಂದುರುನಿ ಬೋಟಿ | – ಇಲಿ ಮಾಂಸ |
| ದನ್‌ಶೂಡೊ | – ಒಂದು ಬಗೆಯ ದೊಡ್ಡ ಹಕ್ಕಿ ಮಾಂಸ |
| ಚಿಕ್ಪಲ್ ಬೋಟಿ | – ಸಣ್ಣಗುಬ್ಬಿ ಮಾಂಸ |
| ಚುರುಕಲ್ಯು | – ಗುಬ್ಬಿ ಮಾಂಸ |
| ಕಕರಾಣಿ ಬೋಟಿ | – ನೀರುಹಕ್ಕಿ ಮಾಂಸ |

| | | |
|---|---|---|
| ವಖ್‌ವಾಗಳ್ ಬೋಟಿ | – | ಜೋಲುಬೀಲೊ ಹಕ್ಕಿ ಮಾಂಸ |
| ಜಿಂಗೊನಿ ಬೋಟಿ | – | ಶೀಗಡಿ |
| ಪರ್ಯಾವೊ ಬೋಟಿ | – | ಪಾರಿವಾಳದ ಮಾಂಸ |
| ಪನ್‌ಕುಕ್ಕಡಿ | – | ಒಂದು ಬಗೆಯ ಹಕ್ಕಿ ಮಾಂಸ |
| ಲಕ್ಕಡ್ ಪೋಡ್‌ನಿ ಬೋಟಿ | – | ಮರಕುಟಿಕ ಹಕ್ಕಿಮಾಂಸ |
| ಗೇಂಗಾಳಿ ಬೋಟಿ | – | ಒಂದು ಜಾತಿಯ ಹಕ್ಕಿ |
| ಭೂಂಗರ್‌ನಿ ಬೋಟಿ | – | ಕಾಡುಬೆಕ್ಕಿನ ಮಾಂಸ |

**ಉಡುಗೆ ತೊಡುಗೆಗಳು:** ಹಕ್ಕಿಪಿಕ್ಕಿ ಜನಾಂಗದವರ ವೇಷ ಭೂಷಣಗಳು ಇತರೇ ಬುಡಕಟ್ಟು ಜನಾಂಗಗಳ ರೀತಿಯಲ್ಲಿ ನಿಗದಿತವಾಗಿಲ್ಲ. ಸಂದರ್ಭಕ್ಕೆ ಅನುಸಾರವಾಗಿ, ಹವಾಮಾನ ಪರಿಸ್ಥಿತಿಗಳಿಗೆ ಅನುಗುಣವಾಗಿ ಬಟ್ಟೆಗಳನ್ನು ಧರಿಸುತ್ತಾರೆ. ಹಕ್ಕಿಪಿಕ್ಕಿಯರು ಧರಿಸುವ ಬಟ್ಟೆಗಳು ಸಾಮಾನ್ಯವಾಗಿ ಇರುತ್ತವೆ. ಕಾರಣವೇನೆಂದರೆ, ಇವರು ಧರಿಸುವ ಬಟ್ಟೆಗಳಿಗೆ ಯತೇಚ್ಛವಾಗಿ ಹಣವನ್ನು ಖರ್ಚು ಮಾಡುವುದಕ್ಕೆ ಆರ್ಥಿಕವಾಗಿ ಸಬಲರಾಗಿ ಇರುವುದಿಲ್ಲ. ಸಾಮಾಜಿಕ ಪರಿಸ್ಥಿತಿ, ಧಾರ್ಮಿಕ ಪರಿಸ್ಥಿತಿಗೆ ತಕ್ಕಂತೆ ಇವರು ಬಟ್ಟೆಗಳನ್ನು ಧರಿಸುತ್ತಾರೆ, ಗಂಡಸರು ಬೇಟೆಗೆ ಹೋದರೆ ಪಿಚ್ಹೋರಿ (ಕಚ್ಚೆ)ಯನ್ನು ಧರಿಸುತ್ತಾರೆ. ಪಟ್ಟಣ, ನಗರ ಪ್ರದೇಶಗಳಿಗೆ ಹೋಗುವಾಗ, ಬೇರೆ ಊರುಗಳಿಗೆ ಹೋಗುವಾಗ ರೈತರ ರೀತಿಯಲ್ಲಿ ಪಂಚೆ ಮತ್ತು ಅಂಗಿಯನ್ನು ಧರಿಸುತ್ತಾರೆ. ಸಾಮಾನ್ಯವಾಗಿ ನಗರ ಪಟ್ಟಣಗಳ ಸಂಪರ್ಕವಿರುವ ಯುವಕರು ಪ್ಯಾಂಟ್ ಮತ್ತು ಶರ್ಟ್‌ಗಳನ್ನು ಹಾಕುತ್ತಾರೆ. ಗಂಡಸರು ಸಾಮಾನ್ಯವಾಗಿ ತಲೆಗೆ ಬಾಲದ ಪೇಟ, ಮುಂಡಾಸು, ಪಂಚೆಯನ್ನು ಮದುವೆಯ ಸಂದರ್ಭಗಳಲ್ಲಿ ಧರಿಸುತ್ತಾರೆ. ಕೋಟು, ಪ್ಯಾಂಟು, ಟೈಗಳನ್ನೂ ಧರಿಸುತ್ತಾರೆ. ದೇವರುಗಳನ್ನು ಪೂಜಿಸುವ ಸಂದರ್ಭದಲ್ಲಿ ದಪ್ಪನೆಯ ಬಣ್ಣದ ಬಟ್ಟೆಯನ್ನು ಸ್ಕರ್ಟ್ ರೀತಿಯಲ್ಲಿ ಉಟ್ಟುಕೊಳ್ಳುತ್ತಾರೆ. ಸೊಂಟಕ್ಕೆ ಗೆಜ್ಜೆ ಪಟ್ಟಿಯನ್ನು ಕಟ್ಟಿಕೊಳ್ಳುತ್ತಾರೆ. ದೇಶ–ವಿದೇಶಗಳ ಸಂಪರ್ಕವಿರುವ ಹಕ್ಕಿಪಿಕ್ಕಿಯರು ಇಂದಿನ ಆಧುನಿಕ ಜೀವನ ಶೈಲಿಯ ಎಲ್ಲಾ ರೀತಿಯ ಉಡುಪುಗಳನ್ನೂ ಧರಿಸುತ್ತಾರೆ.

ಹಕ್ಕಿಪಿಕ್ಕಿ ಹೆಂಗಸರು ಸರಳವಾದ ಉಡುಪುಗಳನ್ನು ಧರಿಸುತ್ತಾರೆ. ಹಕ್ಕಿಪಿಕ್ಕಿ ಹೆಂಗಸರ ಒಂದು ಹೇಳಿಕೆ ಸಾಮಾನ್ಯವಾಗಿದೆ. ಅದೇನೆಂದರೆ, ಹಕ್ಕಿಪಿಕ್ಕಿ ಹೆಂಗಸಿಗೆ ಒಂದು ಸೀರೆಯನ್ನು ಕೊಟ್ಟರೆ, ಅದನ್ನು ನಾಲ್ಕು ತುಂಡುಗಳಾನ್ನಾಗಿ ಮಾಡಿಕೊಂಡು ಒಂದು ತುಂಡನ್ನು(ಘಾಗ್ನು–ಲಂಗ) ಸೊಂಟದ ಕೆಳಭಾಗಕ್ಕೆ ಲಂಗವಾಗಿಯೂ, ಒಂದು ತುಂಡನ್ನು ಎದೆಯ ಭಾಗಕ್ಕೆ ಜಾಕೆಟ್(ಕಾಂಚಲಿ) ಆಗಿಯೂ, ಒಂದು ತುಂಡನ್ನು ಹಣೆ ಸೇರಿದಂತೆ ತಲೆಗೆ(ಚೂರೊ) ಕಟ್ಟುತ್ತಾರೆ. ಕೊನೆಯ ತುಂಡನ್ನು ಮಗುವಿಗೆ ಜೋಲಿಗೆಯಾಗಿ ಬಳಕೆ ಮಾಡುತ್ತಾರೆ. ಸಾಮಾನ್ಯವಾಗಿ ಸೀರೆ ಕುಪ್ಪಸ, ಲಂಗವನ್ನು ಧರಿಸುತ್ತಾರೆ. ಲಂಗದಾವಣಿ, ಕುಪ್ಪಸವನ್ನು ಧರಿಸುತ್ತಾರೆ. ವಿವಿಧ ಬಗೆಯ ಬಣ್ಣದ ಸೀರೆಗಳನ್ನು ಉಟ್ಟುಕೊಳ್ಳುತ್ತಾರೆ. ಶಾಲೆಗೆ ಹೋಗುವ ಮಕ್ಕಳು ಅಂಗಿ ಚಡ್ಡಿಯನ್ನು ಹಾಕುತ್ತಾರೆ. ಬಹುತೇಕ ಮಕ್ಕಳು ಬೆತ್ತಲೆಯಾಗಿ ಇರುತ್ತವೆ.

**ಆಭರಣಗಳು:** ಹಕ್ಕಿಪಿಕ್ಕಿಯರು ಆಭರಣಗಳನ್ನು ಧರಿಸುವುದಲ್ಲಿ ಸರಳವಾಗಿರುತ್ತಾರೆ. ಹಬ್ಬ ಹರಿದಿನಗಳಲ್ಲಿ ಬಣ್ಣ ಬಣ್ಣದ ಆಭರಣಗಳನ್ನು ಧರಿಸುತ್ತಾರೆ. ಯುವಕರು ಕೊರಳಿಗೆ ಮೂರು ಹವಳ ಪೋಣಿಸಿದ ಸರವನ್ನು ಹಾಕುತ್ತಾರೆ. ಹುಲಿಯ ಉಗುರನ್ನು ಧರಿಸುತ್ತಾರೆ. ಕೈಗೆ ಕೈಬಳೆ, ಬಲಗೈ ಅಥವಾ ಎಡಗೈಗಳಿಗೆ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ. ಗಂಡಸರು ಕಿವಿಗೆ ಹಂತಿ (ರಿಂಗ್) ಎನ್ನುವ ಓಲೆಯನ್ನು, ಅಂಗುಟಿ ಎನ್ನುವ ಬೆರಳ ಉಂಗುರವನ್ನು ಧರಿಸುತ್ತಾರೆ. ಹಕ್ಕಿಪಿಕ್ಕಿಯರ ಹೆಣ್ಣು ದೇವರು ಬೆಳ್ಳಿಯಿಂದ ಮಾಡಿರುತ್ತಾರೆ. ಯಾವ ಹಕ್ಕಿಪಿಕ್ಕಿ ಹೆಂಗಸರೂ ಬೆಳ್ಳಿಯ ಆಭರಣಗಳನ್ನು ಸೊಂಟದ ಕೆಳಗಿನ ಅಂಗಗಳಿಗೆ ಧರಿಸುವುದಿಲ್ಲ. ಬೆಳ್ಳಿಯನ್ನು ಧರಿಸಿದರೆ ದೇವರಿಗೆ ಅವಮಾನ ಮಾಡಿದಂತೆ ಎನ್ನುವ ನಂಬಿಕೆ ಇದೆ. ಮದುವೆಯಾದ ಹೆಂಗಸರು ಕೊರಳಿಗೆ ಕಪ್ಪುಸರವನ್ನು ಹಾಕಿಕೊಳ್ಳುತ್ತಾರೆ. ಇದಕ್ಕೆ ಕಾಲಿಪ್ಪಾಟು ಎಂದು ಕರೆಯುತ್ತಾರೆ. ಇದನ್ನು ಮದುವೆ ಸಂದರ್ಭದಲ್ಲಿ ಗಂಡು ಮತ್ತು ಹೆಣ್ಣಿಗೆ ಕಟ್ಟಿರುವಂತಹ ಬಂಧ ಆಗಿರುತ್ತದೆ. ಹೆಂಗಸರು ಮೂಗಿಗೆ ಟಿಕಲಿ, ಕಿವಿಗೆ ಕಾಪು, ಕಿವಿಯ ಮೇಲ್ಭಾಗಕ್ಕೆ ಕೊಪ್ಪು, ವಾಳಿ(ರಿಂಗ್), ಮಧ್ಯಕಿವಿಗೆ ಶ್ರೀದೇವಿ (ಚಿಕ್ಕಸ್ಟಾರ್), ಕೊರಳಿಗೆ ಮಧ್ಯಕ್ಕೆ ಒಂದು ಹವಳ ಅಕ್ಕಪಕ್ಕ ಬಂಗಾರದ ಗುಂಡುಗಳನ್ನು ಸೇರಿಸಿ ಮಾಡಿಸಿಕೊಂಡು ಸರವನ್ನು ಹಾಕಿಕೊಳ್ಳುತ್ತಾರೆ. ಅಲ್ಲದೆ ಚಿಕ್ಕ ಶಂಖಗಳ ಸರವನ್ನು ಧರಿಸುತ್ತಾರೆ. ಕೈಗಳಿಗೆ ಅಪರೂಪಕ್ಕೊಮ್ಮೆ ಖಾಖಣಿ(ಬೆಳ್ಳಿಯ ಬಳೆ)ಯನ್ನು ಹಾಕಿಕೊಳ್ಳುತ್ತಾರೆ. ಹಿತ್ತಾಳೆಯಿಂದ ಮಾಡಿದ ಜಡೆಬಿಲ್ಲೆಯನ್ನು ಹಾಕಿಕೊಳ್ಳುತ್ತಾರೆ.

### ೪.೮. ಭಾಷೆ ಮತ್ತು ಸಾಹಿತ್ಯ

ಹಕ್ಕಿಪಿಕ್ಕಿ ಜನಾಂಗದವರು ಮಾತನಾಡುವ ಭಾಷೆಗೆ ಲಿಪಿ ಇಲ್ಲ. ಈ ಭಾಷೆಯು ಇಂಡೋ ಆರ್ಯನ್ ಭಾಷೆಯಾಗಿದೆ ಎಂದು ಭಾಷಾ ತಜ್ಞರು ಹೇಳುತ್ತಾರೆ. ಹಕ್ಕಿಪಿಕ್ಕಿಯರು ತಮ್ಮನ್ನು ವಾಗರಿಗಳೆಂದು ಕರೆದುಕೊಳ್ಳುತ್ತಾರೆ. ಹಕ್ಕಿಪಿಕ್ಕಿಯರು ಮಾತನಾಡುವ ಭಾಷೆಯನ್ನು 'ವಾಗರಿಯೊ' (ವಾಗ್ರಿ) ಎಂದು ಹೇಳಲಾಗುತ್ತದೆ. ಈ ವಾಗ್ರಿ ಭಾಷೆಯು ಒಂದು ಮಿಶ್ರಣ ಭಾಷೆಯಾಗಿದೆ. ಗುಜರಾತಿ, ರಾಜಸ್ಥಾನಿ, ಹಿಂದಿ, ಮರಾಠಿ, ಭಾಷೆಗಳ ಶಬ್ದಗಳು ಹೆಚ್ಚಿನ ಸಂಖ್ಯೆಯಲ್ಲಿ ಬಳಸಲ್ಪಡುತ್ತವೆ. ವಾಕ್ಯರಚನೆ ಮತ್ತು ವ್ಯಾಕರಣವನ್ನು ನೋಡಿದಾಗ ಇಂಡೋ ಆರ್ಯನ್ ಭಾಷೆಯ ಲಕ್ಷಣಗಳು ವಾಗ್ರಿಭಾಷೆಯಲ್ಲಿ ಹೆಚ್ಚಾಗಿ ಕಾಣುತ್ತವೆ. ಹಕ್ಕಿಪಿಕ್ಕಿ ಸಮುದಾಯದವರು ತಮ್ಮ ನಡುವೆ ಸಾಮಾನ್ಯವಾಗಿ ಬಳಸುವುದನ್ನು ಕಾಣಬಹುದಾಗಿದೆ. ಉತ್ತರ ಭಾರತದಿಂದ ವಲಸೆ ಬಂದಂತಹ ಈ ಸಮುದಾಯವು ದೇಶದ ಬೇರೆ ಬೇರೆ ಭಾಗಗಳಿಗೆ ವಿಸ್ತರಿಸಿದಾಗ ಇವರ ಭಾಷೆಯ ಜೊತೆಯಲ್ಲಿ ಅನೇಕ ಇತರೇ ಭಾಷೆಗಳ ಪ್ರಭಾವ ಆಗಿರುವುದು ಕಂಡುಬರುತ್ತದೆ. ಹಕ್ಕಿಪಿಕ್ಕಿಯರು ಬದುಕಿನ ಅನಿವಾರ್ಯತೆಗಾಗಿ ಬೇರೆ ಭಾಷೆ ಮಾತನಾಡುವ ಕನ್ನಡ, ತೆಲುಗು, ತಮಿಳು, ಮಲೆಯಾಳಿ ಇತ್ಯಾದಿ ಭಾಷೆಗಳನ್ನು ಮಾತನಾಡುತ್ತಾರೆ. ತಮ್ಮ ಭಾಷೆಯಾದ 'ವಾಗ್ರಿ'ಯ ಜೊತೆಗೆ 'ಹಿಂದಿ' ಮಾತನಾಡುತ್ತಾರೆ. ಕರ್ನಾಟಕದಲ್ಲಿನ ಹಕ್ಕಿಪಿಕ್ಕಿ ಜನಾಂಗದ 'ವಾಗರಿ' ಭಾಷೆಯ ಮೇಲೆ ಕನ್ನಡ ಭಾಷೆಯ ಪ್ರಭಾವ ಹೆಚ್ಚಾಗಿದೆ. ಅಲ್ಲದೇ ಅವರು ಮಾತನಾಡುವ ಕನ್ನಡ ಭಾಷೆಯೂ ಕೂಡ 'ವಾಗರಿ' ಭಾಷೆಯಿಂದ ಪ್ರಭಾವವನ್ನು ಹೊಂದಿದೆ.

## ಶಬ್ಧಕೋಶ

### ೧. ಸಂಬಂಧವಾಚಕ ಪದಗಳು ಮತ್ತು ಸರ್ವನಾಮಗಳು

| | | |
|---|---|---|
| ಯೊ | – | ಅವನು |
| ಯೊ ಚೊಕರಿ | – | ಅವಳು |
| ಯೊ | – | ಅವರು |
| ಐರುತೆ | – | ಇವನ |
| ಐರಿತೆ | – | ಇವಳು |
| ಅವಣೆಖಾರು | – | ಇವರು |
| ಬಾ | – | ಅಪ್ಪ |
| ಆಯ | – | ಅಮ್ಮ |
| ಮೋಟೊಬೈ | – | ಅಣ್ಣ |
| ನಾನೂಬೈ | – | ತಮ್ಮ |
| ಮೊಟಿಬೆಹನ್ | – | ಅಕ್ಕ |
| ನಾನಿ ಬೆಹನ್ | – | ತಂಗಿ |
| ಕಾಕ | – | ದೊಡ್ಡಪ್ಪ |
| ಕಾಕಿ | – | ದೊಡ್ಡಮ್ಮ |
| ನೂನುಕಾಕ | – | ಚಿಕ್ಕಪ್ಪ |
| ನಾನಿ ಕಾಕಿ | – | ಚಿಕ್ಕಮ್ಮ |
| ತ್ಸೊಕರು | – | ಮಗು |
| ಚ್ಚೇಯೊ | – | ಮಗ |
| ಚ್ಚೋರಿ | – | ಮಗಳು |
| ಫುಯ್ಯಿ | – | ಅತ್ತೆ |
| ಮಾಮ | – | ಮಾವ |
| ವಹೂ | – | ಸೊಸೆ |
| ಖಾಳಿ | – | ನಾದಿನಿ |
| ಚೊಸ್ಸಯಿ | – | ಅತ್ತಿಗೆ |

### ೨. ಶರೀರದ ಅಂಗಗಳು

| | | |
|---|---|---|
| ಹಥೇಳಿ | – | ಅಂಗೈ |
| ಡುಕುಣಿ | – | ಮೊಣಕೈ |
| ಪೀಠ್ | – | ಬೆನ್ನು |

| | | |
|---|---|---|
| ನ್ಯಾಥಿ | – | ಎದೆ |
| ಪೇಟ್ | – | ಹೊಟ್ಟೆ |
| ಖಂಬರ್ | – | ಸೊಂಟ |
| ಜಾಂಗ್ | – | ತೊಡೆ |
| ಗೊಡೊ | – | ಕಾಲು |
| ಹಾತ್ | – | ಕೈ |
| ಕಾನ್ | – | ಕಿವಿ |
| ನಾಕ್ | – | ಮೂಗು |
| ಡೋಳೊ | – | ಕಣ್ಣು |
| ಮುಡಿಕ್ಯು | – | ತಲೆ |
| ಪಾಪಣ್ | – | ರೆಪ್ಪೆ |
| ಗಾಲ್ | – | ಕೆನ್ನೆ |
| ತಾಳ್ವು | – | ಹಣೆ |
| ಪಾಖಳಿ | – | ಪಕ್ಕೆ |
| ಬೊಂಬಿ | – | ಒಕ್ಕುಳ |
| ಪಖ್ತೇಳಿ | – | ಅಂಗಾಲು |
| ಗೊಡಾನಿ ಡುಕಣಿ | – | ಮೊಣಕಾಲು |
| ಖೇಶ್ | – | ಕೂದಲು |
| ಘಲೆಂಡಿ | – | ಕುತ್ತಿಗೆ |
| ಚಾಮ್ಡು | – | ಚರ್ಮ |
| ನಖ್ಬರ್ | – | ಉಗುರು |
| ಅಂಗ್ಳಿ | – | ಬೆರಳು |
| ಪಾಪಣ್ ಖೇಶ್ | – | ಕಣ್ಣುಬ್ಬಿನ ಕೂದಲು |
| ಕಾಲ್ಜು | – | ಹೀರಿ (ಲಿವರ್) |
| ಚೀಯ್ಯು | – | ಕಣ್ಣೊಳಗಿನ ಗುಡ್ಡೆ |
| ಗುಂಗೊ | – | ಗುಗ್ಗೆ |
| ಗೇಸೊ | – | ಪಿಸರು |
| ಆಂಜು | – | ಕಣ್ಣೀರು |
| ಸಿಂಬಲ್ಡೊ | – | ಗೊಣ್ಣೆ |
| ನೆಹಟೊ | – | ಗಂಟಲು |

| | | |
|---|---|---|
| ಹೋಟ್ | – | ತುಟಿ |
| ಜೀಬ್ | – | ನಾಲಿಗೆ |
| ಧಾಡ್ | – | ದವಡೆ |
| ಧಾತ್ | – | ಹಲ್ಲು |
| ಡಾಡಿ | – | ಗಲ್ಲ (ಗಡ್ಡ) |
| ಮುಚ್ಚೆ | – | ಮೀಸೆ |
| ಡೋಬೊ | – | ಕಣ್ಣು ಹುಬ್ಬು |
| ನಾರ್ | – | ನರ |
| ಹೊಜಡಿ | – | ಬೋಟಿ (ದೊಡ್ಡಕರುಳು) |
| ಅಥಲ್ಡಿ | – | ಕರುಳು |
| ಲೊಹಿ | – | ರಕ್ತ |
| ಬುಕ್ | – | ಹೃದಯ |
| ಪೇಪಡು | – | ದೊಮ್ಮೆ |
| ಪಿತ್ತು | – | ವಿಷದಗಂಟು |
| ಬಿಶ್ಯಾ | – | ಚರ್ಬಿ |
| ಚಾತ್ತೀನಾ ಖೇಶ್ | – | ಎದೆಯ ಕೂದಲು |
| ಬಗಲ್‌ನಾ ಖೇಶ್ | – | ಕಂಕುಳ ಕೂದಲು |
| ಶೀಟೂ | – | ಶಾಟ |
| ಭೂಲಿ | – | ಗುದ |
| ಪೂಂದ್ | – | ಕುಂಡೆಯ ಮಾಂಸ |
| ಪೀಪ್ | – | ಕೀವು |
| ರಶಿ | – | ರಕ್ತ ನಿಂತ ಮೇಲೆ ಗಾಯದಿಂದ ಬರುವ ನೀರು(ರಶಿಕೆ) |
| ಪಶ್ಯನೊ | – | ಬೆವರು |
| ಮೊಹಡಾನು ಪಾಣಿ | – | ಜೊಲ್ಲು |
| ಗುದ್ದರ್ | – | ಮೆದುಳು |
| ಮುಡಿಕ್ಯಾನಿಚಿಪ್ಪಿ | – | ತಲೆಯ ಚಿಪ್ಪು |
| ಬಗಲ್ | – | ಬಗಲು |

| | | |
|---|---|---|
| ಕರೊಯಿ | – | ಎದೆಮಧ್ಯಭಾಗ |
| ರಗ್ | – | ರಕ್ತನಾಳ |

೩. ಸಂಖ್ಯಾವಾಚಕಗಳು

| | | |
|---|---|---|
| ಏಕ್ | – | ಒಂದು |
| ಬೇ | – | ಎರಡು |
| ಲೇನ್ | – | ಮೂರು |
| ಚಾರ್ | – | ನಾಲ್ಕು |
| ಪಾಂಚ್ | – | ಐದು |
| ಚ್ಹೋ | – | ಆರು |
| ಖಾತ್ | – | ಏಳು |
| ಆಟ್ | – | ಎಂಟು |
| ಸೌ | – | ಒಂಭತ್ತು |
| ದಸ್ | – | ಹತ್ತು |
| ಇಖ್ | – | ಇಪ್ಪತ್ತು |
| ಡೂಡಿಖ್ | – | ಮೂವತ್ತು |
| ಚಾಳೀಖ್ | – | ನಲವತ್ತು |
| ಅಡಹೀಖ್ | – | ಐವತ್ತು |
| ತೀನೀಖ್ | – | ಅರವತ್ತು |
| ಖಡ್ ತೀನೀಖ್ | – | ಎಪ್ಪತ್ತು |
| ಚಾರೀಖ್ | – | ಎಂಭತ್ತು |
| ಖಡ್ ಚಾರೀಖ್ | – | ತೊಂಬತ್ತು |
| ಖೋ | – | ನೂರು |
| ಏಕ್ ಅಜಾರ್ | – | ಒಂದು ಸಾವಿರ |
| ಏಕ್ ಲಕ್ಷಾ | – | ಒಂದು ಲಕ್ಷ |
| ಧ್ವರಾ ಲಾಕ್ | – | ಹತ್ತುಲಕ್ಷ |
| ಏಕ್ ಕೋಟಿ | – | ಒಂದು ಕೋಟಿ |

೪. ಅಡುಗೆ ಉಪಕರಣಗಳು

| | | |
|---|---|---|
| ಖೇಳಿ | – | ಬಿಂದಿಗೆ |
| ತ್ತಾಳಿ | – | ತಟ್ಟೆ |
| ದಾನು ಹಂಡುಕು | – | ಅನ್ನದ ಪಾತ್ರೆ |
| ಡೋಯಿ | – | ಸೌಟು |
| ಹಿಟ್ಟಕರಾನು ಲಾಕುಡು | – | ಮುದ್ದೆಕೋಲು |
| ಡೋಯೊ | – | ಲೋಟ |

| | | |
|---|---|---|
| ಮಿಳ್ಳಿ | – | ಬಟ್ಟಲು |
| ಡಕ್ಕನು | – | ಮುಚ್ಚಳ |
| ಹಂಡೊ | – | ಹಂಡೆ |
| ಗಡುವೊ | – | ಕೊಡ |

೫. ಉಡುಪುಗಳು

| | | |
|---|---|---|
| ಮುಸಲ್ಡಿ | – | ಕಾಲುಚೀಲ |
| ಚೌಕೊ | – | ಕರಚೀಪು |
| ಪಂಚಿ | – | ಪಂಚೆ |
| ಖಾಚಳಿ | – | ಕುಪ್ಪಸ |
| ಖಾಡಿ | – | ಸೀರೆ |
| ಗಾಗ್ರೊ | – | ಲಂಗ |
| ಛಡ್ಡಿ | – | ಚಡ್ಡಿ |
| ಖುಡುತು | – | ಅಂಗಿ |

೬. ಪ್ರಾಣಿ ಮತ್ತು ಪಕ್ಷಿಗಳು

| | | |
|---|---|---|
| ಕದೇಡಿ | – | ಕತ್ತೆ |
| ಘೋಡೋ | – | ಕುದುರೆ |
| ಅಡ್ಡೊ | – | ತೋಳ |
| ರಿಂಚ್ಚಿ | – | ಕರಡಿ |
| ಡಿಗಾಡಿ | – | ನವಿಲು |
| ಕುಕ್ಕಡೊ | – | ಹುಂಜ |
| ಕುಕ್ಕಡಿ | – | ಹುಂಜ |
| ಕಾಳ ಬಕಾನುವನ್ನರ್ | – | ಕರೆಕೋತಿ |
| ವನ್ನರೆ | – | ಕೋತಿ |
| ಬಬೋಚ | – | ಚಿರತೆ |
| ಖುರುಡೋ | – | ಹಂದಿ |
| ಹರಣಿ | – | ಜಿಂಕೆ |
| ಕುತ್ರಿಂವು | – | ನಾಯಿ |
| ಅತ್ತಿ | – | ಆನೆ |
| ವನಜೊ | – | ಸಿಂಹ |
| ವಾಘ್ | – | ಹುಲಿ |
| ಬೊಕಡಿ | – | ಮೇಕೆ |
| ಗಡ್ರಿ | – | ಕುರಿ |
| ಪಡ್ಡೊ | – | ಕೋಣ |
| ಭೇಂಸ್ | – | ಎಮ್ಮೆ |

| | | |
|---|---|---|
| ಚರಡೊ | – | ಹೋರಿ |
| ಚರಡ | – | ಕರು |
| ದಂಡೋ | – | ಎತ್ತು |
| ಗಾಯ್ | – | ಆಕಳು |

೭. ಅಗತ್ಯ ವಸ್ತುಗಳ ಪದಗಳು

| | | |
|---|---|---|
| ಧಾಳಿ | – | ತಟ್ಟೆ |
| ಗೌವ್ | – | ಗೋಧಿ |
| ಧಾಳ್ | – | ಬೇಳೆ |
| ಚಾವಳ್ | – | ಅಕ್ಕಿ |
| ಖಾರ | – | ಖಾರ |
| ಸಟಣಿ | – | ಪಲ್ಯೆ |
| ಮುದ್ಯೊ | – | ಮುದ್ದೆ |
| ರೊಟ್ಪೊ | – | ರೊಟ್ಟಿ |
| ಧಾನ್ | – | ಅನ್ನ |
| ಪಾಣಿ | – | ನೀರು |
| ಅಲ್ಲಾ | – | ಹಸಿಶುಂಠಿ |
| ಸಾಸಿವೆ | – | ಸಾಸಿವೆ |
| ನಾರೇಳ್ | – | ತೆಂಗಿನಕಾಯಿ |
| ಕ್ಷಕ್ಕರ್ | – | ಸಕ್ಕರೆ |
| ಕೊತ್ತಂಬ್ರಿ | – | ಕೊತ್ತಂಬರಿ |
| ಕಸಕಸಿ | – | ಕಸಕಸಿ |
| ಮೆಣಸು | – | ಮೆಣಸು |
| ಲಕ್ಷಣ | – | ಬೆಳ್ಳುಳ್ಳಿ |
| ಕರಿಭೇವು | – | ಕರಿಬೇವು |
| ಖಾರಿ | – | ಉಪ್ಪು |
| ಗೋಳ್ | – | ಬೆಲ್ಲ |
| ಕೊಪ್ರೊ | – | ಕೊಬ್ಬರಿ |

೮. ಇತರೇ ಪದಗಳು

| | | |
|---|---|---|
| ಧನ್ | – | ಮೋಡ |
| ಶುಕ್ಕರ್ | – | ನಕ್ಷತ್ರ |
| ರಾತ್ | – | ಕತ್ತಲು |
| ಉಜಾಳು | – | ಬೆಳಕು |
| ಪಾಣಿ | – | ನೀರು |
| ವಾದಳೊ | – | ಆಕಾಶ |

| | | |
|---|---|---|
| ಜಮೀನ್ | – | ನೆಲ |
| ಪಡದೊ | – | ಪರದೆ |
| ಚಿಲಕ | – | ಚಿಲಕ |
| ಕಿಟಕಿ | – | ಕಿಟಕಿ |
| ಗೋಡೆ | – | ಗೋಡೆ |
| ಗರ್ | – | ಮನೆ |
| ಬಾಕಲ್ | – | ಬಾಗಿಲು |
| ಖೊಖುಡು | – | ಚಪ್ಪಲಿ |
| ಮೋಜ | – | ಶೂ |
| ಚಾದ್ದರಿ | – | ಚಾಪೆ |
| ವಾಯಿರೊ | – | ಗಾಳಿ |
| ಸೂರ್ಯಸ್ | – | ಸೂರ್ಯ |
| ಚಂದರ್‌ಮೊ | – | ಚಂದ್ರ |
| ಈಕಡ್ | – | ಈಕಡೆ |
| ಐಕಡ್ | – | ಆಕಡೆ |
| ಪಾತ್ಸಳ್ | – | ಹಿಂದೆ |
| ಖಾಮಣಿ | – | ಮುಂದೆ |
| ಬೋಟಿ | – | ಮಾಂಸ |
| ಐನೊ | – | ಕನ್ನಡಿ |
| ಕೋಡ್ಯು | – | ಸೌದೆ |
| ಜಾಡಿ | – | ಕಾಡು |
| ಪಾಂದಡು | – | ಎಲೆ |
| ಗೋಟ್‌ಕಿ | – | ಮೊಗ್ಗು |
| ಕಚ್ಚು | – | ಕಾಯಿ |
| ಪಕ್ಕೊ | – | ಹಣ್ಣು |
| ಪೂಲ್ | – | ಹೂವು |
| ಚೋಟಿ | – | ಜಡೆ |
| ತಡಕೊ | – | ಬಿಸಿಲು |
| ಚಾಳೊ | – | ನೆರಳು |
| ಗಡಾನ್ | – | ಬೇಗ |
| ಹಿಟ್ಟು | – | ಮುದ್ದೆ |
| ಉಖಾನ್ | – | ಸಾರು |
| ಧಾನ್ | – | ಅನ್ನ |
| ದಚ್ಚಾ | – | ಬಾಣಂತಿ |
| ಆಗ್ | – | ಬೆಂಕಿ |

| | | |
|---|---|---|
| ಜೋಪಡಿ | – | ಗುಡಿಸಲು |
| ಚುಲ್ಲೊ | – | ಒಲೆ |
| ಖಾಳ | – | ಭಾವ |
| ತೂ | – | ನೀನು |
| ಬೋಲ್ | – | ಹೇಳು |
| ಕೂನ್ | – | ಯಾರು |
| ಭುಕ್ಯಾರ್ | – | ಕೋಣ |
| ಬಾವಣ್/ರಾಂಡ್ | – | ಹೆಂಡತಿಗೆ ಸಂಭೋದವಾಚಕ ಪದ |
| ಖಾವರಿ /ಬಾವರಿ | – | ಗಂಡನಿಗೆ ಸಂಭೋದವಾಚಕ ಪದ |
| ಖೊಳ್ಳಿಯೋ | – | ಹೆಂಡತಿಯನ್ನು ಕರೆಯಲು ಬಳಸುವ ಪದ |
| ಕೊಳ್ಳಾಯೋ | – | ಗಂಡನನ್ನು ಕರೆಯಲು ಬಳಸುವ ಪದ |

೯. ಬಳಸುವ ವಾಕ್ಯಗಳು

| | | |
|---|---|---|
| ಅಂಕಿ ಜವ್ವುಸ್ | – | ಈಗ ಹೋಗೀನ್ತಿ |
| ಖದೇ ಜೈಸ್ | – | ಯಾವಾಗ ಹೋಗ್ತೀರಾ? |
| ಅಂಕಿ ಆಯೋ | – | ಈಗ ಬಂದೆವು |
| ಕದೆ ಆಯೋ | – | ಯಾವಾಗ ಬಂದಿರಿ? |
| ಚಾ ಪೀತೂಕೀಶ್ಯೂ | – | ಟೀ ಕುಡಿದಿದ್ದೀರಾ? |
| ಖಾಣು ಖಾದು ಕೀಶ್ಯೂ | – | ಊಟ ಮಾಡಿದ್ದೀರಾ? |
| ಪಾಣಿನವೊ | – | ಸ್ನಾನಮಾಡು |
| ಪರ್‌ಶುಂದನ್ ಕಿಜಾತೊ | – | ನಿನ್ನೆ ಎಲ್ಲಿದ್ದಿರಿ? |
| ಮುಜು ಕಾಲೈಶ್ | – | ನಾನು ನಾಳೆ ಬರುತ್ತೇನೆ |
| ಹೊ ಹೊ ಮೆ ಒಳೊಜೋಸ್ | – | ಊ ನಾವು ಹೋಗುತ್ತಿದ್ದೇವೆ |
| ತೂ ಒಳಜಾಸ್ ಕಿಶ್ಯೂ | – | ನೀವು ಹೋಗುತ್ತಿದ್ದೀರಾ? |
| ಅಚ್ಚಾ ಚೀಯಿ | – | ಚೆನ್ನಾಗಿದ್ದೇವೆ |
| ಅಚ್ಚೇ ಸ್ಸಾಕಿಶ್ಯೂ | – | ಚೆನ್ನಾಗಿದ್ದೀರಾ? |
| ಆಟ್ ಗಂಟಾನ ಖಾಣು ಕವಾನು | – | ಎಂಟು ಗಂಟೆಗೆ ಊಟ ಮಾಡುತ್ತೇವೆ. |
| ಕೆತ್ರ ಗಂಟಾನಾ ಕಾಣು ಕಾವಾನು | – | ಎಷ್ಟು ಗಂಟೆಗೆ ಊಟ ಮಾಡುತ್ತೀರಾ? |
| ಮುಜು ಕದೇ ಅಯಿಶ್ | – | ಇನ್ನು ಯಾವಾಗ ಬರುತ್ತೀರಾ? |
| ಹೊ ಹೊ ಕರೂಕರೇಸ್ | – | ಹೌದು ನಾನು ಮಾಡುತ್ತಿದ್ದೇನೆ |
| ಕಾನು ಕರೂಕರಸ್‌ಕಿ ಶ್ಯೂ | – | ಅಡುಗೆ ಮಾಡುತ್ತಿದ್ದೀರಾ? |
| ಪರ್ ಶುಂದನ್ ಮೈಶೂರ್ ಮತ್ತೊ | – | ನಿನ್ನೆ ಮೈಸೂರಿನಲ್ಲಿದ್ದೆ |

ಮನ ಶಾತ್ ಬಿ ನಕೊಬೋಲ್ – ನನಗೆ ಏನನ್ನೂ ಹೇಳಬೇಡ
ಯೊ ಅಚ್ಚೀ ಚೊಕರಿ – ಅವಳು ಒಳ್ಳೆಯ ಹುಡುಗಿ
ಯೊ ಲಡಯಿಕರೊ ಕರಸ್ – ಅವನು ಜಗಳ ಮಾಡುತ್ತಿದ್ದಾನೆ
ಮೇ ವಾತ್‌ಕೊ ಬೊಲೂನಿ – ನಾನು ಮಾತನಾಡುವುದಿಲ್ಲ.
ಮರ ಖಗೊ ಆಯೊ
ಮುರುಗುವಹಡಿ ಖಡಾವುಣು – ನಮ್ಮ ನೆಂಟರು ಬಂದರೆ
ಕೋಳಿ ಕೊಯ್ದು ತಿನ್ನಿಸಬೇಕು.
ಖಾಲ್ ಖಗೊ ವಳೆ ಅವಾಸ್ – ನಾಳೆ ನೆಂಟರು ಬರುತ್ತಾರೆ.
ಮೇ ಖೂಸ್ – ನಾನು ಮಲಗುತ್ತೇನೆ.
ಕೋಣ್ ಬಿ ಶಾದ್ ಬಿ ಕೊಕರಾನಿ– ಯಾರು ಏನೂ ಮಾಡುವುದಿಲ್ಲ.
ತೂ ಶಾತ್ ಕರೂಕರಾಸ್ – ನೀವು ಏನು ಮಾಡುತ್ತಿದ್ದೀರಿ
ಖೊ ಕದ್ಯಾ ಉಸೆ – ಅವರು ಯಾವಾಗ ಬರುತ್ತಾರೆ.
ಆ ಕಿಸ್ಗಾ ಗಯಿ – ಇವಳು ಎಲ್ಲಿಗೆ ಹೋದಳು
ಯೊ ಗರೇ ಗಯೊ – ಅವನು ಮನೆಗೆ ಹೋದನು
ನಾ ಕೋಲ – ನಾನು ಬರುವುದಿಲ್ಲ
ತೂ ಅಚ್ಚೊ ಚ್ಯಾಕಿ ಶೂಲ – ನೀನು ಚೆನ್ನಾಗಿದ್ದೀಯ?
ತೂ ಅವಾಸ್ ಕಿ ಸೂಲ – ನೀನು ಬರುತ್ತೀಯೇನು?
ಆವ್ ಖಾಣು ಖಯಿಯೆ – ಬಾ ಊಟ ಮಾಡೋಣ
ಮೇ ಪಾಣಿನೊಹಾನ ಹೊಳೊಜಾಸ್– ನಾನು ಸ್ನಾನಕ್ಕೆ ಹೋಗುತ್ತೇನೆ.
ಖಾಣು ಖಯಿಲ್‌ದೋಷೂ – ಊಟ ಮಾಡಿದೆಯಾ?
ತೂ ಆವ್‌ಲಾ – ನೀವು ಬನ್ನಿರಿ
ತೂ ಶಾದ್ ಕರಸಲಾ – ನೀನು ಏನು ಮಾಡುತ್ತೀಯ?
ಮೇ ಖಾಲೆ ಜಾನ್ಸ್ – ನಾನು ನಾಳೆ ಹೋಗುತ್ತೇನೆ.
ಸಿನಿಮಾ ದೇಖಾನ ಅವಾನ್‌ಕಿ ಶೂಲ– ಸಿನಿಮಾ ನೋಡೋಣ ಬರುತ್ತೀಯಾ?

**ಉಚ್ಚಾರಣೆಯ ವಿಶೇಷಗಳು**

ಸ – ಶ ಕಾರವಾಗುತ್ತದೆ
ನ – ಣ ಕಾರವಾಗುತ್ತದೆ
ದ – ಣ ಕಾರವಾಗುತ್ತದೆ
ಟ – ಡ ಕಾರವಾಗುತ್ತದೆ

**ಸಾಹಿತ್ಯ**

ಹಿಕ್ಕಿಪಿಕ್ಕಿ ಜನಾಂಗದವರ 'ವಾಗ್ರಿ ಭಾಷೆ' ಗೆ ಲಿಪಿಯಿಲ್ಲದಿದ್ದರೂ ಕೂಡ ಆ ಸಮುದಾಯದಲ್ಲಿ ಮೌಖಿಕ ಸಾಹಿತ್ಯ ಸಾಕಷ್ಟು ಇದೆ. ತಮ್ಮ ಸಾಹಿತ್ಯವನ್ನು ಇವರ ಬದುಕಿನ ಬೇರೆ ಬೇರೆ ಸಂದರ್ಭಗಳಲ್ಲಿ ಬಳಸುತ್ತಾರೆ. ಬೇಟೆಗೆ ಹೋದಾಗ ಸಮಯವನ್ನು ಕಳೆಯಲು, ಹಬ್ಬ ಹರಿದಿನಗಳಲ್ಲಿ ಮನರಂಜನೆಗಾಗಿ, ಹೆಣ್ಣು ಮಕ್ಕಳು ಭಿಕ್ಷೆ ಬೇಡಲು ಹೋದ ಸಂದರ್ಭದಲ್ಲಿ. ವ್ಯಾಪಾರ ವ್ಯವಹಾರಕ್ಕೆ ಹೋದಂತಹ ಸಂದರ್ಭದಲ್ಲಿ ಬೇಸರವನ್ನು ಕಳೆಯಲು, ದನಗಳನ್ನು, ಕುರಿಗಳನ್ನು ಕಾಯಲು ಹೋದಂತಹ ಸಂದರ್ಭದಲ್ಲಿ ಕಥೆಗಳು, ಹಾಡುಗಳು, ಗಾದೆಗಳು, ಒಗಟುಗಳು, ಬಯ್ಗುಳಗಳು ಮುಂತಾದವುಗಳನ್ನು ಬಳಕೆ ಮಾಡುತ್ತಾರೆ. ಕಥನಗೀತೆಗಳನ್ನು ಹಾಡುತ್ತಾರೆ.

**ಹಾಡುಗಳು**

೧. ಕಾಡುಕೋಳಿ ಜೋಡಿ ನವಲು
ವಾಗಲಮ್ಮ ವಾಂಗಲೆ ಡಿಯಾಲಮ್ಮ
ಸಣ್ಣ ಸೂಜಿ ದಪ್ಪ ಪಟಣ
ವಾಂಗಲಮ್ಮ ವಾಂಗಲೆ ಡಿಯಾಲಮ್ಮ
ಮ್ಯಾಲೆ ಚಪ್ಪರ ಕೆಳಿಕೆ ಬಕರ
ವಾಂಗಲಮ್ಮ ವಾಂಗಲೆ ಡಿಯಾಲಮ್ಮ

೨. ಏಕ್‌ದೊ ಪಿತುವಾ ಪೀಪಲ್‌ಕಾ ಪಿತುವ
ಬಟುವಾ ಉಡು ಉಡುಜಾ
ಅಡಿ ಬಾಲ್‌ರೇ ಜೋಬನ
ಬಟ್ ವಾ ಉಡು ಉಡು ಜಾ
ನದಿ ಕೀ ಕಿನಾರೆ ಡೇರಾ ಬಿಚುವಾ ಪಾಯಲ್ ಉಡು ಉಡು ಜಾ

೩. ಝುಂಗಳ ತಿತರೊ ವಾಖ್‌ತೊತೊ
ಖೇಬರ್ ಕುಂಯ್ಯ ಕರತೀತಿ
(ಕಾಡಿನ ಹಕ್ಕಿ ಕೂಗುತ್ತಾ ಇತ್ತು
ಸೋರಕ್ಕಿ ಕುಯ್ಯೊ ಅಂತಿತ್ತು)

೪. ಧೋಳು ಧೋಳುವಾದಳೊ
ಅಪಣೆ ಕಾರು ಪಾಣಿಮಾ
ಗಂಬಳ ಖೇಲಿಯೆ
(ಬಿಳಿ ಬಿಳಿ ಮೋಡ
ನಾವೆಲ್ಲರೂ ಸೇರಿ ಮಳೆಯಲ್ಲಿ
ಆಟ ಆಡೋಣ)

೫. ಸರಾಕೊ ಬುಲಾಯಿ
ಪಲ್ಲಂಕೊ ಸುಲಾಯಿ
ಪರ್ಯೆಮೊಕಾ ಮೂತು
ಕ್ಯಾಶಿಮ್ಯಾರ ಚೂತು

೬. ಹರಸಮಂಡ ಲೇತಲ್ಲೆ
ಜೊಪಾರಿಕೆ ಜಲ್ಲೆ
ಬಯಿ ನಿಕಲಾ ಸರಗತಕು
ಮಾಯಿರೆ ಧಾತಲಂಗಯೆ

೭. ಸರಕೊ ಬುಲಾಯಿ
ಪಲ್ಲಂಕೊ ಸುಲಾಯಿ
ಸಾಸು ಉರುಕೊ ಸವಾರಿ
ಸಸರ್ ಠಾಂಗ್ ಪಸಾರೆ

೮. ಲಾಲ್‌ದೋರೆ ಮೆಟ್ಟು ಪಳ್ಯಾಮ್
ದಾತಿ ಬೇಟೋಸ್ಲ ಚಿರಮಿಲಾಗಳ್ಳ
ದಾತಿ ಉಠೋವ ಹೊಳೆ ಓಜಾಯ್
ಬಂಡೋಶ್‌ಕುಂಗಲ
(ಇವನೆ ಇವನೆ ಮೊಲ ಕುಂತಕಂಡಿತ್ತೆ
ಬಲೆ ತಗಂಡುಬಾ. ಬಲೆ ಸರಿಮಾಡು
ಬಲೆ ಹಾಕನ. ಎದ್ದು ಹೋಗಿಬಿಡ್ತು
ಮೊಲದ ತೊಲ್ಡ ತಿನ್ನು)

೯. ಕಾಳು ಕಾಳು ವಾದಳೊ ಹಾಯುನಿಲಾಬಿ
ಠಂಡು ಠಂಡು ವಾಯರೊ ವಾಗ್‌ಯೊ ನಿಲಾಬಿ
ಪಾಣಿಮಾ ಅಪಣಿ ಖಾರ ಜುಂಜರಕೇಲಿಯೆ
ಹಾಖ್ತ ಹಾಖ್ತ ಹೋಯ್ ಖೇಲ್ತ ಖೇಲ್ತ ಹೋಯ್
(ಕರೆ ಕರೆ ಮೋಡ ಬಂದುಬಿಡ್ತು
ತಂಪಿನ ಗಾಳಿ ಬೀಸಿತು
ನೀರಿನಲ್ಲಿ ನಾವು ನೀವು ಸೇರಿ
ಆಟ ಆಡೋಣ ಬನ್ನಿರಿ)

೧೦. ಚ್ಹಾಲಿ ಬಾಯ್
ಚ್ಹಾಲಿ ಬಾಯ್
ಬೀರೇ ಪೀಯಾಸ್ ಕಿ ಬ್ರಾಂಡಿ ಪಿಯ್ಯಸ್
ಪಾವೇ ಖಾಸ್ ಕೀ ತೂ ಬಾಜಿ ತೂಖಾಸ್ ಕೀ
ದೇವಿ ಕೊಯಿತೀನ್ ತಾರಾಕಾನಾ ಜಮೀನ್ ಕೊಯಿನಿ
ತರಗನಾ ಆಸ್ತೀನ್ ಕ್ವೊಯಿಂತೆ ಮೆ ಕಿಂಮೆ ನಂಬು
ಕಿಂ ಕರ್‌ಶೂ ಅಪನು ಜೋಡು ಉಯ್ಯಗುತೊ
(ನಡೀರಿ ಅಕ್ಕ ನಡೀರಿ ಅಕ್ಕ
ಬೀರು ಕುಡಿಯೋಣ ಬನ್ನಿ
ಬ್ರಾಂದಿ ಕುಡಿಯೋಣ ಬನ್ನಿ
ಸೊಪ್ಪು ತಿಂತೀರಾ ಮಾಂಸ ತಿಂತೀರಾ
ನಿಮ್ಮತ್ರ ದೇವರೂ ಇಲ್ಲ ಜಮೀನೂ ಇಲ್ಲ
ನಿನ್ನತ್ರ ಆಸ್ತಿ ಇಲ್ಲವಲ್ಲ
ನಿನ್ನ ಹೇಗೆ ನಂಬಲಿ
ನಾವು ಜೊತೆಯಾದರೆ ಏನು ಮಾಡೋದು)

೧೧. ಅಚ್ಚಚ್ಚು ಬೆಲ್ಲದಚ್ಚು
ಯಾವಬೆಲ್ಲ ಕಪ್ಪುಬೆಲ್ಲ
ಯಾವಕಪ್ಪು ಮಡಕೆಕಪ್ಪು
ಯಾವ ಮಡಕೆ ಅನ್ನದ ಮಡಕೆ
ಯಾವ ಅನ್ನ ತಿನ್ನೊ ಅನ್ನ
ಯಾವ ತಿನ್ನೊ ಏಟು ತಿನ್ನೊ
ಯಾವ ಏಟು ದೊಣ್ಣೆ ಏಟು
ಯಾವ ದೊಣ್ಣೆ ದಪ್ಪ ದೊಣ್ಣೆ
ಯಾವ ದಪ್ಪ ನಿನ್ನ ಹೊಟ್ಟೆ ದಪ್ಪ

೧೨. ತೂಪು ಪಳೆಂಪು
ಪಟ್ಲಾರೆಗೆ ಕೊಳೆಂದೆ
ತಾಳಂಗೆ ಪೂಂ ಪೂಂ ಪಶ್

೧೩. ಚಂಬು ಮಾಂಗ ದಾನಮಾ ಜೇಜೇ ಭೋಲೋ ಜೈಭುವಾನಿ
ಸೌಂಭೇಸೆ ಗಂಗ್‌ಸಾನುಮಾ ಜೇಜೇ ಭೋಲೋ ಜೈಭುವಾನಿ
ಸೌಭಕರೇ ಗಂಗ್‌ಸಾನಮಾ ಜೇಜೇ ಭೋಲೋ ಜೈಭುವಾನಿ
ಸೌಮೋಂಡು ಗಂಗ್‌ಸಾನಮಾ ಜೇ ಜೇ ಭೋಲೋ ಜೈಭುವಾನಿ
ಚಡಿಯರಿ ಬಾಲನಾ ಘಾಟಮಾ ಜೇಜೇ ಭೋಲೋ ಜೈಭುವಾನಿ

**ದೇವಿಹಾಡು**

೧೪. ಊದುಬತ್ತಿ ಬಲಾರೆ ಹಾಸನಕೇವುಡಾ
ಮಾತಾಕೆನಾಮ್ ಬಾಯ್ ಇಂಗಲಾದೇರಿ
ಸೋಲಾಪುರಿಸಿ ಆಯಿರಿ ಮಾತಾ ಸದ್ದರ್ ಸವಾನಿ
ಮಾತಾಕೇ ನಾಮ್ ಬಾಯ್ ಇಂಗಲಾದೇರಿ
ತೊಳಜಾಪುರ್‌ಸಿ ಆಯಿರಿ ಮಾತಾ ಸದ್ದರ್ ಸವಾನಿ
ಮಾತಾಕೇ ನಾಮ್ ಬಾಯ್ ಇಂಗಲಾದೇರಿ
ಚಾವಂಡಿಗಡಸಿ ಆಯಿರಿ ಮಾತಾ ಸದ್ದರ್ ಸವಾನಿ
ಮಾತಾಕೇ ನಾಮ್ ಬಾಯ್ ಇಂಗಲಾದೇರಿ
ಮಹವರ್‌ಗಡಸಿ ಆಯಿರಿ ಮಾತಾ ಸದ್ದರ್ ಸವಾನಿ
ಮಾತಾಕೇ ನಾಮ್ ಬಾಯ್ ಇಂಗಲಾದೇರಿ

೧೫. ಹಾರೆ ಲಾಯಿರೇ ದೊಂಗಾರೆ ಉಪರ್
ಏನವಾಗಜಾಯೆ ಲಾಯಿ ಮಾರೊ ಜೀಮಣ ಹಾರೊ
ಋಷಿಗಯೊ ಮಾನಾವರೇಪುನ ಸಾಯ ಬಜಾಯ
ಡೋಲ್ ನಾಯೆ
ಹಾರೆ ಲಾಯಿರೇ ಸೂಳಾತೂ ಭೂಂಜೇ ಏನವಾಗುಜಾಯೆ

**ದಂಡಿನ ದುರುಗಮ್ಮನ ಹಾಡು**

ದಂಡಿನ ದುರುಗಮ್ಮನ ನೀ ಜತರಾ ಆದಿ
ಆವೋ ಜಾಯಿ ಭಾಯೋಕಿ
ಆವೋ ಜಾಯಿ ಭಾಯನಿರೆ

ದಂಡಿನ ದುರುಗಮ್ಮನೀ ಜತರಾ ಜಾಯ್
ದಂಡಿನ ದುರುಗಮ್ಮನೀ ಆಶೀರ್ವಾದಲೇ
ಅಕ್ಕಾಯೆ ಅಸಲ್ ಕರಿ ಪಾಳಜ್
ಕಿಯೀ ಆಶೀರ್ವಾದ ಲೇ ಆವಿಂಷು

ದಂಡಿನ ದುರುಗಮ್ಮ ನೀ ಜತರಾ ಆವಾನು
ದಂಡಿನ ದುರುಗಮ್ಮ ನೀ ಜತರಾ ಆವಾನು
ಅಕ್ಕಾಯ್ ಭಳಿಯಾಂ ಅಪ್ಲೆಜಾಯ್

ದಂಡಿನ ದುರುಗಮ್ಮ ನೀ ಜತರಾನು
ಅಕ್ಕಾಯ್ ಭಳಿ ಅಪಣಿಶುಂವಾತಾಕರುವಾಂಯ್ ಕರುಂಷು
ಆಪ್ಲೆನೆವರೆ ಕದ್ದೆ ಬಳಿಂಷು

ಆದ್ಮೀನಿ ಜಾತ್ ಚಹಾತೋಡಿ ಸಾ
ಉತರಾ ಅಕ್ಕಾಂಯ್ ಭಾಯಿ ಭಂಡ್ರು ಭಳೀ ರಹಂಷೀ
ಉಗು ಮಿಣುತೊ ಧರೀ ನಡುಭೋಣು ತೋಡಿ
ರವ್ವಾನಾ ಭಾಯಿ ಭಂಡ್ರು ಅಕ್ಕಾಯ ಬಳಿರೇಂಷಿ

**ಕನ್ನಡ ಅನುವಾದ**

ದಂಡಿನ ದುರುಗಮ್ಮನ ಜಾತ್ರೆ ಬಂತು
ಬನ್ನಿ ಹೋಗೋಣ ಅಣ್ಣೋರೆ
ಬನ್ನಿ ಹೋಗೋಣ ಅಕ್ಕೋರೆ

ದಂಡಿನ ದುರುಗಮ್ಮನ ಜಾತ್ರೆಗೆ ಹೋಗಿ
ದಂಡಿನ ದುರುಗಮ್ಮನ ಆಶೀರ್ವಾದ ಪಡೆದು
ಎಲ್ಲರನ್ನು ಚೆನ್ನಾಗಿ ಸಾಕು ಎಂದು ಕೇಳಿ
ಆಶೀರ್ವಾದ ಪಡೆದುಕೊಂಡು ಬರೋಣ

ದಂಡಿನ ದುರುಗಮ್ಮನ ಜಾತ್ರೆ ಆಗುವುದು
ದಂಡಿನ ದುರುಗಮ್ಮನ ಜಾತ್ರೆ ಆಗುವುದು
ಎಲ್ಲರೂ ಕೂಡಿ ನಾವು ಅಲ್ಲಿಗೆ ಹೋಗೋಣ

ದಂಡಿನ ದುರುಗಮ್ಮನ ಜಾತ್ರೆಗೆ
ಎಲ್ಲ ಅಣ್ಣತಮ್ಮಂದಿರು ಅಕ್ಕ ತಂಗಿಯರು ಬಂದಿರುತ್ತಾರೆ.
ಎಲ್ಲರನ್ನು ನೋಡಿ ಮಾತನಾಡಿಸಿ ಬರೋಣ
ನಾವು ಮತ್ತೆ ಎಂದು ಕೂಡುತ್ತೇವೆ ಎಂದು ಕೇಳೋಣ

ಹಕ್ಕಿಪಿಕ್ಕಿ ಜಾತಿ ಎಲ್ಲಿಯವರೆಗೆ ಇದೆ.
ಎಲ್ಲಾ ಕಡೆಯಿಂದ ಅಕ್ಕ ತಂಗಿಯರು ಅಣ್ಣತಮ್ಮಂದಿರು ಕಲೆಯುತ್ತೇವೆ.
ನಾವು ಎಲ್ಲರೂ ಕಲೆತು ದೇವಿ ಸೇವೆ ಮಾಡಿ ಆಶೀರ್ವಾದ ಪಡೆಯೋಣ

ಸೂರ್ಯದೇವ ಹುಟ್ಟುವ ದಿಕ್ಕಿನಿಂದ ಹಿಡಿದು ಮುಳುಗುವವರೆಗಿನ
ಎಲ್ಲ ಕಡೆಯ ಜನ ಬಂದಿರುತ್ತಾರೆ.

**ಗಾದೆಗಳು**

೧. ತೀನ್‌ವಾರ ಬರೋವಣೊ
ತದೇ ತಾರೊ ಖರಾಜ್ ಪಿಟ್‌ನು

(ಮೂರು ವಾರ ಕೊಡಬೇಕು

ನಿನ್ನ ಸಾಲ ತೀರಬೇಕು

೨. ಆಜಾಸೆ ದೇವ್‌ನೂ ಮಾರು ಜಾವಳಾನೂ ಜಾಸೆ

ಮಾರುಷಾದ್ ಜಾವನು ಖೊಯಿನಂಖ್

(ಹೋದರೆ ದೇವರದು ಹೋಯ್ತು

ಪೂಜಾರಿದೇನು ಶಂಟ ಹೋಯ್ತು)

೩. ಮಿಳಾತೋ ಶಿಕಾರ ನಾತೋ ಭಿಕಾರಿ

(ಸಿಕ್ಕರೆ ಶಿಕಾರಿ ಸಿಗದಿದ್ದರೆ ಭಿಕಾರಿ)

೪. ಕುಕ್ಕಡೊ ಪೂಂಚಣ ಮಸಾಲೋ ವಾಟಚ್ಕ

(ಹುಂಜಗ ಕೇಳಿ ಮಸಾಲೆ ಅರೆಯುತ್ತಾರೇನು?)

೫. ಆದ್ಮೀನ ನ ಆವಣ ಕೇನ ಅಂವ

(ಮನುಷ್ಯನಿಗೆ ಬರದೆ ಮತ್ಯಾರಿಗೆ ಬರುತ್ತದೆ.)

೬. ಪಾಪಿಣು ಪಾಪಿ ಧರ್ಮಿಣು ಧರ್ಮಾನ

(ಪಾಪಿಯದ್ದು ಪಾಪಿಗೆ ಧರ್ಮಿಯದ್ದು ಧರ್ಮಿಗೆ)

೭. ದೇಸೆಣ ಲಾರ ವೇಸ

(ದೇಶದಂತೆ ವೇಷ)

**ಒಗಟುಗಳು**

೧. ಗದ್ದೆಮಾ ಪಾಣಿ
ಪಾಣಿಮಾ ಝಾಡ್
ಝಾಡ್ ಮಾ ಆಗ್
(ಗದ್ದೆಯಲ್ಲಿ ನೀರು ನೀರಿನಲ್ಲಿ ಬೇರು
ಬೇರಿನಲ್ಲಿ ಬೆಂಕಿ) – ಲಾಟೀನು

೨. ಏಕ್ ಶೀಶ್ ಮಾ ದೊ ರಂಗ್ ಕಾ ಪಾನಿ
(ಒಂದೇ ಸೀಸೆಯಲ್ಲಿ ಎರಡು ಬಣ್ಣದ ನೀರು) – ಮೊಟ್ಟೆ

೩. ಮೈದಾನ್‌ಮೊ ಟೋಪಿ ಲಗಾಡಿ ಬೇಟೊ
(ಮೈದಾನದಲ್ಲಿ ಯಾರೊ ಟೋಪಿ ಹಾಕಿ ಕುಳಿತಿದ್ದಾರೆ.)– ಗಾಜ್ (ಹಣಬೆ)

೪. ಖಡಾ ಬಲ್ಡಾಪರ್ ಗೋಳೊ ರಡತ್ತೊ ವಳವಾಸ್
(ಮೈದಾನದಾಗೆ ಬೆಲ್ಲದಕಾಯಿ ಬಿದ್ದಿತ್ತು)– ಬೆಂಕವೀಠ್ (ಬೆಲ್ಲದಕಾಯಿ)

೫. ಖಡಾ ಬಲ್ಡಾಪರ್ ಟಾಂಚಿರಿ ಪಡೀಸ್
(ಮೈದಾನದಾಗೆ ಕಾಲು ತೆರೆದು ಬಿದ್ದಿದ್ದಾಳೆ)– ಮಗರಿ (ಮರಲೆ ಹಕ್ಕಿಬಲೆ)

೬. ಕೈಚೆ ಡೋರಿ
ಚಮ್ ಕೇ ತಾರಾ– ಹತ್ತಿ

೭. ಏಕ್ ಮಹಲಮಾ (ಒಂದು ಮನೆಗೆ ಒಬ್ಬನೇ ಜಟ್ಟಿ)
ಏಕಸ್ ಜಟ್ಟಿ – ಹಾರೆಗಾಯ್ (ಬಸವನಹುಳು)

೮. ನಾನೂ ಗರಮಾ
ನಾನಿ ಬೀಗ
(ಚಿಕ್ಕಮನಿಗೆ ಚಿನ್ನದ ಬೀಗ)– ಟಿಕಲಿ (ಮೂಗಿನ ಬೇಸರಿ)

೯. ಕಾಳು ಆದ್ಮಿ
ಧೋಳೋ ಧಾತ್
(ಕರಿ ಮನುಷ್ಯ ಬಿಳಿಕಲ್ಲು)– ಬವಾಳಿಯನೂ ಜಾಡ್ (ಜಾಲಿಮರ)

೧೦. ಧೋಳೋ ಗೋಡೊ
ಜಾಬ್ರೊ ಡೊಂಡೊ
(ಬಿಳಿಕುದುರೆ ಹಸಿರು ಬಾಲ)– ಮೂಳೊ (ಮೂಲಂಗಿ)

೧೧. ಸೌಸೂದಿ ಸೌ ಉಲ್ಪಿ
(ನೂರು ಸೀದಾ ನೂರು ಉಲ್ಟಾ)– ಕಾಳು ಹಂಚ್ (ಕರಿಹೆಂಚು)

೧೨. ಬಾನಾ ರುಮಾಲ್ ಬಾನ್ ತಾ ಕೊವಾನಿ
ಆಯನಾ ಚಾದ್ರಿ ಪುಂಗಳಿ ಕರ್ತ ಕೊವಾನಿ
ಚೀ ಯಾನ ಪೈಶಾ ಗಣತಾ ಕೊವಾನಿ
(ತಂದೆಗೆ ಪೇಟ ಕಟ್ಟಲು ಆಗುವುದಿಲ್ಲ
ತಾಯಿಗೆ ಚಾಪೆ ಮಡಿಸಲು ಗೊತ್ತಿಲ್ಲ
ಮಗನಿಗೆ ದುಡ್ಡು ಎಣಿಸಲಾಗುವುದಿಲ್ಲ)–ವಾದಳು, ಜಮೀನ್, ತಾರೋ(ಆಕಾಶ, ಭೂಮಿ,ನಕ್ಷತ್ರ)

೧೩. ಮಾಂದತ್ರಿ ಬಾಪ್ ಜೀತ್ರ
ಉಸ್‌ಕಾ ಬೇಟಾ ಕಾ ಬಚ್ಚಾ
ಮಾನಿಕ್ ಟುಕುಡಾ
(ತಾಯಿ ಹಲ್ಲಿನವಳು ತಂದೆ ಜುಟ್ಟಿನವನು
ಮಗ ಮುತ್ತಿನಂಥವನು)– ಹಲಸಿನ ಹಣ್ಣು(ಸ್ವಾಡೆ, ತೊಳೆ, ಮುಳ್ಳು)

೧೪. ಬಜಾರ್ ತೂ ಲಾಯಿತೊ ಗರೇ
ವಹಾಡಿತೊ ರೋವಾಲಗಾನು
(ಸಂತೆಯಿಂದ ಮನೆಗೆ ತರೋದು
ಮುಂದೆ ಇಟ್ಟುಕೊಂಡು ಅಳೋದು)– ಖಾಂದೋ(ಈರುಳ್ಳಿ)

೧೫. ಏಕ್ ಜನೊ ಬೇಟೊ
ಏಕ್ ಮಾಡಿಸ್ಸಿ ವಳಿ ಆವ್ ತಿತೀ
ಯೊ ಮಾಡ್‌ಕಾಖನ್ ಬೇಸಿಗಿ
ಮಾಡ್ಕು ಬೊಲೂ ಕರುತ್ತೂ ಬೇಖ್ ಜರಾ
ಮಾಡ್ಸಿ ಬೊಲೂ ಕರ್ತಿತಿ ಬಶ್ ಬಶ್
ಮಾಡ್ಕು ಬೋಲೂ ಕರ್ ತೂ ತೂ ಉಯ್‌ಗೂ ಉಯ್‌ಗೂ
(ಒಬ್ಬ ಮನುಷ್ಯ ಕುಂತಿದ್ದ
ಅವನ ಹತ್ತಿರ ಒಬ್ಬಳು ಹೆಂಗಸು ಬರುತ್ತಿದ್ದಳು
ಅವನ ಹತ್ತಿರ ಬಂದು ಕುಂತಿದ್ದಳು
ಇವನು ಆಯ್ತು ಆಯ್ತು ಎಂದನು) – ಚೂಡಿಯಾ(ಬಳೆ)

೧೬. ಏಕ್ ರಾಜಾ
ಏಕ್ ಬಾವಡಿಕನಗಯೊ
ಖುಡ್ತು ಚಡ್ಡಿ ಕಾಡೆವೊ
ಪಡಿಗಯತೆ ಆಯೊ ಖೊಯನಿ ಪಾತ್ಸೊ
(ಒಬ್ಬ ರಾಜಾ ಒಂದು ಬಾವಿ ಹತ್ತಿರ ಹೋಗಿದ್ದ
ಬಟ್ಟೆಯನ್ನೆಲ್ಲಾ ಬಿಚ್ಚಾಕಿ ಬಾವಿಯಲ್ಲಿ ಬಿದ್ದ
ವಾಪಸ್ಸು ಎದ್ದು ಬರಲೇ ಇಲ್ಲ)– ಖೇಳು(ಬಾಳೆಹಣ್ಣು)

೧೭. ಏಕ್ ಖೊಳಮ್
ಎಕ್ ಡೊಕುಳೊ
(ಒಂದು ಕೆರೆಯಲ್ಲಿ ಒಂದೇ ಮೀನು)– ಜೀಬ್(ನಾಲಗೆ)

೧೮. ಅಡಿಕ್ಯು ಉಪ್ಪರ್ ಬೋಟಿ ಮೈ
ಅಡಿಕ್ಯು ಉಪ್ಪರ್ ಖೇಖ್
ಬೋಟೀನು ಮಯಿ ಪಾಣಿ
(ಮೂಳೆ ಒಳಗಡೆ ಮಾಂಸ
ಮೇಲೆ ಮೂಳೆ ಮೇಲೆ ಕೂದಲು
ಮಾಂಸದ ಒಳಗೆ ನೀರು)– ನಾರೇಳ್(ತೆಂಗಿನ ಕಾಯಿ)

೧೯. ವಾಕ್ಕು ಸೊಕ್ಕು ಕಡಮ ಭಿಂಗು– ಖಂದಾರು(ಗೌಜ ಹಕ್ಕಿಯ ಬಲೆ)

೨೦. ಗುಂಗುಡಿ ಹೋಡಿ ಪಡೊರೇಸ್
(ಕಂಬಳಿ ಹೊದ್ದು ಮಲಗಿರುವವರು ಯಾರು?)– ಭೋಪ್ಪು(ಕುಂಬಳಕಾಯಿ)

೨೧. ಏಕ್ ಗಾಯಿ ಕೆಲ್ಡು ನಾಖಾನಾ ಅಗಾಡಿ
ದೂದ್ ದೇನು
(ಹಸು ಕರು ಹಾಕುವ ಮುಂಚೆ ಹಾಲು ಕೊಡುತ್ತದೆ.)– ಖಾಟೊ(ಕಬ್ಬು)

೨೨. ಖಾಕೂನಿ ಗಾಂಡಮಾ
ಜಮ್ಮೆನೂ ಚೆಣ್ಣೂ – ಬೀಗ

೨೩. ಗಾಗ್ರೊ ಖಾಡಿ ನಾಕೀನ್
ಶೀಟೂ ತರದಿನ್ ದಾಣಖಾಡಿನ್ ಖಾವನೂ
(ಲಂಗ ಬಿಚ್ಚಿ ಶಾಟ ತರದು
ಕಾಳೆಲ್ಲ ತೆಗೆದು ತಿನ್ನುವುದು)– ಮಕ್ಕೂ (ಜೋಳ)

೨೪. ಮಾರಾಖೇಡೇ ಏಕ್ ಆದ್ಮಿ ಕದೇಬಿರೇಸ್
(ನನ್ನ ಜೊತೆ ಯಾವಾಗಲೂ ಒಬ್ಬ ಇದ್ದೇ ಇರುತ್ತಾನೆ)– ಸ್ಹಾಳಿ (ನೆರಳು)

೨೫. ಏಕ್ ಗೌಂನಾ ಪೊಣ್ಣಾಕಿದಿನ್
ಠೊಕರೊ ಬರೀನ್ ಹೋಳಿಗೆ ಕರೀನ್
ಅಕ್ಕಾ ಆದ್ಮಿನಾ ಖದ್ಯೆನ್ ಬಸ್ ಉಜ್ಯೆನ್ ಉಬ್ರಸ್
(ಒಂದು ಗೋದಿಗೆ ಒಡೆದು ಹಾಕಿ
ಕುಕ್ಕೆ ತುಂಬ ಹೋಳಿಗೆ ಮಾಡಿ
ಎಲ್ಲರಿಗೂ ತಿನ್ನಿಸಿ ಮತ್ತೂ ಉಳಿಯುತ್ತದೆ.)– ಆಗನ್‌ಡಬ್ಬೊ (ಬೆಂಕಿಪೊಟ್ಟಣ)

೨೬. ಖರೀನ್ ಉಕ್ಕಯಿನ್
ಲೀಗೂತೊ ಬಜಾರ್‌ಮಾ
ಎಕ್ಕಸ್ ಗಡೀಮಾ ಯೋಚ್ಚಯಿಜಾವಾನು
(ಮಾಡಿ ಒಣಗಿಸಿ ಸಂತೆಗೆ ತಗೊಂಡು ಹೋದರೆ
ಜಲ್ದಿ ಮಾರಾಟವಾಗುತ್ತದೆ.)– ಮಾಟೀನೂ ಅಂಡಿಕಿ (ಮಡಕೆ)

೨೭. ಅಟ್ಟದ್ನೂ ಉಪ್ಪರ್ ನಾನೂ ಲಕ್ಷ್ಮೀ
(ಹಟ್ಟದ ಮೇಲೆ ಪುಟ್ಟ ಲಕ್ಷ್ಮೀ)– ಟೀಕು (ಕುಂಕುಮ)

೨೮. ಛಾತಿಮಾ ಡೋಳಾ
(ಎದೆಯಲ್ಲಿ ಕಣ್ಣು)– ಖೊಖಡೊ (ಏಡಿ)

೨೯. ಬಾನಾ ರುಂಬಾಲ್ ಬಾಂದಾನಾ ಖೊಯಿವಹಿನೀ
ಅಮ್ಮನಾ ಖಾಡಿ ಪೆಹರಾನಾ ಖೊಯಿವಹಿನೀ
ಚೀಯಾನಾ ಪೈಶಾಗಣಾನಾ ಖೊಯಿವಹಿನೀ
(ತಂದೆಗೆ ಪೇಟ ಕಟ್ಟಕ್ಕಾಗಕ್ಕಿಲ್ಲ
ತಾಯಿಗೆ ಸೀರೆ ಉಡಕ್ಕಾಗಕ್ಕಿಲ್ಲ
ಮಗನಿಗೆ ಹಣ ಎಣಿಸುವುದಕ್ಕೆ ಬರುವುದಿಲ್ಲ)
– ಮಾರಗ್, ವಾದುಳು, ಶುಕ್ಕರ್(ದಾರಿ, ಆಕಾಶ, ನಕ್ಷತ್ರ)

೩೦. ಏಕ್ ದೇವ್‌ನಾ ಕಡಿಪೆಹರಾನಾ ಖೊಯಿನಿ
ಏಕ್ ದೇವನಾ ಟೀಕು ಲಗಾಡೆನಾ ಖೊಯಿನಿ
ಏಕ್ ದೇವ್‌ನಾ ಭೋಲಿ ಧೊವಾನಾ ಖೊಯಿನಿ
(ಒಂದು ದೇವರಿಗೆ ಸೀರೆ ಉಡಲಿಕ್ಕಾಗಲ್ಲ
ಒಂದು ದೇವರಿಗೆ ಕುಂಕುಮ ಹಾಕಕ್ಕಾಗಲ್ಲ
ಒಂದು ದೇವರಿಗೆ ತಿಕ ತೊಳೆಯಲಿಕ್ಕಾಗಲ್ಲ)– ಆಗ್, ಪಾಣಿ, ಕಾಯ್ (ಬೆಂಕಿ, ನದಿ, ಹಸು)

೩೧. ಏಕ್ ರಾಜಾ ಅರಮನೆ ಭಾಂದೇತೊ
ಇನಿ ಪೀಠೊಲ್ನ ಪರಸ್ ಪಳ್ಳಿ
ಚಲೆ ಇಂಡಾನೊ
(ಒಬ್ಬ ರಾಜಾ ಅರಮನೆ ಕಟ್ಟಿದರೆ
ತನ್ನ ಬೆನ್ನ ಮೇಲೇನೆ ಹೊತ್ತುಕೊಂಡಿರುತ್ತಾನೆ.)– ಖಾರೇಗಾಯ್ (ಬಸವನ ಹುಳು)

೩೨. ಏಕ್ ರಾಜಾ ಏಕ್ ಟೇಮ್ ಖುಡುತ್ ತೂ
ಕಾಡಿಯೆತೊ ಬಿಜ್ಜಕೆ ಟೇಮ್ ಪೆಹರಾಖೊಯಿನಿ
(ಒಬ್ಬರಾಜ ಒಂದು ಸಲ ಷರ್ಟ್ ಬಿಚ್ಚಾಕಿದರೆ
ಇನ್ನೊಂದು ಸಲ ಇಟ್ಟುಕೊಳ್ಳುವುದಿಲ್ಲ)– ಖಾಪ್ (ಹಾವು ಪೊರೆ ಬಿಡುವುದು)

೩೩. ಬಹರ್ ಮಿಠ್ಠೊ ಮಹೀ ಪಿಕ್ಕೊ
ಬಹರ್ ಪಿಕ್ಕೊ ಮಹೀ ಮಿಠ್ಠೊ
ಅಕ್ಕೊ ಮಿಠ್ಠೊ
(ಹೊರಗಡೆ ಸಿಹಿ ಒಳಗಡೆ ಸಪ್ಪೆ
ಮೇಲೆ ಸಪ್ಪೆ ಒಳಗಡೆ ಸಿಹಿ ಪೂರಾ ಸಿಹಿ)
– ಪೇಂಡ್ ಖಜೂರ್, ಖೇಳೂ, ಗೋಳ್ (ಖರ್ಜೂರ, ಬಾಳೆಹಣ್ಣು, ಬೆಲ್ಲ.)

೩೪. ಅಪಣೆ ರಾಂಡ್ ಅಕ್ಕಿ ಟೇಮ್
ಶಾತ್‌ಬೋಲ್ ತ್ಯೊದೇಸ್
ಪಣಕೀ ಏಕ್ ಟೇಮ್ ಏಕ್ ಶಾಚೂ ಕೊಯಿದೇನಿ
(ನಮ್ಮ ಹೆಂಡರು ಎಲ್ಲಾ ಟೇಮು ಏನು ಬೇಕಾದರೂ ಕೊಡುತ್ತಾರೆ
ಒಂದು ಟೇಮು ಮಾತ್ರ ಒಂದು ವಸ್ತು ಕೊಡುವುದಿಲ್ಲ)
–ಖಾಂದೂ ದೇಯಿಕೊಯಿನಿ ಅಪಣೆ ಮರ್‍ಯಾತೊ(ನಾವು ಸತ್ತಾಗ ಭುಜ ಕೊಡೋದಿಲ್ಲ)

೩೫. ಏಕ್ ಪಹಡ್ನೂ ಘಾಖ್ ವಹಡಾನೂ
ವೀಖ್ ಆಧ್ಮೀನೂ ಮುಡಿಕ್ಯು ಖತ್ರಾನೂ
ಬೇ ಆಧ್ಮಿ ಪಳ್ಳಿ ಜಾವಾನೂ
(ಒಂದು ಬೆಟ್ಟದ ಹುಲ್ಲನ್ನು ಕತ್ತರಿಸುವುದು
ಇಪ್ಪತ್ತು ಜನರ ತಲೆ ಕಡಿಯುವುದು
ಇಬ್ಬರಾಳು ಒಬ್ಬನಿಗೆ ಹೊತ್ತುಕೊಂಡು ಹೋಗುವುದು)
– ಖೇಶ್ ಕತ್ರಾನೂ, ನಖ್ಬರ್‌ವಾಡಾನೂ, ಚಪ್ಪಲ್‌ಗಲ್ಲಿ ಜಾವಾನೂ (ತಲೆಕಟಿಂಗ್, ಉಗುರು ಕತ್ತರಿಸುವುದು, ಚಪ್ಪಲಿ ಹಾಕಿಕೊಂಡು ಹೋಗುವುದು.)

೩೬. ಏಕ್ ಅಮ್ಮಾನಾ ಏಕ್ ಚಿಯ್ಯೊತೊ
ಅಮ್ಮಾ ಪಾಣಿ ಬರ್ಲಿನ್ ಆವಾನಿ ಟೇಂಪರ್
ಪಟ್ಟಕಯಿಗಯಿ ತದೇ ಚೀಯ್ಯೊಉಠಾಳನಿ ಟೇಂಪರ್
ಅಮ್ಮಾನೆ ಚಿಯಾ ತರಾಖಾನೆ ಚಿಮೇಕೊಯಿನ್ತೆ
ಜಗೋದರಿನ್ ಉಠಾಡ್– ಉಟ್‌ಲಿ ಅಮ್ಮಾ (ಎದ್ದೇಳಮ್ಮ)

೩೭. ಏಕ್ ಚೌಕ್‌ಮಾ ತೀನ್ ಮೂರ್ತಿ
ಯೊ ಮಹಾತ್ಮಾಗಾಂಧಿ, ಇಂದಿರಾಗಾಂಧಿ,
ಜವಹರಲಾಲ್‌ನೆಹರೂ ನೂ ಗೊಂಬೆಥೂ
ಯೊ ತೀನ್‌ನಾ ಗಲೇಂಡಾಮಾ ಪೂಲ್‌ನೇಹಾರ್ ತೀ
ಮೇಂಡಾ ಖಾತೊಖಾತೊ ಆಯಿನ್ ಇಂದ್ರಗಾಂಧಿ ಅಜು
ಜವಹರಲಾಲ್‌ನೆಹರೂನಾ ಗಲೆಂಡಾಮಾನೂ ಪೂಲ್ ಕೈಯಿಂದು
ಮಹಾತ್ಮಾಗಾಂಧಿನಾ ಗಲೆಂಡಾಮಾನೂ ಕೊಯಿಕಾದೂನಿ ಶಾನಾ ಖಾಜೆ?
(ಒಂದು ಚೌಕದಲ್ಲಿ ಮೂರು ಮೂರ್ತಿಗಳಿದ್ದವು ಮಹಾತ್ಮಗಾಂಧಿ, ಇಂದಿರಾಗಾಂಧಿ,
ಜವಹರಲಾಲ್ ನೆಹರಗಳವು ಅವರ ಕತ್ತಿನಲ್ಲಿ ಮೂರು ಹಾರಗಳಿದ್ದವು
ಒಂದು ಕುರಿ ಮೇಯುತ್ತ ಬಂದು ಇಂದಿರಾಗಾಂಧಿ, ಜವಹರಲಾಲ್ ನೆಹರೂ
ಕೊರಳಿನ ಹೂವಿನ ಹಾರವನ್ನು ತಿಂದು ಹಾಕಿತು. ಮಹಾತ್ಮ ಗಾಂಧಿಯ
ಕತ್ತಿನಹಾರವನ್ನು ಏಕೆ ತಿನ್ನಲಿಲ್ಲ?– ಶಾನಾಖಾಜೆಕತೊ ಇನ ಹಾತ್‌ಮ ಲಾಕ್ಡಿ ಛೆ
(ಯಾಕೆಂದರೆ ಅವನ ಕೈಲಿ ಕೋಲಿತ್ತು)

**ಬಯ್ಗುಳಗಳು**

೧. ತು ಡೇಡಿಯಾ ವೈಸಿ ಜಾಬು
(ಇವಳ ಲಂಗದಲ್ಲಿ ಹೊಡೆದರೆ ಹೊಲೆಯೋರ ಜಾತಿಗೆ ಸೇರಬೇಕು)

೨. ಜತ್ತಿ ಬಹರ್ ನಿಕ್ಲಿಲಿ ಜಾನು
(ಲಂಗದಿಂದ ಹೊಡೆದರೆ ಜಾತಿಯಿಂದ ಹೊರಹೋಗಬೇಕು)

೩. ಅಲ ತೂ ಮನ ಮಾರ್ತೆತೊ
ಲಾಂಗ್ ತೀ ಮಾರೀಶ್
(ನಿನಗೆ ನನ್ನ ಮುಟ್ಟಾದ ಲಂಗದಿಂದ ಹೊಡಿತೀನಿ)

೪. ತುನಾ ಗಾಗ್ರ ಮಾರೀಸ್
(ನಿನಗೆ ನನ್ನ ಲಂಗದಿಂದ ಹೊಡೀತೀನಿ)

೫. ತಾರಿ ದೇವಿ ಮರಾ ಲೋಹಿಮಾ ಕಲಂ
(ನಿನ್ನ ದೇವರಿಗೆ ನನ್ನ ರಕ್ತ ಕುಡಿಸಲಿ)

೬. ತಾರಾ ಬಾನು ಮಡಿಕ್ಯು
ಬಾರಾ ಲೋಹಿಮಾ ಕಲಮಾ
(ನಿನ್ನಪ್ಪನ ತಲೇನ ನನ್ನ ರಕ್ತದೊಳಗೆ ಹಾಕ)

೭. ತಾರಾ ಬಾನ ಮರಿ ಚಪ್ಪಲ ಖಡಾವೊ
(ನಿನ್ನಪ್ಪನಿಗೆ ನನ್ನ ಚಪ್ಪಲಿ ತಿನ್ನಿಸಾ)

೮. ತೂ ತ್ರುಕುಡಾನ್ ಬೀನ್ಸ್
(ನೀನು ಸಾಬಿಗೆ ಹುಟ್ಟಿದೋನೆ)

**ನುಡಿಗಟ್ಟುಗಳು**

೧. ಛಾತಿಪರ್ ಬೇಖ್ (ಎದೆ ಮೇಲೆ ಕೂರು) ಗಡಿಬಿಡಿಯ ಮಾತು

೨. ಮಾಥಾಪರ್‌ಲ್ಯು ಬೋಝೋ ಉತ್‌ರೀಗೋ(ತಲೆಯ ಭಾರ ಇಳಿಯಿತು)ಜವಬ್ದಾರಿ ಕಳೆಯಿತು.

೩. ಆಗ್ ನಾಖಾವಾಳೊ (ಬೆಂಕಿ ಹಚ್ಚುವವನು) ಜಗಳ ಗಂಟ, ಚಾಡಿಕೋರ.

೪. ಮಶ್ಕಾಮಾರ್ (ಬೆಣ್ಣೆಹಚ್ಚು) ಮಾಸ್ಕಾಹೊಡಿಯುವುದು, ನಯವಂಚಕತನ.

೫. ಉಪ್ಪರ್ ಚಢಾವಾನು (ಮೇಲಕ್ಕೇರಿಸು) ಹೊಗಳು.

೬. ಮಾಥು ಮೊರೋವಾಳೊ (ತಲೆಹೊಡೆಯುವವನು) ಮೋಸ ಮಾಡುವವನು.

೭. ಘಾವ್‌ಪರ್ ದಾವ್ ಕಾಡ್ (ಗಾಯದ ಮೇಲೆ ಸೇಡು ತೆಗೆಯುವುದು) ಹಳೆಯದನ್ನು ಕೆದಕುವುದು.

೮. ನಾಕ್‌ನ ಜೀಬ್ ಲಗಾಡ (ಮೂಗಿಗೆ ನಾಲಿಗೆಯನ್ನು ತಾಗಿಸು) ಸತ್ಯವನ್ನು ಹೇಳು.

೯. ಫಾಟಾ ಮೊಹಡಾನು (ಹರಕು ಬಾಯಿಯವನು) ಬೊಗಳೆ ಬಿಡುವವನು.

೧೦. ಬೇ ಜೀಬ್ ವಾಳೋ (ಎರಡು ನಾಲಿಗೆಯವನು) ನುಡಿದಂತೆ ನಡೆಯದವನು.

೧೧. ಛಾತೀಪರ್ ಕೇಖ್‌ವಾಳೋ(ಧೈರ್ಯವಂತ) ಎದೆಗಾರಿಕೆ.

೧೨. ಹಾತ್‌ಧ್ಯೊನ್ ಪೀಮೋಪಡ್ಯೋ(ಕೈತೊಳೆದು ಬೆನ್ನುಹತ್ತು) ದುಂಬಾಲು ಬೀಳು

೧೩. ನಾಕ್ ಚೆಢೈನ್ ವಾತೆಕರ್(ಮೂಗೇರಿಸಿ ಮಾತನಾಡು) ಸತ್ಯವಂತನಾಗು.

೧೪. ಆಡೋ ಗೋಡೋ ಫಾಲ್(ಅಡ್ಡಗಾಲು ಹಾಕು) ಕೆಲಸದ ಮಧ್ಯೆತೊಂದರೆ ಕೊಡುವುದು.

೧೫. ಡೋಳಾಮ ಧೂಳನಾಕೆ(ಮೋಸಮಾಡು) ಕಣ್ಣಲ್ಲಿ ಮಣ್ಣು ಹಾಕು.

೧೬. ಮುತ್ತರ್‌ಮಮಾತ್ಸುಲಖಂವ್(ಉಚ್ಚೆಯಲ್ಲಿ ಮೀನು ಹಿಡಿ)ಅಲ್ಲಲ್ಲೆ ಸುತ್ತಿ ಹೊಟ್ಟೆ ತುಂಬಿಸುವುದು)

೧೭. ಡೋಳೋಕಾಡ್(ಕಣ್ಣು ತೆಗೆ) ಕಣ್ಬಿಡು.

೧೮. ಕಾನುಬಡೈಖೋರ್(ಬಡಾಯಿ ಮಾಡಿಕೊಳ್ಳುವವನು)ತನಗೆ ತಾನೇ ಬಡಾಯಿಕೊಚ್ಚಿ ಕೊಳ್ಳುವವನು.

೧೯. ವಾತೆ ವಘಾರ್(ಮಾತಿನ ಒಗ್ಗರಣೆ) ಒಣಜಂಭ

೨೦. ವಿಠ್ಠ್ಯೋಚಾಟ್ಯೋ(ಕೈಲಾಗದವನು) ಎಂಜಲು ನೆಕ್ಕುವವನು.

೨೧. ಮಳ್ವ ಲಗಾಡ್(ಕೊಳೆತದ್ದನ್ನು ಹಚ್ಚು) ಬೆನ್ನು ಹತ್ತುವುದು, ಹಿಂದೆ ಬೀಳು.

೨೨. ಝೂಟಬೋಲೀನ್ ಜಿವ್ಣ ಕರಾವಳೋ(ಸುಳ್ಳು ಜೀವಿಸುವ ಆಶ್ವಾಸನೆ ನೀಡುವವನು) ಮರುಳು ಮಾಡುವವನು.

೨೩. ಹ್ವಾ ಪಾದೀತೋ ಹಿಜ್ಗ ಪೋ(ಇಲ್ಲಿ ಹೂಸಿದರೆ ಅಲ್ಲಿ ವಾಸನೆ) ಯಾವುದೇ ರಹಸ್ಯ ವಿಷಯಗಳು ಬೇಗನೆ ಹರಡುವುದು.

**ಕಥೆಗಳು**

ಹಕ್ಕಿಪಿಕ್ಕಿ ಜನಾಂಗದ ಜನಪದ ಕಥೆಗಳು ಹಕ್ಕಿಪಿಕ್ಕಿ ಜನಾಂಗದ ಸಾಂಸ್ಕೃತಿಕ ಅಧ್ಯಯನಕ್ಕೆ ನೆರವನ್ನು ನೀಡುತ್ತವೆ. ಪರಂಪರಾಗತ ಕಥೆಗಳನ್ನು ಮನೋರಂಜನೆಗೆ ತಲೆ ತಲಾಂತರಗಳಿಂದ ಹೇಳಿಕೊಂಡು ಬಂದಿದ್ದರೂ ಕೂಡ ಚಾರಿತ್ರಿಕ, ಭಾಷಿಕ, ಸಾಮಾಜಿಕ, ಸಾಂಸ್ಕೃತಿಕ, ನೈತಿಕ ಮಾನವ ಶಾಸ್ತ್ರೀಯ ಅಧ್ಯಯನಕ್ಕೆ ಮೂಲಗಳಾಗಿವೆ.

**ನರಿಕಥೆ**

ಇಬ್ಬರು ಬಡಬ್ರಾಹ್ಮಣರು, ಅಣ್ಣ ತಮ್ಮಂದಿರಿಬ್ಬರೂ ಒಂದು ಊರಿನಲ್ಲಿ ಸುಖ ಸಂತೋಷದಿಂದ ಬಾಳುತ್ತಿದ್ದರು. ಕಾಲಕ್ರಮೇಣ ಕಾಲ ಕಳೆದಂತೆ ಅವರುಗಳ ಹೆಂಡತಿಯರ ಜಗಳದಿಂದ ಅಣ್ಣ ತಮ್ಮಂದಿರು ಬೇರೆ-ಬೇರೆಯಾದರು. ಅವರ ಮನೆಯಲ್ಲಿದ್ದ ಆಸ್ತಿಪಾಸ್ತಿಗಳನ್ನು ಸಮಭಾಗವಾಗಿ ಹಂಚಿಕೊಳ್ಳುವ ಜೊತೆಯಲ್ಲಿ ಒಂದು ಎತ್ತು ಮತ್ತು ಒಂದು ಆಕಳು ಇತ್ತು. ಅಣ್ಣನಾದವನು ಎತ್ತನ್ನು ಆರಿಸಿಕೊಂಡನು. ತಮ್ಮನಿಗೆ ಬಡಕಲು ಹಸುವನ್ನು ಕೊಟ್ಟನು. ಹೀಗೆ ಅವರು ಎದುರು ಬದುರಾಗಿ ಜೀವನವನ್ನು ನಡೆಸುತ್ತಿದ್ದರೂ ಕೂಡ ಪರಸ್ಪರ ಪರಿಚಯವಿಲ್ಲದವರಂತೆ ಬಾಳುತ್ತಿದ್ದರು. ಮೂರು ವರ್ಷಗಳು ಕಳೆದ ನಂತರ ಹಸುವಿಗೆ ಒಂದು ಕರು ಆಯಿತು. ಕರುವು ತಾಯಿಯ ಹಾಲನ್ನು ಕುಡಿದು ಅಲ್ಲಲ್ಲಿ ಓಡಾಡುತ್ತಾ ಅಣ್ಣನ ಎತ್ತಿನ ಹತ್ತಿರ ಬಂದು ನಿಂತುಕೊಂಡಿತು. ಆಗ ಅಣ್ಣನು ನೋಡಿ ತನ್ನ ಕರು ಹಾಕಿದೆ ಎಂದು ಊರಿನ ಜನರೆಲ್ಲರಿಗೂ ಕರೆದು ತೋರಿಸಿದನು. ತಮ್ಮನು ತನ್ನ ಹಸುವನ್ನು ನೋಡಿದಾಗ ಕರುವನ್ನು ಹಾಕಿರುವುದು ಗೊತ್ತಾಯಿತು. ತಮ್ಮನು ಅಣ್ಣನಿಗೆ ತನ್ನ ಹಸು ಕರುಹಾಕಿದೆ ಎಂದು ಎಷ್ಟು ಹೇಳಿದರೂ ಕೇಳಲಿಲ್ಲ. ಇದೇ ಸಮಯದಲ್ಲಿ ಅಲ್ಲಿಗೆ ಒಂದು ನರಿಯು ಬಂದಿತು. ಅಲ್ಲಿ ಜನರೆಲ್ಲರೂ ಸೇರಿದ್ದರು. ಈ ಅಣ್ಣ ತಮ್ಮಂದಿರ ಸಮಸ್ಯೆಯನ್ನು ನರಿಯಣ್ಣನೇ ಬಗೆಹರಿಸಬೇಕೆಂದು ಕೇಳಿಕೊಂಡರು. ಅಣ್ಣನು ನರಿಯಣ್ಣನಿಗೆ ಈ ರೀತಿ ಹೇಳಿದನು. – ನನ್ನ ಎತ್ತು ಕರುವನ್ನು ಹಾಕಿದೆ ಎಂದನು. ನರಿಯಣ್ಣನು ತನ್ನ ಕಣ್ಣನ್ನು ತಿಕ್ಕಿಕೊಳ್ಳುತ್ತಲೇ ಇದ್ದನು. ಇದನ್ನು ನೋಡಿದ ಅಣ್ಣನು ನರಿಯಣ್ಣನನ್ನು ಕುರಿತು, ನಿನ್ನ ಕಣ್ಣಿಗೆ ಏನಾಗಿದೆ. ಎಂದು ಪ್ರಶ್ನಿಸಿದನು. ಆಗ ನರಿಯಣ್ಣನು–ಏನು ಮಾಡಲಿ ಮಂಡಜೀವಿ ಸಮುದ್ರಕ್ಕೆ ಬೆಂಕಿ ಹಚ್ಚಿತು. ಅದನ್ನು ಆರಿಸಲು ಹೋಗಿ ನನ್ನ ಕಣ್ಣುಗಳು ಮಬ್ಬಾಗಿವೆ, ಹಾಗಾಗಿ ನನ್ನ ಕಣ್ಣುಗಳನ್ನು ಉಜ್ಜಿಕೊಳ್ಳುತ್ತಿದ್ದೇನೆ. ಎಂದಿತು.

ಆಗ ಅಣ್ಣನಾದವನು– ಎಲ್ಲಾದರೂ ಉಂಟೇ? ಸಮುದ್ರಕ್ಕೆ ಬೆಂಕಿ ಹಚ್ಚಿಕೊಳ್ಳುವುದೆಂದರೆ ಸುಲಭದ ಮಾತೇ? ಎಂದನು. ಆಗ ನರಿಯಣ್ಣನು ಉತ್ತರಿಸುತ್ತಾನೆ. ಎಲ್ಲಾದರೂ ಉಂಟೆ? ಎತ್ತು ಕರುವನ್ನು ಹಾಕುವುದು ಸಾಧ್ಯವೆ? ಎಂದು. ಆಗ ಮಂದಬುದ್ಧಿಯ ಅಣ್ಣನಿಗೆ ಎತ್ತು ಕರುಹಾಕಲು ಸಾಧ್ಯವಿಲ್ಲ ಎಂದು ಅರಿವಾಯಿತು. ಅಣ್ಣನು ಕರುವನ್ನು ತಮ್ಮನಿಗೆ ಒಪ್ಪಿಸಿ ಸುಖ ಸಂತೋಷದಿಂದ ಜೀವನವನ್ನು ಮಾಡತೊಡಗಿದರು. ನರಿಯಣ್ಣನ ಬುದ್ಧಿಶಕ್ತಿಯನ್ನು ಮೆಚ್ಚಿ ಊರಿನ ಜನರೆಲ್ಲರೂ ಹೊಗಳಿದರು. ಆಗ ನರಿಯಣ್ಣನಿಗೆ ತುಂಬಾ ಖುಷಿಯಾಗಿ ಹೊರಟು ಹೋಯಿತು.

**ಕರಡಿ ಮತ್ತು ನರಿಯಣ್ಣ**

ಕರಡಿ ಮತ್ತು ನರಿಯು ಒಂದಾನೊಂದು ಕಾಲದಲ್ಲಿ ತುಂಬಾ ಅನ್ಯೋನ್ಯ ಮತ್ತು ಸ್ನೇಹದಿಂದ ಜೀವನ ಮಾಡುತ್ತಿದ್ದವು. ಒಮ್ಮೆ ನರಿಯಣ್ಣನು ನಮ್ಮ ಜೀವನ ಸಾಕಾಗಿದೆ, ಏನಾದರೂ ಮಾಡಿ ಇಡೀ ವರ್ಷ ದುಡಿದು ಕುಳಿತು ತಿನ್ನುವಷ್ಟನ್ನು ದುಡಿಯಬೇಕು ಎಂದು ಕರಡಿರಾಯನಿಗೆ ಹೇಳಿದನು. ಇದಕ್ಕೆ ಕರಡಿರಾಯನು–ಏನು ಉಪಾಯ ಮಡೋಣ ಎಂದು ಪ್ರಶ್ನಿಸಿದನು. ಆಗ ನರಿಯಣ್ಣನು – ನಾವಿಬ್ಬರೂ ಸೇರಿ ವ್ಯವಸಾಯ ಮಾಡೋಣ ಎಂದನು. ಕರಡಿರಾಯನು ಏನನ್ನು ಯೋಚಿಸದೇ ಒಪ್ಪಿಕೊಂಡನು. ಮಳೆಗಾಲವು ಪ್ರಾರಂಭವಾದಗ ಅದಕ್ಕೆ ಬೇಕಾದ ವಸ್ತುಗಳನ್ನು ಜೋಡಿಸಿಕೊಂಡರು. ಕರಡಿರಾಯನು ನೇಗಿಲನ್ನು ಎಳೆದರೆ ನರಿಯಣ್ಣನು ಬಿತ್ತನೆ ಮಾಡುವುದಾಗಿ ಇಬ್ಬರೂ ಒಪ್ಪಿಕೊಂಡರು. ಒಂದು ದಿನದಂದು ಇಬ್ಬರೂ ಸೇರಿ ಯಾವ ಬೆಳೆ ಹಾಕಬೇಕೆಂದು ಯೋಚನೆ ಮಾಡಿದ ನಂತರ ಕಡಲೆಕಾಯಿ ಬಿತ್ತನೆ ಮಾಡುವ ಆಲೋಚನೆ ಹೊಳೆಯಿತು. ಇಬ್ಬರೂ ಸೇರಿ ಬಿತ್ತನೆ ಮಾಡಿದರು. ಫಸಲು ಚೆನ್ನಾಗಿ ಬೆಳೆಯಿತು. ಒಂದು ದಿನ ನರಿಯಣ್ಣನು, ಕರಡಿರಾಯನನ್ನು ಕುರಿತು – ಕರಡಿರಾಯ, ನಾವು ಬೆಳೆದ ಬೆಳೆಯಲ್ಲಿ ನಿನಗೆ ಮೇಲಿನದು ಬೇಕೋ ಅಥವಾ ಕೆಳಗಿನದು ಬೇಕೋ ಎಂದು ಕೇಳಿದನು. ಆಗ ಕರಡಿರಾಯನು ತನಗೆ ಕಾಣುತ್ತಿರುವುದೆಲ್ಲಾ ಹಚ್ಚ ಹಸುರಾಗಿರುವುದರಿಂದ, ನನಗೆ ಮೇಲಿನ ಬೆಳೆ ಇರಲಿ ಎಂದನು. ಅದಕ್ಕೆ ನರಿಯಣ್ಣನು ಒಪ್ಪಿಗೆ ಸೂಚಿಸಿದನು. ಆಗ ನರಿಯಣ್ಣನು ನನಗೆ ಕಲ್ಲುಸಿಗಲಿ, ಮಣ್ಣು ಸಿಗಲಿ, ನಿನ್ನ ತೀರ್ಮಾನದಂತೆ ನನಗೆ ಭಾಗದಲ್ಲಿ ಏನನ್ನೂ ಕೇಳಬಾರದು ಎಂದಿತು. ಆಗ ಕರಡಿರಾಯನು ನಿನ್ನ ಭಾಗದಲ್ಲಿ ನನಗೆ ಸ್ವಲ್ಪವೂ ಬೇಡ ಎಂದು ಖಡಾಖಂಡಿತವಾಗಿ ಹೇಲಿದನು. ನರಿಯಣ್ಣನೂ ಈ ಮಾತಿಗೆ ಒಪ್ಪಿಗೆಯನ್ನು ಸೂಚಿಸಿದನು. ಬೆಳೆ ಸಮೃದ್ಧವಾಗಿ ಬೆಳೆಯಿತು. ಕಡಲೆಕಾಯಿ ಗಿಡವನ್ನು ಕೀಳಲಾಯಿತು. ಸೊಪ್ಪು ಕರಡಿರಾಯನ ಪಾಲಾಯಿತು. ಕಡಲೆಕಾಯಿಯು ನರಿಯಣ್ಣನ ಪಾಲಾಯಿತು. ಇದನ್ನು ನೋಡಿದ ಕರಡಿರಾಯನಿಗೆ ತುಂಬಾ ನೋವಾಯಿತು. ಆಗ ನರಿಯಣ್ಣನು ಈ ವರ್ಷ ನನ್ನ ಪಾಲಾದರೆ ಮುಂದಿನ ವರ್ಷ ನಿನ್ನದು ಆಗುತ್ತದೆ. ಎಂದು ಸಮಾಧಾನ ಮಾಡಿದನು. ಮತ್ತೆ ಮುಂದಿನ ವರ್ಷದ ಮಳೆಗಾಲ ಬಂದಿತು. ಭೂಮಿಯನ್ನು ಉಳುಮೆ ಮಾಡಿ ಯಾವ ಬೆಳೆಯನ್ನು ಹಾಕಬೇಕೆಂದು ಯೋಚಿಸಿದಾಗ ಜೋಳ ಹಾಕಬೇಕೆಂದು ನಿರ್ಧರಿಸಿಕೊಂಡರು. ಜೋಳವನ್ನು ಬಿತ್ತನೆ ಮಾಡಿದರು. ಬೆಳೆಯೂ ಕೂಡ ಸಮೃದ್ಧವಾಗಿ ಬಂದಿತು. ಆಗ ನರಿಯಣ್ಣನು ಕರಡಿರಾಯನನ್ನು

ಕುರಿತು ನಿನಗೆ ಮೇಲಿನದು ಬೇಕೋ ಅಥವಾ ಕೆಳಗಿನದು ಬೇಕೋ ಎಂದು ಕೇಳಿದಾಗ ಕರಡಿರಾಯನು ಏನನ್ನೂ ಯೋಚಿಸದೇ ನನಗೆ ಕೆಳಗಿನ ಬೆಳೆ ಬೇಕೆಂದು ಹೇಳಿದನು. ಆಗ ನರಿಯಣ್ಣನು ಇದಕ್ಕೆ ಒಪ್ಪಿಗೆ ಸೂಚಿಸಿದನು. ಕರಡಿರಾಯನಿಗೆ ಉಳಿದ ಸಿಪ್ಪೆದಂಟನ್ನು ಬಿಟ್ಟುಕೊಟ್ಟನು. ಇದನ್ನು ನೋಡಿದ ಕರಡಿರಾಯನಿಗೆ ತುಂಬಾ ಕೋಪ ಬಂದಿತು. ನರಿಯಣ್ಣನ ಸಹವಾಸವೇ ಬೇಡವೆಂದು ಆ ಪ್ರದೇಶವನ್ನು ಬಿಟ್ಟು ನರಿಯಣ್ಣನನ್ನು ದ್ವೇಷ ಮಾಡುತ್ತಾ ಕಳ್ಳನರಿ, ಮೋಸದ ನರಿ, ಎಂದುಕೊಂಡು ಹೊರಟು ಹೋದನು.

**೪.೯. ಪ್ರದರ್ಶನಾತ್ಮಕ ಕಲೆಗಳು**

ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗವು ಮೂಲತಃವಾಗಿ ಬೇಟೆಯ ಮೂಲ ಕಸುಬನ್ನು ಹೊಂದಿದ ಅಲೆಮಾರಿ ಜನಾಂಗವಾಗಿದೆ. ಬೇರೆ ಬೇರೆ ಉದ್ಯೋಗಗಳನ್ನು ಮಾಡುವುದರ ಮೂಲಕ ಒಂದೇ ಕಡೆ ನೆಲೆ ನಿಲ್ಲುವ ಆಸಕ್ತಿಯು ಅವರಲ್ಲಿ ಕಂಡುಬರುತ್ತಿದೆ. ಇವರ ಜೀವನ ಕಷ್ಟಕರವಾದ್ದರಿಂದ ಕಲೆಗಳಲ್ಲಿ ಆಸಕ್ತಿ ಕಡಿಮೆ ಇದೆ. ಆದಾಗ್ಯೂ ತಮ್ಮದೇ ಆದ ಬುಡಕಟ್ಟು ಸಂಸ್ಕೃತಿಗೆ ಅನುಗುಣವಾಗಿ ಅನೇಕ ಪ್ರದರ್ಶನಾತ್ಮಕ ಕಲೆಗಳನ್ನು ಹೊಂದಿದ್ದಾರೆ.

**ಜನಪದ ಕುಣಿತಗಳು**

ಹಕ್ಕಿ ಪಿಕ್ಕಿ ಜನಾಂಗದ ಗಂಡಸರು ಮತ್ತು ಹೆಂಗಸರು ಹಬ್ಬ ಹರಿದಿನಗಳಲ್ಲಿ, ಮದುವೆಯಂತಹ ಶುಭ ಸಮಾರಂಭಗಳಲ್ಲಿ ಹಾಡು, ಕೇಕೆಗಳ ಮೂಲಕ ಸಂತೋಷದಿಂದ ಕುಣಿತಗಳಲ್ಲಿ ಭಾಗ ವಹಿಸುತ್ತಾರೆ. ಮನುಷ್ಯನ ಮೂಲತಃ ಸ್ವಭಾವವೇ ಕುಣಿತವಾಗಿದೆ. ಅದೇ ರೀತಿ ಹಕ್ಕಿ ಪಿಕ್ಕಿಯರು ವಿಶೇಷ ಸಂದರ್ಭಗಳಲ್ಲಿ, ಸಾಮಾನ್ಯ ಸಂದರ್ಭಗಳಲ್ಲಿ ತಮ್ಮ ಸಂತೋಷವನ್ನು ಕುಣಿಯುವುದರ ಮೂಲಕ ವ್ಯಕ್ತಪಡಿಸುತ್ತಾರೆ.

ಗಂಡಸರು ತಮ್ಮ ಹಬ್ಬಗಳಲ್ಲಿ, ಜಾತ್ರೆಗಳಲ್ಲಿ ಹಾಡಿಗೆ, ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ. ಇವರು ಕುಣಿಯುವಾಗ ಇತರೇ ಜನಸಮುದಾಯಗಳ ಜನರು ಬಂದು ನೋಡಿ ಸಂತೋಷಪಡುತ್ತಾರೆ. ಹೆಂಗಸರೂ ಕೂಡ ಗಂಡಸರೊಂದಿಗೆ ಯಾವುದೇ ಭೇದಭಾವವಿಲ್ಲದೆ ಕುಣಿಯುವುದರ ಮೂಲಕ ನೃತ್ಯ ಮಾಡುತ್ತಾರೆ. ಮಕ್ಕಳು ಮತ್ತು ಮುದುಕರು ಕೂಡ ಸಾಮೂಹಿಕವಾಗಿ ನೃತ್ಯಗಳಲ್ಲಿ, ಕುಣಿತಗಳಲ್ಲಿ ಭಾಗವಹಿಸುತ್ತಾರೆ. ಯಾವುದೇ ಬೆಡಗಿನವರು ದೇವರ ಪೂಜೆ, ಹಬ್ಬ ಹರಿದಿನಗಳಂತಹ ಸಮಾರಂಭಗಳನ್ನು ಮಾಡಿದಾಗ ಎಲ್ಲಾ ಬೆಡಗಿನವರು ಕೂಡ ಭಾಗವಹಿಸಿ ಕುಣಿತದಲ್ಲಿ ಪಾಲ್ಗೊಳ್ಳುತ್ತಾರೆ.

**ಜನಪದ ವಾದ್ಯಗಳು**

ಹಕ್ಕಿಪಿಕ್ಕಿಯರು ತಮ್ಮ ಜಾತ್ರೆಗಳಲ್ಲಿ, ಹಬ್ಬಹರಿದಿನಗಳಲ್ಲಿನ ಹಾಡು ಮತ್ತು ಕುಣಿತಗಳ ಸಂದರ್ಭಗಳಲ್ಲಿ ತಮ್ಮದೇ ಆದ ಸರಳವಾದ್ಯಗಳನ್ನು ಬಳಸುತ್ತಾರೆ. ತಪ್ಪಡಿಯು ಇವರ ಮುಖ್ಯವಾದ್ಯವಾಗಿದ್ದು, ಇದನ್ನು ವೃತ್ತಾಕಾರವಾದ ಹಲಗೆಯ ಕಟ್ಟುಬಳಸಿ ಅದಕ್ಕೆ ವೃತ್ತಕಾರದ ಕಬ್ಬಿಣದ ಕಂಠವನ್ನು ಜೋಡಿಸಿ ಕೋಣದ ಚರ್ಮ, ಮೇಕೆಯ ಚರ್ಮ, ಜಿಂಕೆಯ ಚರ್ಮದಲ್ಲಿ

ಯಾವುದಾದರೂ ಒಂದು ಚರ್ಮವನ್ನು ಹದಮಾಡಿ ಚರ್ಮವನ್ನು ಜೋಡಿಸಿ ಚರ್ಮದ ಉರಿಯಲ್ಲಿ ಬಿಗಿಯಾಗಿ ಸುತ್ತಲೂ ಕಟ್ಟುತ್ತಾರೆ. ತಪ್ಪಡಿಯ ಜೊತೆಗೆ ತಾಳವನ್ನು ಉಪಯೊಗಿಸುತ್ತಾರೆ. ಗಂಗಾಳ(ತಟ್ಟೆ)ವನ್ನು ಕೂಡ ವಾದ್ಯವನ್ನಾಗಿ ಬಳಸುತ್ತಾರೆ. ಈ ತಟ್ಟೆಗಳು ಅಲ್ಯೂಮಿನಿಯಂ, ತಾಮ್ರದ ತಟ್ಟೆಗಳಾಗಿರುತ್ತವೆ. ಅಲ್ಲದೆ, ಮೃದಂಗ, ಕಕಾಳಿ, ಡೆಚ್ಚು, ಕೊಳಲು, ಮಡಕೆ, ದಮ್ಮಡಿ, ತಪ್ಪಡಿ(ಹಲಜಿ), ದೊಡ್ಡ ಢೊಳ್ಳು(ಭಾರಿ ಢೋಲ್), ಕಂಚಿನ ಗಂಗಾಳ(ಕಂಚನಿ ಥಾಳಿ), ಗೆಜ್ಜೆಗಳು (ಗುಫ್ಘರ), ಕಂಸಾಳೆ(ಖಂಜಾಳಿ) ಮುಂತಾದ ವಾದ್ಯಗಳನ್ನು ಬಳಸುತ್ತಾರೆ.

**ಜನಪದ ಕ್ರೀಡೆಗಳು**

ಹಕ್ಕಿಪಿಕ್ಕಿಯರು ತಮ್ಮ ಬಿಡುವಿನ ವೇಳೆಯಲ್ಲಿ ಕುಟುಂಬದೊಂದಿಗೆ ಅಥವಾ ತಮ್ಮ ಸಮುದಾಯದ ಜನರೊಂದಿಗೆ, ಗಂಡಸರು, ಹೆಂಗಸರು, ಮಕ್ಕಳು, ಮುದುಕರು ಕ್ರೀಡೆಗಳಲ್ಲಿ ಭಾಗವಹಿಸುತ್ತಾರೆ. ಹಕ್ಕಿಪಿಕ್ಕಿಯರು ತಮ್ಮ ಮನರಂಜನೆಗಾಗಿ ಇಂತಹ ಕ್ರೀಡೆಗಳನ್ನು ಆಡುತ್ತಾರೆ. ಈ ಕ್ರೀಡೆಗಳು ಮಕ್ಕಳಿಗೆ, ವಯಸ್ಕರಿಗೆ ಬೇಟೆಯ ತರಬೇತಿಯನ್ನು ನೀಡುವ ರೀತಿಯಲ್ಲಿರುತ್ತವೆ.

**ಕೈಮುಚ್ಚು ಆಟ:** ಐದರಿಂದ ಹತ್ತು ವರ್ಷದ ಒಳಗಿನ ಮಕ್ಕಳು ಈ ಆಟವನ್ನು ಆಡುತ್ತಾರೆ. ಬೆಳದಿಂಗಳ ರಾತ್ರಿಯ ಸಮಯದಲ್ಲಿ ಮಕ್ಕಳೆಲ್ಲಾ ಒಂದು ಕಡೆ ಸೇರುತ್ತಾರೆ. ಎಲ್ಲರೂ ಸೇರಿ ಗುಂಪಿನ ನಾಯಕನನ್ನು ಆಯ್ಕೆ ಮಾಡುತ್ತಾರೆ. ಗುಂಪಿನ ನಾಯಕನು ಆಟದ ನಿಯಮಗಳನ್ನು ಹೇಳುತ್ತಾನೆ. ಎಲ್ಲಾ ಮಕ್ಕಳು ತಮ್ಮ ಕೈಗಳನ್ನು ನೆಲದ ಮೇಲೆ ಬೋರಲು ಮಾಡಿ ಕುಳಿತುಕೊಳ್ಳುತ್ತಾರೆ. ಮುಚ್ಚಿದ ಕೈಗಳನ್ನು ಒಬ್ಬರ ನಂತರ ಒಬ್ಬರಂತೆ ನಾಯಕನು ಮಕಾಡೆ ಮಾಡುತ್ತಾನೆ. ಕೊನೆಯಲ್ಲಿ ಉಳಿದವರು ಸೋತು ಹೋದಂತೆ ಎನ್ನಲಾಗುತ್ತದೆ. ಎಲ್ಲರೂ ಮುಷ್ಟಿ ಬಿಗಿದುಕೊಂಡು ಸೋತವನ ಮುಷ್ಟಿಯ ಮೇಲೆ ಮುಷ್ಟಿಗಳನ್ನು ಇಡುತ್ತಾರೆ. ಆ ನಂತರ ನಾಯಕನು ಕೈಮುಚ್ಚಿಕೊಂಡವರನ್ನು ಈ ರೀತಿಯಾಗಿ ಪ್ರಶ್ನೆಗಳನ್ನು ಕೇಳುತ್ತಾನೆ. ಈ ಪ್ರಶ್ನೋತ್ತರಗಳು ಮಕ್ಕಳ ಮನಸ್ಸಿನಲ್ಲಿ ಊಹೆ, ಕಲ್ಪನೆ, ಸೃಜನಶೀಲತೆಗಳನ್ನು ಉಂಟುಮಾಡುತ್ತವೆ.

| **ಪ್ರಶ್ನೆ** | | **ಉತ್ತರ** |
|---|---|---|
| ನಿನ್ನ ಕೈ ಎಲ್ಲಿ | – | ಇಲಿ ತೆಗೆದುಕೊಂಡು ಹೋಯಿತು |
| ಇಲಿ ಎಲ್ಲಿ? | – | ಗುದ್ದಿನಲ್ಲಿ ಹೋಯಿತು |
| ಗುದ್ದು ಎಲ್ಲಿ? | – | ನೀರು ತುಂಬಿತು |
| ನೀರು ಎಲ್ಲಿ? | – | ದನ ಕುಡಿದಿದೆ |
| ದನ ಎಲ್ಲಿ? | – | ಕಳ್ಳರು ಕದ್ದರು |
| ಕಳ್ಳರು ಎಲ್ಲಿ? | – | ಗಿಡದ ಮೇಲೆ |
| ಗಿಡ ಎಲ್ಲಿ? | – | ಸುಟ್ಟು ಹೋಯಿತು |
| ಬೂದಿ ಎಲ್ಲಿ | – | ಹಾರಿ ಹೋಯಿತು |

**ಚಿಗರೆ ಹೊಡೆಯುವ ಆಟ**

ಬೆಳದಿಂಗಳ ರಾತ್ರಿಯ ಸಮಯದಲ್ಲಿ ಮದುವೆ, ಹಬ್ಬ ಹರಿದಿನಗಳಂತಹ ಸಮಾರಂಭಗಳಲ್ಲಿ ಈ ಆಟವನ್ನು ಮಕ್ಕಳು ಆಡುತ್ತಾರೆ. ಈ ಆಟದ ಉದ್ದೇಶವೆಂದರೆ ಹಕ್ಕಿಪಿಕ್ಕಿಯರ ಮಕ್ಕಳು ಬೇಟೆಯ ತರಬೇತಿಯನ್ನು ಪಡೆಯುವುದು ಮತ್ತು ವಾಜ್ಯಗಳನ್ನು ಪರಿಹರಿಸುವ ಕೌಶಲ್ಯಗಳನ್ನು ಬೆಳೆಸುವುದು ಆಗಿದೆ. ಮಕ್ಕಳ ಗುಂಪಿನಲ್ಲಿ ರಾಜನನ್ನು ಮತ್ತು ಪ್ರಧಾನಮಂತ್ರಿಯನ್ನು ಆಯ್ಕೆ ಮಾಡುತ್ತಾರೆ. ಉಳಿದ ಮಕ್ಕಳು ಎರಡು ಗುಂಪು ಆಗುತ್ತಾರೆ. ಒಂದು ಬೇಟೆಗಾರರು ಗುಂಪು, ಇನ್ನೊಂದು ಚಿಗರೆ ಉಳ್ಳವರ ಗುಂಪು ಆಗುತ್ತದೆ. ಬೇಟೆಗಾರರ ಗುಂಪಿನಲ್ಲಿ ಗುರಿಕಾರನನ್ನು ಆರಿಸಿ ಅವನ ಕಣ್ಣು ಕಟ್ಟುತ್ತಾರೆ. ಇನ್ನೊಬ್ಬನನ್ನು ಕುದುರೆಯನ್ನಾಗಿ ಮಾಡಿ ಗುರಿಗಾರನು ಕುದುರೆಯ ಮೇಲೆ ಸವಾರಿ ಹೋಗುವಂತೆ ಹೇಳುತ್ತಾರೆ. ಚಿಗರೆ ಇರುವ ಗುಂಪಿನಲ್ಲಿ ಒಬ್ಬನನ್ನು ಚಿಗರೆ ಎಂದು ಆಯ್ಕೆ ಮಾಡಿ ಅವನಿಗೆ ಕೆಂಪು ಬಣ್ಣ ಬಟ್ಟೆಯನ್ನು ಹೊದಿಸಲಾಗುತ್ತದೆ. ಬೇಟೆಗಾರರು ಆಯುಧಗಳ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಾರೆ. ಗುರಿಕಾರನು ಗುರಿಯನ್ನು ಪ್ರಯೋಗ ಮಾಡುತ್ತಾನೆ. ಬೇಟೆಯು ಸಾಯುತ್ತದೆ. ಚಿಗರೆಯನ್ನು ಕಳೆದುಕೊಂಡವರು ಸಾಯುತ್ತಾರೆ. ಬೇಟೆಗಾರರ ಗುಂಪು ಬೇಟೆಯನ್ನು ಹಂಚಿಕೊಳ್ಳುವುದರಲ್ಲಿ ತೊಡಗುತ್ತಾರೆ. ಆಗ ಪ್ರಧಾನಮಂತ್ರಿ ಮತ್ತು ರಾಜನು ಬಂದು ಬೇಟೆಯ ಹಂಚಿಕೆಯನ್ನು ಪೂರ್ಣ ಮಾಡುತ್ತಾರೆ.

**ಕಾಕಡೀಖೇಲ್(ಸೌತೆಕಾಯಿ ಆಟ):** ಈ ಆಟವನ್ನು ಮಕ್ಕಳ ಜೊತೆಗೆ ದೊಡ್ಡವರೂ ಆಡುತ್ತಾರೆ. ಈ ಆಟವು ಬೇಟೆಗೆ ಸಂಬಂಧಪಟ್ಟ ಆಟವಾಗಿದೆ. ಮಕ್ಕಳು ಸೌತೆಕಾಯಿಯಾಗಿ ಸಾಲಾಗಿ ಕುಳಿತಿರುತ್ತಾರೆ. ಇಲ್ಲಿ ಸೌತೆಕಾಯಿಗಳನ್ನು ಬೆಳೆಯುವ ತೋಟಗಾರ, ಅದನ್ನು ಕಿತ್ತುಕೊಳ್ಳುವವನು ಮತ್ತು ರಾಜ, ಹೀಗೆ ಮೂವರು ಪ್ರಮುಖ ಆಟಗಾರರು ಇರುತ್ತಾರೆ. ಇವರ ನಡುವಿನ ಸಂಭಾಷಣೆಯ ಮೂಲಕ ಆಟವನ್ನು ಪ್ರಾರಂಭಿಸುತ್ತಾರೆ. ಈ ಆಟವು ಸಾಮಾನ್ಯ ಜನರ ಮೇಲೆ ರಾಜಪ್ರಭುತ್ವದ ದೌರ್ಜನ್ಯ, ದಬ್ಬಾಳಿಕೆ ನಡೆಯುವುದನ್ನು ತಿಳಿಸುತ್ತದೆ.

ತೋಟಗಾರ – ನಿಮ್ಮ ರಾಜ ಏನು ಹೇಳಿದ್ದಾನೆ?

ಕಿತ್ತುಕೊಳ್ಳುವವನು – ಸೌತೆಕಾಯಿ ಕೇಳಿದನು, ಕಿತ್ತುಕೊಡು

ತೋಟಗಾರ – ಇನ್ನು ಬಲಿತಿಲ್ಲವಲ್ಲ, ಹೇಗೆ ಕೊಡುವುದು (ರಾಜನ ಮುಂದೆ)

ರಾಜ – ಕಿತ್ತುಕೊಡಲೇಬೇಕು

ಕಿತ್ತುಕೊಳ್ಳುವವನು – ಬೇಗ ಕಿತ್ತುಕೊಡು

ತೋಟಗಾರ – ಕಿತ್ತುಕೋ ಹೋಗು

ಕಿತ್ತುಕೊಳ್ಳುವವನು – ಕಾಕಡಿ ಕಾಟು ಭರಿ ಆಳಾಂದ್ರ ಎಂದು ಹೇಳುತ್ತಾ ಎರಡೂ ಕೈಗಳಿಂದ ಸೌತೆಕಾಯಿಗಳನ್ನು ಕಿತ್ತುಕೊಳ್ಳುತ್ತಾನೆ.

ಈ ರೀತಿ ಹಕ್ಕಿಪಿಕ್ಕಿಯರು ಕಳ್ಳ ಪೋಲಿಸರ ಆಟ, ಕಣ್ಣು ಮುಚ್ಚುವ ಆಟ, ಗೋಲಿ, ಆಟ, ಚಿಣ್ಣಿದಾಂಡು ಆಟ, ಬುಗರಿ ಆಟ, ಅವರನ್ನು ಬಿಟ್ಟು ಇವರನ್ನು ಬಿಟ್ಟು ಆಟ, ರಾಜರಾಗಿ ಆಟ,

ಮರಕೋತಿ ಆಟ, ಹುಂದ್ರಾಹುಂದಿ(ಇಲಿ ಬೆಕ್ಕಿನ ಆಟ), ಮೀರ್‌ಪಾಡಿ(ಬಳೀ ಆಟ), ವಾಗ್‌ನು ಖೇಲಿಯೆ(ಮರಸುತ್ತುವ ಆಟ), ಹಾಖ್‌ಣಿನೂ ಖೇಲ್(ಕಣ್ಣು ಮುಚ್ಚುವ ಆಟ), ಸುರ್ ಸುರ್ ಬತ್ತಿ ಆಟ, ಪಿಯೋ ಪಿಯೋ ಆಟ, ರೌಂಡ್ ಆಟ, ಕಪ್ಪೆ ಆಟ, ಕುಂಟೋ ಬಿಲ್ಲೆ ಆಟ, ಮುಚ್ಚೋ ಆಟ, ಮಿಶಿನ್ ಆಟ ಮುಂತಾದ ಆಟಗಳನ್ನು ಆಡುತ್ತಾರೆ.

**ಜನಪದ ಕರಕುಶಲ ಕಲೆಗಳು**

ಹಕ್ಕಿ ಪಿಕ್ಕಿ ಜನಾಂಗದಲ್ಲಿ ಕರಕುಶಲಕಲೆಗಳು ತುಂಬಾ ವಿರಳ. ಕಾರಣವೇನೆಂದರೆ ಇವರು ಯಾವಾಗಲೂ ಬೇಟೆ, ವ್ಯಾಪಾರ ಮತ್ತು ಇತರೆ ವೃತ್ತಿಗಳಲ್ಲಿ ತೊಡಗಿಕೊಂಡಿರುತ್ತಾರೆ.

**ಹಚ್ಚೆ ಹಾಕಿಸಿಕೊಳ್ಳುವುದು**

ಹಕ್ಕಿ ಪಿಕ್ಕಿಯರಲ್ಲಿ ಹಚ್ಚೆ ಹಾಕಿಸಿಕೊಳ್ಳುವುದು ಒಂದು ಹವ್ಯಾಸವಾಗಿದೆ. ಈ ಹಚ್ಚೆಗಳು ಚರ್ಮದ ಮೇಲೆ ಶಾಶ್ವತವಾದ ಗುರುತನ್ನು ಉಂಟು ಮಾಡುತ್ತವೆ. ಹಕ್ಕಿಪಿಕ್ಕಿ ಹೆಣ್ಣುಮಕ್ಕಳು, ಸ್ತ್ರೀಯರು ತಮ್ಮ ಎರಡೂ ಹುಬ್ಬಿನ ನಡುವೆ ನಾಮ ಅಥವಾ ಚುಕ್ಕೆಯಂತೆ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ. ಹಚ್ಚೆ(ಗೊಂಡನ್)ಯನ್ನು ಹಣೆ, ಕಣ್ಣಿನ ಪಕ್ಕದಲ್ಲಿ, ಗಲ್ಲದ ಮೇಲೆ, ಕೈ ಅಥವಾ ಕಾಲಿನ ಮೇಲೆ, ಹಾಕಿಸಿಕೊಳ್ಳುತ್ತಾರೆ. ಗಂಡಸರು ತೋಳಿನ ಮೇಲೆ, ಎದೆಯ ಮೇಲೆ, ಕೈಗಳ ಮೇಲೆ, ಹನುಮಂತ, ಕೃಷ್ಣ, ಗಿಡಮರ, ಬಳ್ಳಿಗಳು, ಹೆಸರುಗಳನ್ನು ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಹೆಂಗಸರು ಹೆಬ್ಬೆರಳು, ತೋರುಬೆರಳು, ಅಥವಾ ಬೆರಳಿನ ಬುಡದ ಮಧ್ಯದಲ್ಲಿ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಗಂಡಸರಂತೆ, ಹೆಣ್ಣುಮಕ್ಕಳು ತೋಳು, ಕೈಗಳ ಮೇಲೆ ರಂಗೋಲಿ, ಗಿಡಮರ, ಬಳ್ಳಿಗಳ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಮದುವೆಯಾದ ಸ್ತ್ರೀಯರು ಕೈ ಮೇಲೆ ಗಂಡನ ಹೆಸರನ್ನು ಹಾಕಿಸಿಕೊಳ್ಳುತ್ತಾರೆ.

**ರಂಗೋಲಿ**

ಹಕ್ಕಿಪಿಕ್ಕಿಯರು ಸುಂದರವಾದ ರಂಗೋಲಿಗಳನ್ನು ಹಾಕುತ್ತಾರೆ. ಮನೆಯ ಮುಂದೆ, ದೇವಸ್ಥಾನಗಳ ಮುಂದೆ, ದೇವರ ಮುಂದೆ, ನವಿಲು, ಹುಲಿ, ಪಕ್ಷಿಗಳು, ಬಾಸಿಂಗ, ಬಳ್ಳಿಗಳು ಮುಂತಾದ ರಂಗೋಲಿಗಳನ್ನು ಹಾಕುತ್ತಾರೆ. ವಿಶೇಷವಾದ ಹಬ್ಬಗಳು, ಜಾತ್ರೆಗಳು, ಮದುವೆಯಂತಹ ಶುಭ ಸಮಾರಂಭಗಳಂದು ಆಕರ್ಷಣೀಯವಾದ ರಂಗೋಲಿಗಳನ್ನು ಹಾಕುತ್ತಾರೆ.

**ಕಸೂತಿ ಕಲೆ**

ಹಕ್ಕಿಪಿಕ್ಕಿಯವರು ತಮ್ಮದೇ ಆದ ಕಸೂತಿ ಕಲೆಯನ್ನು ಹೊಂದಿದ್ದಾರೆ. ಕಸೂತಿಗೆ ಬೇಕಾದ ವಸ್ತುಗಳನ್ನು ನಗರಗಳಿಂದ ತಂದು ಮಗುವಿಗೆ ಕುಲಾಯಿ, ಮಕ್ಕಳಿಗೆ ಟೋಪಿ, ತೊಟ್ಟಿಲುಗಳಿಗೆ ಅಲಂಕಾರಗಳನ್ನು ಮಾಡುವುದಕ್ಕಾಗಿ ಬಣ್ಣ ಬಣ್ಣದ ಪಕ್ಷಿಗಳು, ಹೂವುಗಳನ್ನು ಒಳಗೊಂಡಿರುವ ಬಟ್ಟೆಗಳನ್ನು ತಮ್ಮ ಕೈಗಳಿಂದಲೇ ತಯಾರಿಸುತ್ತಾರೆ. ಉಲನ್ ಬಟ್ಟೆಯ ಉಂಡೆಯನ್ನು ಪೇಟೆಯಿಂದ ತಂದು ಬಿದಿರುಗಳನ್ನು ಉಪಯೋಗಿಸಿಕೊಂಡು ಬೀಸಣಿಕೆಗಳನ್ನು ತಯಾರಿಸುತ್ತಾರೆ. ಜಡೆಗೆ, ಕೂದಲಿಗೆ ಹಾಕಿಕೊಳ್ಳಲು ವಿವಿಧ ರೀತಿಯ ಹೂವುಗಳನ್ನು ತಯಾರಿಸಿಕೊಳ್ಳುತ್ತಾರೆ.

**ಚಿತ್ರದುರ್ಗ ಜಿಲ್ಲೆಯ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಮಾದರಿ(ನಮೂನೆ)ಗಳ ಆಯ್ಕೆಯ ವಿವರಗಳು**

**ಕೋಷ್ಟಕ – ೩**

| ಕ್ರಸಂ. | ತಾಲ್ಲೂಕುಗಳು | ಕುಟುಂಬಗಳು | ಕುಟುಂಬದ ಸದಸ್ಯರ ಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧. | ಚಿತ್ರದುರ್ಗ | ೮ | ೧೨ | ೧೧ | ೨೩ |
| ೨. | ಹಿರಿಯೂರು | ೯ | ೨೫ | ೨೦ | ೪೫ |
| ೩. | ಹೊಸದುರ್ಗ | ೭ | ೧೮ | ೧೭ | ೩೫ |
| ೪. | ಹೊಳಲ್ಕೆರೆ | ೮ | ೧೭ | ೧೫ | ೩೨ |
| ೫. | ಚಳ್ಳಕೆರೆ | ೧೦ | ೨೬ | ೨೪ | ೫೦ |
| ೬. | ಮೊಳಕಾಲ್ಮೂರು | ೮ | ೭ | ೬ | ೧೫ |
| | **ಒಟ್ಟು** | **೫೦** | **೧೦೫** | **೯೩** | **೨೦೦** |

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರು ಕಂಡುಬಂದಿದ್ದಾರೆ. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರು ಮೂಲತಃವಾಗಿ ವಲಸೆ ಹೋಗುವ ಪ್ರವೃತ್ತಿಯ ಬುಡಕಟ್ಟು ಸಮುದಾಯವಾಗಿದೆ. ಚಿತ್ರದುರ್ಗ ಜಿಲ್ಲೆಯ ವಿವಿಧ ಭಾಗಗಳಲ್ಲಿ ಟೆಂಟುಗಳನ್ನು ಹಾಕಿಕೊಂಡು ಜೀವನ ಮಾಡುವ ಇವರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವ ಬುಡಕಟ್ಟು ಸಮುದಾಯವಾಗಿದೆ. ಇತ್ತೀಚೆಗೆ ಒಂದೇ ಪ್ರದೇಶದಲ್ಲಿ ವಾಸಿಸುವ ಪ್ರವೃತ್ತಿ ಕಂಡುಬರುತ್ತಿದೆ.

ಚಿತ್ರದುರ್ಗ ತಾಲ್ಲೂಕಿನಲ್ಲಿ ೮ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ೮ ಕುಟುಂಬಗಳಲ್ಲಿ ೧೨ ಗಂಡು, ೧೧ ಹೆಣ್ಣು, ಒಟ್ಟು ೨೩ ಕುಟುಂಬ ಸದಸ್ಯರಿದ್ದಾರೆ. ಹಿರಿಯೂರು ತಾಲ್ಲೂಕಿನಲ್ಲಿ ೯ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಇದರಲ್ಲಿ ೨೫ ಗಂಡು, ೨೦ ಹೆಣ್ಣು, ಒಟ್ಟು ೪೫ ಕುಟುಂಬ ಸದಸ್ಯರಿದ್ದಾರೆ. ಹೊಸದುರ್ಗ ತಾಲ್ಲೂಕಿನಲ್ಲಿ ೭ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಇದರಲ್ಲಿ ೧೮ ಗಂಡು, ೧೭ ಹೆಣ್ಣು, ಒಟ್ಟು ೩೫ ಕುಟುಂಬ ಸದಸ್ಯರಿದ್ದಾರೆ. ಹೊಳಲ್ಕೆರೆ ತಾಲ್ಲೂಕಿನಲ್ಲಿ ೮ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಈ ೮ ಕುಟುಂಬಗಳಲ್ಲಿ ೧೭ ಗಂಡು, ೧೫ ಹೆಣ್ಣು, ಒಟ್ಟು ೩೨ ಕುಟುಂಬ ಸದಸ್ಯರಿದ್ದಾರೆ. ಚಳ್ಳಕೆರೆ ತಾಲ್ಲೂಕಿನಲ್ಲಿ ೧೦ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಇದರಲ್ಲಿ ೨೬ ಗಂಡು, ೨೪ ಹೆಣ್ಣು, ಒಟ್ಟು ೫೦ ಕುಟುಂಬ ಸದಸ್ಯರಿದ್ದಾರೆ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೮ ಕುಟುಂಬಗಳನ್ನು ಸಂಶೋಧನಾ ಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಅದರಲ್ಲಿ ೭ ಗಂಡು, ೬ ಹೆಣ್ಣು, ಒಟ್ಟು ೧೫ ಸದಸ್ಯರಿದ್ದಾರೆ. ಒಟ್ಟು ಆರು ತಾಲ್ಲೂಕುಗಳಿಂದ ೫೦ ಕುಟುಂಬಗಳನ್ನು ಮಾದರಿಗಳನ್ನಾಗಿ ಆಯ್ದುಕೊಳ್ಳಲಾಗಿದೆ. ಅದರಲ್ಲಿ ೧೦೫ ಗಂಡು, ೯೩ ಹೆಣ್ಣು, ಒಟ್ಟು ೨೦೦ ಸದಸ್ಯರಿದ್ದಾರೆ.

**ಕೋಷ್ಟಕ ೩.೧.**

**ವೈವಾಹಿಕ ಸ್ಥಾನಮಾನ:** ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿನ ವೈವಾಹಿಕ ಸ್ಥಾನಮಾನವನ್ನು ಕೆಳಕಂಡಂತೆ ನೀಡಲಾಗಿದೆ. ಇವರಲ್ಲಿ ಏಕಪತ್ನಿತ್ವ ಮತ್ತು ಏಕಪತಿತ್ವ ವಿವಾಹಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಅಂತರ್‌ಜಾತಿ ವಿವಾಹಕ್ಕೆ ಪ್ರೋತ್ಸಾಹವನ್ನು ನೀಡುವುದಿಲ್ಲ.

| ವಿವರ | ಪ್ರಮಾಣ | ಶೇಕಡ |
|---|---|---|
| ವಿವಾಹಿತರು | ೧೨೧ | ೬೦.೫೦ |
| ಅವಿವಾಹಿತರು | ೪೭ | ೨೩.೫೦ |
| ವಿಧವೆ/ವಿಧುರರು | ೩೨ | ೧೬.೦೦ |
| **ಒಟ್ಟು** | **೨೦೦** | **೧೦೦** |

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳ ಒಟ್ಟು ೫೦ ಕುಟುಂಬಗಳಲ್ಲಿನ ಒಟ್ಟು ೨೦೦ ಸದಸ್ಯರಲ್ಲಿ ವಿವಾಹಿತರಾದವರು ಶೇಕಡ ೬೦.೫೦ರಷ್ಟು, ಅವಿವಾಹಿತರು ಶೇಕಡ ೨೩.೫೦ರಷ್ಟು, ವಿಧವೆ/ವಿಧುರರು ಶೇಕಡ ೧೬.೦೦ರಷ್ಟು ಕಂಡುಬಂದಿದೆ.

**ಕೋಷ್ಟಕ ೩.೨.**

**ಶೈಕ್ಷಣಿಕ ಸ್ಥಾನಮಾನ:** ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ಶಿಕ್ಷಣ ಪಡೆಯುವ ಆಸಕ್ತಿ ಕಡಿಮೆ ಇದೆ. ಇತ್ತೀಚಿನ ದಿನಗಳಲ್ಲಿ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸುತ್ತಾರಾದರೂ ಶಾಲೆಗೆ ನಿಯಮಿತವಾಗಿ ಮಕ್ಕಳನ್ನು ಕಳುಹಿಸುವುದಿಲ್ಲ. ಇವರಿಗೆ ಶಿಕ್ಷಣದ ಮಹತ್ವ ಇನ್ನೂ ಸಾಕಷ್ಟು ತಿಳಿದಿಲ್ಲ.

| ವಿವರ | ಪ್ರಮಾಣ | ಶೇಕಡ |
|---|---|---|
| ಶಿಕ್ಷಣ ಪಡೆದವರು (ಪ್ರಾಥಮಿಕ, ಪ್ರೌಢ, ಪದವಿ) | ೪೮ | ೨೪.೦೦ |
| ಶಿಕ್ಷಣ ಪಡೆಯದೇ ಇರುವವರು | ೧೫೨ | ೭೬.೦೦ |
| **ಒಟ್ಟು** | **೨೦೦** | **೧೦೦** |

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳ ಒಟ್ಟು ೫೦ ಕುಟುಂಬಗಳಲ್ಲಿನ ಒಟ್ಟು ೨೦೦ ಸದಸ್ಯರಲ್ಲಿ ಶಿಕ್ಷಣ ಪಡೆದವರು ಶೇಕಡ ೨೪.೦೦ರಷ್ಟು, ಶಿಕ್ಷಣ ಪಡೆಯದೇ ಇರುವವರು ಶೇಕಡ ೭೬.೦೦ರಷ್ಟು ಕಂಡುಬಂದಿದ್ದಾರೆ.

**ಕೋಷ್ಟಕ ೩.೩.**

**ವೃತ್ತಿಯ ಸ್ಥಾನಮಾನ:** ಚಿತ್ರದುರ್ಗ ಜಿಲ್ಲೆಯ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಮೂಲತಃವಾಗಿ ಅಲೆಮಾರಿ ಜೀವನವನ್ನು ನಡೆಸುತ್ತಿರುವುದರಿಂದ ವಿವಿಧ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬಂದಿದೆ.

| ವಿವರ | ಪ್ರಮಾಣ | ಶೇಕಡ |
|---|---|---|
| ಕೃಷಿ ಕಾರ್ಮಿಕರು | ೧೮ | ೦೯.೦೦ |
| ಸಣ್ಣ ವ್ಯಾಪಾರಿಗಳು | – | – |
| ಖಾಸಗಿ ಉದ್ಯೋಗ | – | – |
| ಸರ್ಕಾರಿ ಉದ್ಯೋಗ | – | – |
| ಮೂಲಕಸುಬು/ಇತರೆ ಉದ್ಯೋಗ | ೧೮೨ | ೯೧.೦೦ |
| **ಒಟ್ಟು** | **೨೦೦** | **೧೦೦** |

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ಶೇಕಡ ೦೯.೦೦ರಷ್ಟು ಕೃಷಿ ಕಾರ್ಮಿಕರು ಕಂಡುಬಂದಿದ್ದಾರೆ. ಮೂಲಕಸುಬು ಮತ್ತು ಇತರೇ ಉದ್ಯೋಗಗಳನ್ನು ಮಾಡುವವರು ಶೇಕಡ ೯೧.೦೦ರಷ್ಟು ಕಂಡುಬಂದಿದ್ದಾರೆ.

**ಕೋಷ್ಟಕ ೩.೪.**

**ವಯೋಮಾನ :** ಹಕ್ಕಿಪಿಕ್ಕಿ ಕುಟುಂಬಗಳ ಒಟ್ಟು ೫೦ ಕುಟುಂಬಗಳಲ್ಲಿನ ೨೦೦ ಸದಸ್ಯರುಗಳನ್ನು ಅವರ ವಯೋಮಾನಕ್ಕೆ ಅನುಗುಣವಾಗಿ ಈ ಕೆಳಕಂಡಂತೆ ತಿಳಿಸಲಾಗಿದೆ.

| ವಯೋಮಾನ | ಪ್ರಮಾಣ | ಶೇಕಡ |
|---|---|---|
| ೦–೧೪ ವರ್ಷ | ೨೮ | ೧೪.೦೦ |
| ೧೪–೧೮ ವರ್ಷ | ೩೫ | ೧೭.೫೦ |
| ೧೯–೨೫ ವರ್ಷ | ೩೨ | ೧೬.೦೦ |
| ೨೬–೪೦ ವರ್ಷ | ೩೮ | ೧೯.೦೦ |
| ೪೧–೫೦ ವರ್ಷ | ೩೩ | ೧೬.೫೦ |
| ೫೦ ವರ್ಷದ ಮೇಲ್ಪಟ್ಟು | ೩೪ | ೧೭.೦೦ |
| **ಒಟ್ಟು** | **೨೦೦** | ೧೦೦ |

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ವಯೋಮಾನಕ್ಕೆ ಅನುಗುಣವಾಗಿ ೦-೧೪ ವರ್ಷದವರೆಗೆ ಶೇ.೧೪.೦೦ರಷ್ಟು, ೧೪-೧೮ ವರ್ಷದವರೆಗೆ ಶೇ.೧೭.೫೦ರಷ್ಟು, ೧೯-೨೫ ವರ್ಷದವರೆಗೆ ಶೇ.೧೬.೦೦ರಷ್ಟು, ೨೬-೪೦ ವರ್ಷದವರೆಗೆ ಶೇ.೧೯.೦೦ರಷ್ಟು, ೪೧-೫೦ ವರ್ಷದವರೆಗೆ ಶೇ.೧೬.೫೦ರಷ್ಟು, ೫೦ ವರ್ಷದ ಮೇಲ್ಪಟ್ಟವರು ಶೇ.೧೭.೦೦ರಷ್ಟು ವಯೋಮಾನದವರು ಕಂಡುಬಂದಿದ್ದಾರೆ.

**೪.೧೦. ಸಮಸ್ಯೆಗಳು ಮತ್ತು ಸವಾಲುಗಳು**

ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗವು ಅಲೆಮಾರಿ ಪ್ರವೃತ್ತಿಯನ್ನು ಹೊಂದಿರುವುದರಿಂದಾಗಿ ಸದಾ ವಲಸೆಯ ಜೀವನವನ್ನು ನಡೆಸಬೇಕಾದ ಅನಿವಾರ್ಯತೆ ಇದೆ. ತಮ್ಮ ಮೂಲ ವೃತ್ತಿ ಬೇಟೆಯನ್ನು ನಂಬಿಕೊಂಡು ಬದುಕುವ ಪರಿಸ್ಥಿತಿ ಈಗಿಲ್ಲ. ಸ್ವಾತಂತ್ರ್ಯನಂತರದ ಭಾರತದ ದೇಶದಲ್ಲಿ ಜಾರಿಗೆ ಬಂದ ಕಠಿಣ ಕಾನೂನುಗಳು, ಅರಣ್ಯನೀತಿಗಳ ಪರಿಣಾಮದಿಂದಾಗಿ ಬೇಟೆಯಾಡುವುದನ್ನು ಕಟ್ಟುನಿಟ್ಟಾಗಿ ನಿಷೇಧಿಸಲಾಗಿದೆ. ಬೇಟೆಯಾಡಿ ಸಿಕ್ಕಿಬಿದ್ದರೆ ಕಠಿಣಶಿಕ್ಷೆಯನ್ನು ಪಡೆಯುತ್ತಾರೆ. ಆದ್ದರಿಂದ ಒಂದೆಡೆ ನೆಲೆನಿಂತು ಅಲ್ಪಸ್ವಲ್ಪ ಕೃಷಿ ಭೂಮಿಯನ್ನು ಹೊಂದಿ ವ್ಯವಸಾಯ, ಹೈನುಗಾರಿಕೆ, ಕೋಳಿ ಮತ್ತು ಕುರಿಸಾಕಾಣಿಕೆ, ಹಂದಿ ಸಾಕಾಣಿಕೆ, ಮೇಕೆ ಸಾಕಾಣಿಕೆ ಮುಂತಾದ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಹಕ್ಕಿಪಿಕ್ಕಿಯರ ಬಹುಮುಖ್ಯವಾದ ಸಮಸ್ಯೆಯೆಂದರೆ ವಿಪರೀತವಾಗಿ ಮದ್ಯಪಾನ ಮಾಡುವುದು. ಹಗಲಿನ ಹೊತ್ತಿನಲ್ಲಿಯೇ ಮದ್ಯಪಾನ ಮಾಡಿರುತ್ತಾರೆ. ಈ ಕುಡಿತದ ಚಟಗಳಿಂದ ಹಕ್ಕಿಪಿಕ್ಕಿಯರಲ್ಲೇ ಬಹಳಷ್ಟು ಸಲ ಅನಾವಶ್ಯಕವಾಗಿ ಜಗಳಗಳಾಗುತ್ತವೆ. ಗಂಡ ಹೆಂಡತಿಯರ ನಡುವೆ ಕ್ಷುಲ್ಲಕ ಕಾರಣಕ್ಕಾಗಿ ಜಗಳಗಳಾಗುತ್ತವೆ. ಬಂಧು-ಬಾಂಧವರ ನಡುವೆ ಈ ಜಗಳಗಳು ವಿಕೋಪಕ್ಕೆ ತಿರುಗಿ ದೈಹಿಕ ಹಲ್ಲೆಗಳು ಆಗುತ್ತವೆ. ಗಂಡಹೆಂಡತಿಯರ ಜಗಳಗಳಿಂದ ಮಕ್ಕಳು ಮಾನಸಿಕ, ದೈಹಿಕ ಮತ್ತು ಮನೋವೈಜ್ಞಾನಿಕ ಸಮಸ್ಯೆಗಳನ್ನು ಅನುಭವಿಸುತ್ತವೆ. ಈ ಗಲಾಟೆ, ಜಗಳಗಳು ಮಕ್ಕಳ ಮನಸ್ಸಿನ ಮೇಲೆ ಗಂಭೀರವಾದ ಪರಿಣಾಮಗಳನ್ನು ಉಂಟುಮಾಡುತ್ತವೆ.

ಹಕ್ಕಿಪಿಕ್ಕಿಯರ ಬಹುಮುಖ್ಯ ಸಮಸ್ಯೆ ಮತ್ತು ಸವಾಲು ಎಂದರೆ ಶಿಕ್ಷಣವನ್ನು ಪಡೆಯದೇ ಇರುವುದು. ಇಂದಿನ ಆಧುನಿಕ ಕಾಲದಲ್ಲಿಯೂ ಕೂಡ ಇವರು ಶಿಕ್ಷಣವನ್ನು ಪಡೆಯುವಲ್ಲಿ ಹಿಂದುಳಿದ್ದಾರೆ. ಕೇವಲ ಕೆಲವು ಹಕ್ಕಿಪಿಕ್ಕಿ ಜನರು ಒಂದೆಡೆ ನೆಲೆ ನಿಂತು ತಮ್ಮ ಮಕ್ಕಳಿಗೆ ಹಕ್ಕಿಪಿಕ್ಕಿ ಸಮುದಾಯದ ಮಕ್ಕಳು ಶಾಲೆಗೆ ಸೇರಿ ಶಿಕ್ಷಣವನ್ನು ನೀಡುವುದು ಕಂಡುಬರುತ್ತಿದೆ. ಇತ್ತೀಚಿನ ದಿನಗಳಲ್ಲಿ ಶಿಕ್ಷಣ ಪಡೆಯುತ್ತಿರುವುದು ಕಂಡುಬರುತ್ತಿದೆ.

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ಸಂಘ ಸಂಸ್ಥೆಗಳು, ಸಂಘಟನೆಗಳ, ಕೊರತೆಗಳಿವೆ. ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಬಹಳ ಹಿಂದುಳಿದಿದ್ದಾರೆ. ಆಧುನಿಕ ಜಗತ್ತಿನ ನಗರೀಕರಣ, ಆಧುನೀಕರಣ, ಜಾಗತೀಕರಣದ ಪರಿಣಾಮಗಳು ಹಕ್ಕಿಪಿಕ್ಕಿ

ಬುಡಕಟ್ಟು ಸಮುದಾಯದ ಮೇಲೆ ಆಗುತ್ತಿವೆ. ಅವರ ಅವಿಭಕ್ತ ಕುಟುಂಬಗಳು, ವಿಭಕ್ತ ಕುಟುಂಬಗಳಾಗುತ್ತಿವೆ. ತಮ್ಮ ವಲಸೆ ಪ್ರವೃತ್ತಿಯನ್ನು ನಿಧಾನವಾಗಿ ಬಿಟ್ಟು ಒಂದೆಡೆ ನೆಲೆ ನಿಂತು ವಾಸಿಸುವ ಮನೋಭಾವ ಕಂಡುಬರುತ್ತಿದೆ. ಸರ್ಕಾರದ ಗಿರಿಜನ ಉಪಯೋಜನೆ(ಟಿ.ಎಸ್.ಪಿ)ಗಳಿಂದ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸೌಲಭ್ಯಗಳನ್ನು ಪಡೆಯಲು ಸೂಕ್ತ ಮಾರ್ಗದರ್ಶನದ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ.

**ಪರಿಹಾರಗಳು**

೧. **ಶಾಶ್ವತ ನೆಲೆಗಳ ನಿರ್ಮಾಣ:** ಹಕ್ಕಿಪಿಕ್ಕಿಯರು ಸದಾ ವಲಸೆ ಪ್ರವೃತ್ತಿ, ಅಲೆಮಾರಿ ಮನೋಭಾವವನ್ನು ಹೊಂದಿರುವುದರಿಂದ ಸರ್ಕಾರದ ಇಲಾಖೆಗಳಿಂದ, ಸರ್ಕಾರೇತರ ಸ್ವಯಂ ಸೇವಾ ಸಂಘ ಸಂಸ್ಥೆಗಳಿಂದ ಹಕ್ಕಿಪಿಕ್ಕಿಯರಿಗೆ ಮಾರ್ಗದರ್ಶನವನ್ನು ನೀಡಿ, ಒಂದು ಕಡೆ ನೆಲೆ ನಿಲ್ಲಲು ಮನವೊಲಿಸಬೇಕು. ಸರ್ಕಾರಿಂದ ಉಚಿತ ಭೂಮಿಯನ್ನು ನೀಡಿ, ಉಚಿತವಾಗಿ ಮನೆಗಳನ್ನು ನಿರ್ಮಿಸಿಕೊಡಬೇಕು. ಸರ್ಕಾರದ ಗಿರಿಜನ ಉಪಯೋಜನೆಯ(ಟಿ.ಎಸ್.ಪಿ) ಎಲ್ಲಾ ಸೌಲಭ್ಯಗಳನ್ನು ಒದಗಿಸಿಕೊಡಬೇಕು.

೨. **ಶಿಕ್ಷಣ:** ಹಕ್ಕಿಪಿಕ್ಕಿಯರಿಗೆ ಮೊದಲು ಶಿಕ್ಷಣವನ್ನು ಕೊಡುವ ವ್ಯವಸ್ಥೆಯಾಗಬೇಕು. ಸಮುದಾಯದ ನೆಲೆಗಳಲ್ಲಿ ಬಾಲವಾಡಿ, ಅಂಗನವಾಡಿ ಕೇಂದ್ರಗಳ ನಿರ್ಮಾಣವಾಗಬೇಕು. ವಯಸ್ಕರ ಶಿಕ್ಷಣ ಕೇಂದ್ರಗಳು ಸ್ಥಾಪನೆಯಾಗಬೇಕು. ಶಾಲೆ, ಕಾಲೇಜುಗಳಲ್ಲಿ, ವಸತಿ ನಿಲಯಗಳಲ್ಲಿ ಮತ್ತು ಉನ್ನತ ಶಿಕ್ಷಣ ಕೇಂದ್ರಗಳಲ್ಲಿ ಉಚಿತ ಪ್ರವೇಶ, ಶಿಕ್ಷಣದ ಅವಕಾಶಗಳು ಮತ್ತು ಪ್ರೋತ್ಸಾಹಗಳು ದೊರೆಯಬೇಕು. ಹಕ್ಕಿಪಿಕ್ಕಿಯರ ಸಮುದಾಯದ ನೆಲೆಗಳಲ್ಲಿ ಗ್ರಂಥಾಲಯಗಳ ನಿರ್ಮಾಣ ಮತ್ತು ನಿರ್ವಹಣೆ ಆಗಬೇಕು.

೩. **ಮೂಲಭೂತ ಸೌಲಭ್ಯಗಳು:** ಹಕ್ಕಿಪಿಕ್ಕಿಯರಿಗೆ ಅಗತ್ಯವಾದ ನಿವೇಶನಗಳು, ಮನೆಗಳು, ರಸ್ತೆಗಳು, ಚರಂಡಿಗಳು, ಕುಡಿಯುವ ನೀರು, ವಿದ್ಯುತ್ ಸಂಪರ್ಕ, ಸಾರಿಗೆ ಸೌಕರ್ಯ ಮುಂತಾದ ಮೂಲಭೂತ ಸೌಲಭ್ಯಗಳು ದೊರೆಯಬೇಕು. ಎಲ್ಲಾ ಕುಟುಂಬಗಳಿಗೂ ಸೂಕ್ತ ದರದಲ್ಲಿ ಅಥವಾ ಉಚಿತವಾಗಿ ಸರ್ಕಾರದ ಪಡಿತರ ಆಹಾರ ದೊರೆಯುವಂತಾಗಬೇಕು.

೪. **ಸಣ್ಣಕೈಗಾರಿಕೆ ಮತ್ತು ಗುಡಿಕೈಗಾರಿಕೆ:** ಹಕ್ಕಿಪಿಕ್ಕಿ ಜನಾಂಗವು ಆರ್ಥಿಕವಾಗಿ ಸಬಲವಾಗಲು, ತಮ್ಮ ವೃತ್ತಿಯ ಜೊತೆಗೆ ಇತರೆ ವೃತ್ತಿಗಳನ್ನು ಕೈಗೊಳ್ಳಲು ಸರ್ಕಾರದಿಂದ ಪ್ರೋತ್ಸಾಹ ದೊರೆಯಬೇಕು. ಪಶುಪಾಲನೆ, ಹೈನುಗಾರಿಕೆ, ಕೋಳಿ, ಕುರಿ, ಮೇಕೆ ಸಾಕಾಣಿಕೆ, ಹಂದಿ ಸಾಕಾಣಿಕೆ, ಮೀನುಗಾರಿಕೆಗಳಿಗೆ ಸಹಾಯ, ಸಹಕಾರ, ಪ್ರೋತ್ಸಾಹಗಳನ್ನು ಸರ್ಕಾರವು ನೀಡಬೇಕು. ಸ್ವಯಂ ಉದ್ಯೋಗಗಳನ್ನು ಕೈಗೊಳ್ಳಲು, ಅಂತಹ ಉದ್ಯೋಗಗಳಿಂದ ಉತ್ಪಾದಿಸಿದ ವಸ್ತುಗಳನ್ನು ಖರೀದಿಸಲು ಸರ್ಕಾರದಿಂದ ಸೂಕ್ತ ವ್ಯವಸ್ಥೆ ಆಗಬೇಕು.

**ಅಡಿಟಿಪ್ಪಣಿಗಳು:**

೧. ಬುಡಕಟ್ಟು ಕುಲಕಸುಬುಗಳು, ಕೆ.ಎಂ. ಮೇತ್ರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ.೮೧, ೮೨

೨. ಬುಡಕಟ್ಟು ಕುಲಕಸುಬುಗಳು, ಕೆ.ಎಂ. ಮೇತ್ರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ.೮೨, ೮೩

೩. ಹಕ್ಕಿಪಿಕ್ಕಿ, ಕುಮುದಾ ಬಿ. ಸುಶೀಲಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮, ಪುಟ.೩–೬

೪. ಹಕ್ಕಿಪಿಕ್ಕಿಯರ ಸಂಸ್ಕೃತಿ, ಆರ್. ರಾಜಪ್ಪ ದಳವಾಯಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦, ಪುಟ.೭–೮

೫. ಹಕ್ಕಿಪಿಕ್ಕಿಯರ ಸಂಸ್ಕೃತಿ, ಆರ್. ರಾಜಪ್ಪ ದಳವಾಯಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦, ಪುಟ.೯–೧೦

೬. ಹಕ್ಕಿಪಿಕ್ಕಿ, ಕುಮುದಾ ಬಿ. ಸುಶೀಲಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮, ಪುಟ.೭–೮

೭. ಹಕ್ಕಿಪಿಕ್ಕಿ, ಕುಮುದಾ ಬಿ. ಸುಶೀಲಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮, ಪುಟ.೮–೯

೮. ಹಕ್ಕಿಪಿಕ್ಕಿ, ಕುಮುದಾ ಬಿ. ಸುಶೀಲಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮, ಪುಟ.೧೬–೧೭

೯. ಹಕ್ಕಿಪಿಕ್ಕಿ, ಕುಮುದಾ ಬಿ. ಸುಶೀಲಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮, ಪುಟ.೪೭–೪೮

೧೦. ಹಕ್ಕಿಪಿಕ್ಕಿ, ಕುಮುದಾ ಬಿ. ಸುಶೀಲಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮, ಪುಟ.೬೮–೬೯

೧೧. ಹಕ್ಕಿಪಿಕ್ಕಿಯರ ಸಂಸ್ಕೃತಿ, ಆರ್.ರಾಜಪ್ಪ ದಳವಾಯಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦, ಪು.೯೬–೯೮

೧೨. ಹಕ್ಕಿಪಿಕ್ಕಿಯರ ಸಂಸ್ಕೃತಿ, ಆರ್.ರಾಜಪ್ಪ ದಳವಾಯಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦, ಪುಟ.೧೨

ಅಧ್ಯಾಯ: ೫

# ಬೇಡ, ಮೇದ(ಮೇದಾರ) ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ತೌಲನಿಕ ಅಧ್ಯಯನ

## ಅಧ್ಯಾಯ: ೫

# ಬೇಡ, ಮೇದ(ಮೇದಾರ) ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ತೌಲನಿಕ ಅಧ್ಯಯನ

ಭಾರತದ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಅನನ್ಯತೆ ಮತ್ತು ಅಸ್ಮಿತೆ(Identity)ಯನ್ನು ಹೊಂದಿವೆ. ಕರ್ನಾಟಕದ ೫೦ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಗುಣಲಕ್ಷಣಗಳನ್ನು ಹೊಂದಿವೆ. ಬೇಡ ಬುಡಕಟ್ಟು ಸಮುದಾಯ, ಮೇದ (ಮೇದಾರ) ಬುಡಕಟ್ಟು ಸಮುದಾಯ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಶ್ರೇಷ್ಠ ಅನನ್ಯತೆಗಳನ್ನು ಹೊಂದಿವೆ. ಈ ಬುಡಕಟ್ಟು ಸಮುದಾಯಗಳ ಸಾಮಾನ್ಯ ಲಕ್ಷಣವೆಂದರೆ ಬೇಟೆಯಾಡುವುದು. ಬೇಡ, ಮೇದ(ಮೇದಾರ)ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳು ಕಾಡಿನ ಉತ್ಪನ್ನಗಳನ್ನು ಅವಲಂಬಿಸಿ ಜೀವಿಸುವ ಸಮುದಾಯಗಳಾಗಿದ್ದವು. ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಈ ಬುಡಕಟ್ಟು ಸಮುದಾಯಗಳು ಕಾಡಿನ ಪ್ರಾಣಿ–ಪಕ್ಷಿಗಳನ್ನು ಬೇಟೆಯಾಡಿ ಆಹಾರಕ್ಕಾಗಿ ಬಳಸುತ್ತಿದ್ದರು. ಸ್ವಾತಂತ್ರ್ಯ ನಂತರದ ಕಾಲಘಟ್ಟದಲ್ಲಿ ಕಾಡಿನ ಪ್ರಾಣಿ–ಪಕ್ಷಿಗಳ ಬೇಟೆಯು ನಿಷಿದ್ಧವಾಗಿದೆ. ಆದಾಗ್ಯೂ ಕದ್ದುಮುಚ್ಚಿ ಬೇಟೆಯಾಡುವುದು ಮುಂದುವರೆದಿದೆ.

ಬೇಡ ಬುಡಕಟ್ಟು ಸಮುದಾಯವು ಬಹುತೇಕವಾಗಿ ವ್ಯವಸಾಯ, ಹೈನುಗಾರಿಕೆ, ಇತರೇ ವ್ಯಾಪಾರ, ವ್ಯವಹಾರ, ಸರ್ಕಾರಿ ಕೆಲಸ, ಖಾಸಗಿ ಕೆಲಸ, ಕಾರ್ಖಾನೆಗಳ ಉದ್ಯೋಗಗಳು, ಸ್ವಯಂ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದೆ. ಇತ್ತೀಚಿನ ದಿನಗಳಲ್ಲಿ ಶಿಕ್ಷಣವನ್ನು ಪಡೆಯುವ ಹಂಬಲ ತೀವ್ರವಾಗುತ್ತಿದೆ. ಮೇದ (ಮೇದಾರ) ಬುಡಕಟ್ಟು ಸಮುದಾಯವು ಇಂದಿಗೂ ಕೂಡ ಬಿದಿರು, ಬೆತ್ತ, ಬಂಬೂ ಮುಂತಾದ ಕಾಡಿನ ಉತ್ಪನ್ನಗಳನ್ನು, ಕಾಡಿನ ಕಚ್ಚಾವಸ್ತುಗಳನ್ನು ಬಳಸಿಕೊಂಡು, ಬುಟ್ಟಿ, ಮೊರ, ಏಣಿ, ತಡಿಕೆ, ಮುಂತಾದ ವಸ್ತುಗಳನ್ನು ತಯಾರು ಮಾಡುತ್ತಾರೆ. ರೈತರಿಗೆ ಬೇಕಾಗುವ ವಸ್ತುಗಳನ್ನು ತಯಾರಿಸುವುದು, ಮಕ್ಕಳ ಆಟಿಕೆ ಸಾಮಾನುಗಳನ್ನು ತಯಾರಿಸುವುದು, ಪೀಠೋಪಕರಣಗಳನ್ನು ತಯಾರಿಸುವುದು ಮುಂತಾದ ಕೆಲಸ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಕಾಡುಗಳ ಬಿದಿರು, ಬೆತ್ತಗಳನ್ನು ಮುಕ್ತವಾಗಿ

ಕಡಿದುಕೊಂಡು ಬರಲು ಅವಕಾಶವಿತ್ತು. ಆದರೆ, ಸ್ವಾತಂತ್ರ್ಯ ನಂತರದ ಕಾಲದಲ್ಲಿ ಭಾರತದಲ್ಲಿ ಕಾನೂನುಗಳು, ಕಾಯ್ದೆಗಳ ಅನುಷ್ಠಾನದಿಂದಾಗಿ ಮುಕ್ತವಾಗಿ ಕಾಡಿನ ಬಿದಿರು, ಬೆತ್ತಗಳನ್ನು ಕಡಿಯಲು ಅವಕಾಶವಿಲ್ಲ. ಅದರ ಜೊತೆಗೆ ಕಾಡಿನಲ್ಲಿ ಕಾಡಿನ ಉತ್ಪನ್ನಗಳ ಪ್ರಮಾಣ ಬಹುತೇಕವಾಗಿ ಕಡಿಮೆಯಾಗಿವೆ. ಆದ್ದರಿಂದ ಬಿದಿರು, ಬೆತ್ತಗಳ ಕೆಲಸಗಳೂ ಕೂಡ ಕಡಿಮೆಯಾಗಿದೆ. ಈ ಮೇದ ಸಮುದಾಯವೂ ಕೂಡ ತಮ್ಮ ಜೀವನ ನಿರ್ವಹಣೆಗಾಗಿ ಬೇರೆ ಬೇರೆ ವೃತ್ತಿಗಳನ್ನು ಮಾಡುತ್ತಿರುವುದು ಕಂಡುಬರುತ್ತಿದೆ. ಶಿಕ್ಷಣವನ್ನು ಪಡೆಯುವ ಹಂಬಲ ಈ ಸಮುದಾಯದಲ್ಲಿ ಕಂಡುಬರುತ್ತಿದೆ. ಸರ್ಕಾರಿ ಕೆಲಸ, ಖಾಸಗಿ ಕೆಲಸ, ಸಿಮೆಂಟು, ಕಲ್ಲುಗಳ ವ್ಯಾಪಾರ, ಹೆಂಚುಗಳು, ಸಿಮೆಂಟ್ ಶೀಟುಗಳ ವ್ಯಾಪಾರ, ಕಾರ್ಖಾನೆಗಳಲ್ಲಿ ಉದ್ಯೋಗ, ಸ್ವಯಂ ಉದ್ಯೋಗ, ವ್ಯವಸಾಯ, ಹೈನುಗಾರಿಕೆ, ಇತ್ಯಾದಿ ವೃತ್ತಿಗಳಲ್ಲಿ ಈ ಸಮುದಾಯವು ತೊಡಗಿಕೊಳ್ಳುತ್ತಿರುವುದು ಕಂಡುಬಂದಿದೆ.

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಮೂಲತಃ ಅಲೆಮಾರಿ ಬುಡಕಟ್ಟು ಸಮುದಾಯವಾಗಿರುವುದರಿಂದ ಇವರದು ಅಲೆಮಾರಿ ಜೀವನವೇ ಆಗಿದೆ. ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಕಾಡಿನ ಬೇಟೆಗಾಗಿ ಮುಕ್ತವಾಗಿ ಕಾಡೊಳಗೆ ಹೋಗಿ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುತ್ತಿದ್ದರು. ಆದರೆ ಸ್ವಾತಂತ್ರ್ಯ ನಂತರದ ವನ್ಯಜೀವಿ ನಿಷೇಧ ಕಾಯ್ದೆಗಳು, ಅರಣ್ಯ ಕಾಯ್ದೆಗಳ ಅನುಷ್ಠಾನದಿಂದಾಗಿ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ತಮ್ಮ ಮೂಲ ವೃತ್ತಿಯಿಂದ ಪರ್ಯಾಯ ಉದ್ಯೋಗಗಳಲ್ಲಿ ತೊಡಗಿಕೊಂಡಿದೆ. ಕಾರ್ಖಾನೆಗಳ ಉದ್ಯೋಗಗಳು, ನಗರ, ಪಟ್ಟಣಗಳಲ್ಲಿ ಸ್ವಯಂ ಉದ್ಯೋಗಗಳು ಮುಂತಾದ ಉದ್ಯೋಗಗಳನ್ನು ಮಾಡುತ್ತಿದ್ದಾರೆ.

**ಬೇಡ, ಮೇದ(ಮೇದಾರ) ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಅಂತರ್ ಸಂಬಂಧಗಳು**

ಬೇಡ, ಮೇದ(ಮೇದಾರ) ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಅನನ್ಯತೆ, ರಕ್ತಸಂಬಂಧ, ಒಳಾಡಳಿತ ವ್ಯವಸ್ಥೆ, ನೀತಿ-ನಿಯಮಗಳು, ಕಟ್ಟುನಿಟ್ಟಿನ ಸಂಪ್ರದಾಯಗಳನ್ನು ಹೊಂದಿದೆ. ಈ ಸಮುದಾಯಗಳ ನಡುವೆ ಯಾವುದೇ ವೈವಾಹಿಕ ಸಂಬಂಧಗಳು ಏರ್ಪಡುವುದಿಲ್ಲ. ಈ ಸಮುದಾಯಗಳ ನಡುವೆ ವೈವಾಹಿಕ ಸಂಬಂಧಗಳು ಸಂಪೂರ್ಣವಾಗಿ ನಿಷಿದ್ಧವಾಗಿವೆ. ಒಂದು ವೇಳೆ ಅಂತರ್ ಜಾತಿಯ ವಿವಾಹಗಳು ಆದರೂ ಕೂಡ ಅಂತಹ ವಿವಾಹಿತ ದಂಪತಿಗಳನ್ನು ಆಯಾ ಸಮುದಾಯಗಳಿಂದ ಹೊರಹಾಕಲಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಈ ರೀತಿಯ ಅಂತರ್ ಜಾತಿಯ ವಿವಾಹಗಳು ಕಂಡುಬಂದಿವೆ. ಬೇಡ ಸಮುದಾಯ ಮತ್ತು ಮೇದರ ಸಮುದಾಯಗಳ ನಡುವೆ ಅಂತರ್‌ಜಾತಿಯ ವಿವಾಹಗಳು ಆಗಿವೆ. ಆದರೆ ಅವುಗಳ ಸಂಖ್ಯೆ ಬಹಳ ಕಡಿಮೆ ಇದೆ. ಅಧಿಕೃತವಾಗಿ ಬೇಡ ಸಮುದಾಯ, ಮೇದ(ಮೇದಾರ) ಸಮುದಾಯ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ನಡುವೆ ಸಾಂಪ್ರದಾಯಿಕವಾಗಿ ವೈವಾಹಿಕ ಸಂಬಂಧಗಳು ಏರ್ಪಡುವುದಿಲ್ಲ. ಅಂತರ್ ಬುಡಕಟ್ಟುಗಳ ನಡುವೆ ವೈವಾಹಿಕ ಸಂಬಂಧಗಳು ನಿಷಿದ್ಧವಾಗಿವೆ.

ಆದರೆ, ವ್ಯಾವಹಾರಿಕವಾಗಿ ಬೇಡ, ಮೇದ(ಮೇದಾರ), ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ನಡುವೆ ಅಂತರ್ ಸಂಬಂಧಗಳಿವೆ. ಬೇಡ ಸಮುದಾಯದ ಕೃಷಿ, ವ್ಯವಸಾಯ ಸಂಬಂಧಿ ಕೆಲಸಗಳಿಗಾಗಿ, ಮೇದ(ಮೇದಾರ) ಸಮುದಾಯವು ತಯಾರಿಸಿದ ಬುಟ್ಟಿ, ಮೊರ, ಏಣಿ, ಬಿದಿರಿನ ತಡಿಕೆಗಳು, ಬೀಜ ಬಿತ್ತುವ ಕೊಳವೆಗಳು, ಎತ್ತುಗಳನ್ನು ಬೆದರಿಸಲು ಬೇಕಾಗುವ ಬಾರಿಕೋಲು, ಎತ್ತಿನ ಗಾಡಿಗಳಿಗೆ ಬೇಕಾದ ಬಿದಿರಿನ ತಡಿಕೆಗಳು, ಬಿದಿರಿನ ಬಂಬುಗಳು, ಮುಂತಾದ ವಸ್ತುಗಳನ್ನು ಬಳಸುತ್ತಾರೆ. ಪ್ರತಿಫಲವಾಗಿ ವ್ಯವಸಾಯದ ಉತ್ಪನ್ನಗಳು, ಹಣವನ್ನು ಪಾವತಿಸುತ್ತಾರೆ. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಈ ಎರಡೂ ಸಮುದಾಯಗಳಾದ ಬೇಡ ಬುಡಕಟ್ಟು ಸಮುದಾಯ, ಮೇದ ಬುಡಕಟ್ಟು ಸಮುದಾಯಗಳೊಂದಿಗೆ ವ್ಯಾಪಾರದ, ವ್ಯಾವಹಾರಿಕವಾದ ಸಂಬಂಧಗಳನ್ನು ಹೊಂದಿವೆ. ಹಕ್ಕಿಪಿಕ್ಕಿ ಸಮುದಾಯದ ವ್ಯಕ್ತಿಗಳು ಕೂಲಿಗಾಗಿ ಬೇರೆ ಸಮುದಾಯದ ಹೊಲಗಳಿಗೆ ಹೋಗುವುದು ಇದೆ. ಹಕ್ಕಿಪಿಕ್ಕಿ ಸಮುದಾಯವು ಅಥವಾ ಹಕ್ಕಿಪಿಕ್ಕಿ ಸಮುದಾಯದ ವ್ಯಕ್ತಿಗಳು ತಯಾರಿಸಿದ ನೋವಿನ ಎಣ್ಣೆ ಮೀನಿನ ಎಣ್ಣೆ, ಮುಂತಾದ ನೋವು ನಿವಾರಕ ಎಣ್ಣೆಗಳನ್ನು ಮಾರುತ್ತಾರೆ. ಅಗತ್ಯವಿದ್ದವರು ಕೊಂಡುಕೊಳ್ಳುತ್ತಾರೆ. ಪ್ರತಿಯಾಗಿ ವ್ಯವಸಾಯ ಉತ್ಪನ್ನಗಳು, ಹಣವನ್ನು ನೀಡುತ್ತಾರೆ.

ಸಾಮಾಜಿಕವಾಗಿ ಬೇಡ ಸಮುದಾಯ ಮತ್ತು ಮೇದರ ಸಮುದಾಯಗಳು ಅಂತರ್ ಸಂಬಂಧಗಳನ್ನು ಒಳಗೊಂಡಿವೆ. ಮೇದರ ಕೇರಿ, ಬೇಡರ ಕೇರಿಗಳು ಅಕ್ಕಪಕ್ಕದಲ್ಲೇ ಇರುವಂತಹ ಸನ್ನಿವೇಶಗಳನ್ನು ನಾವು ಕಾಣುತ್ತೇವೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ನಗರದಲ್ಲಿ ಮೇದರ ಬೀದಿಗಳ ಪಕ್ಕದಲ್ಲೇ ಬೇಡರ ಬೀದಿಗಳು ಇವೆ. ಸಾಂಪ್ರದಾಯಿಕವಾಗಿ ಈ ಸಮುದಾಯಗಳ ನಡುವೆ ನಿರ್ಬಂಧಗಳು ಇದ್ದರೂ ಕೂಡ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಸಹ ಸಂಬಂಧಗಳನ್ನು ಹೊಂದಿವೆ. ಮದುವೆ ಕಾರ್ಯಗಳು, ಇತರೇ ಹಬ್ಬ ಹರಿದಿನಗಳು, ಜಾತ್ರೆಗಳ ಸಂದರ್ಭಗಳಲ್ಲಿ ಪರಸ್ಪರ ಮನೆಯ ಸದಸ್ಯರು ಪರಸ್ಪರರ ಮನೆಗಳಿಗೆ ಹೋಗಿ ಬರುತ್ತಾರೆ. ಮೇದರ ಬುಡಕಟ್ಟು ಸಮುದಾಯದವರ ಶುಭಕಾರ್ಯಗಳಿಗೆ ಬೇಡ ಬುಡಕಟ್ಟು ಸಮುದಾಯದವರು ಹೋಗಿ ಬರುತ್ತಾರೆ. ಬೇಡ ಸಮುದಾಯದ ಶುಭಕಾರ್ಯಗಳಿಗೆ ಮೇದರು ಹೋಗಿ ಬರುತ್ತಾರೆ. ಆರ್ಥಿಕವಾಗಿ ಪರಸ್ಪರ ಸಮುದಾಯಗಳು ಕೊಡುವ ಮತ್ತು ತೆಗೆದುಕೊಳ್ಳುವ ಸಂಬಂಧವಿದೆ. ಹಬ್ಬಹರಿದಿನ, ಜಾತ್ರೆಗಳಲ್ಲಿ ಬೇಡ ಸಮುದಾಯದ ಗುಂಪು, ಸಮೂಹಗಳು, ಮೇದರ ಸಮುದಾಯದ ಗುಂಪು, ಸಮೂಹಗಳೊಂದಿಗೆ ಪರಸ್ಪರ ಸ್ನೇಹ, ವಿಶ್ವಾಸದಿಂದ ಸಹಕರಿಸುತ್ತಾ ಜೀವನ ನಡೆಸುವುದನ್ನು ಕಾಣುತ್ತೇವೆ. ಹಕ್ಕಿಪಿಕ್ಕಿ ಸಮುದಾಯದವರು ಅತೀ ಕಡಿಮೆ ಜನಸಂಖ್ಯೆಯನ್ನು ಹೊಂದಿರುವುದರಿಂದ ಈ ಸಮುದಾಯದವರು ಇತರೇ ಬುಡಕಟ್ಟು ಸಮುದಾಯದವರಾದ ಬೇಡ ಮತ್ತು ಮೇದರು ಬುಡಕಟ್ಟು ಸಮದಾಯಗಳೊಂದಿಗೆ ಸಾಕಷ್ಟು ಸಾಮಾಜಿಕವಾಗಿ ಬೆರೆಯುವುದು ಕಂಡುಬಂದಿಲ್ಲ. ಆದರೂ ವ್ಯಾಪಾರ ಮತ್ತು ವ್ಯವಹಾರಿಕವಾಗಿ ಒಡನಾಡುವುದು ಕಂಡುಬಂದಿದೆ. ಮೂಲತಃವಾಗಿ ಅಲೆಮಾರಿ ಸಮುದಾಯದವರಾದ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರು ಒಂದು ಊರಿನಿಂದ

ಇನ್ನೊಂದು ಊರಿಗೆ ಪ್ರಯಾಣ ಮಾಡುತ್ತಲೇ ಇರುತ್ತಾರೆ. ಇವರು ಇತರೇ ಜಾತಿ, ಜನಾಂಗಗಳೊಂದಿಗೆ ಭಿಕ್ಷೆ ಪಡೆಯಲು, ಉತ್ಪನ್ನಗಳಾದ ನೋವಿನ ಎಣ್ಣೆಗಳನ್ನು ಮಾರಲು, ಮನುಷ್ಯರ ತಲೆಕೂದಲುಗಳನ್ನು ಹಣ ಅಥವಾ ಇತರೇ ವಸ್ತುಗಳನ್ನು ಕೊಟ್ಟು ಸಂಗ್ರಹಿಸಲು ಭೇಟಿಯಾಗುವುದು, ಒಡನಾಡುವುದನ್ನು ಕಾಣುತ್ತೇವೆ. ವಿಶೇಷವಾಗಿ ಹಕ್ಕಿಪಿಕ್ಕಿ ಸಮುದಾಯದವರು ಇತರೇ ವ್ಯಕ್ತಿಗಳೊಂದಿಗೆ ಸಾಕಷ್ಟು ಬೆರೆಯುವುದಿಲ್ಲ. ಅವರುಗಳು ತಮ್ಮ ತಮ್ಮ ನಡುವೆ ಸ್ನೇಹ, ಸಲುಗೆಗಳನ್ನು ಹೊಂದುತ್ತಾರೆಯೇ ವಿನಃ ಇತರೇ ಜಾತಿ ಜನಾಂಗಗಳೊಂದಿಗೆ ಮುಕ್ತವಾಗಿ ಬೆರೆಯುವುದಿಲ್ಲ. ಕಾರಣವೇನೆಂದರೆ, ಹಕ್ಕಿಪಿಕ್ಕಿ ಸಮುದಾಯವು ಇಂದಿಗೂ ಕೂಡ ಒಂದು ಸ್ಥಳದಲ್ಲಿ ನೆಲೆ ನಿಲ್ಲುತ್ತಿಲ್ಲ. ಸರಿಯಾದ ವಿದ್ಯಾಭ್ಯಾಸವನ್ನು ಪಡೆಯುತ್ತಿಲ್ಲ. ನೆಲೆನಿಂತ ಕೆಲವೇ ಕೆಲವು ಕುಟುಂಬಗಳ ಸದಸ್ಯರುಗಳ ಮಕ್ಕಳು ಶಿಕ್ಷಣವನ್ನು ಪಡೆದರೂ ಕೂಡ ಸಮರ್ಪಕವಾದ ಶಿಕ್ಷಣವನ್ನು ಪಡೆಯುತ್ತಿಲ್ಲ. ಶಿಕ್ಷಣ ಪಡೆಯುವ ಅರಿವು ಇವರಲ್ಲಿ ಸಾಕಷ್ಟು ಆಗಬೇಕಾಗಿದೆ.

### ಆಧುನಿಕ ವ್ಯವಸ್ಥೆಯಲ್ಲಿ ಬೇಡ, ಮೇದ ಮತ್ತು ಹಕ್ಕಿಪಿಕ್ಕಿ ಸಮುದಾಯಗಳು

ಬೇಡ ಬುಡಕಟ್ಟು ಸಮುದಾಯವು ಇಂದಿನ ಆಧುನಿಕ ವ್ಯವಸ್ಥೆಗೆ ತೆರೆದುಕೊಂಡಿದೆ. ತಮ್ಮ ಮನೆಗಳಲ್ಲಿ ತಮ್ಮ ರೂಢಿ, ಸಂಪ್ರದಾಯಗಳು, ಆಚಾರ-ವಿಚಾರಗಳು, ಆಚರಣೆಗಳನ್ನು ಹೊಂದಿದ್ದರೂ ಆಧುನಿಕ ಕಾಲಕ್ಕೆ ತಕ್ಕಂತೆ ಊಟೋಪಚಾರಗಳಲ್ಲಿ, ಉಡುಗೆ ತೊಡುಗೆಗಳಲ್ಲಿ ಆಧುನೀಕತೆಯನ್ನು ಅಳವಡಿಸಿಕೊಂಡಿದ್ದಾರೆ. ಆಧುನಿಕ ಶಿಕ್ಷಣದ ಪರಿಣಾಮವಾಗಿ, ಬೇರೆ ಬೇರೆ ಉದ್ಯೋಗಗಳನ್ನು ಮಾಡುವ ಅನಿವಾರ್ಯತೆಯಿಂದಾಗಿ, ಇತರ ಸಮುದಾಯಗಳೊಂದಿಗೆ ಸಾಮಾಜಿಕವಾಗಿ ಒಡನಾಟದಿಂದಾಗಿ ಇವರಲ್ಲಿ ಪರಿವರ್ತನೆಗಳು ಕಂಡುಬಂದಿವೆ. ಆಧುನಿಕ ಪಾಶ್ಚಿಮಾತ್ಯ ಶಿಕ್ಷಣದ ಪರಿಣಾಮದಿಂದಾಗಿ, ಇಂಗ್ಲಿಷ್ ಶಿಕ್ಷಣದ ಪರಿಣಾಮದಿಂದಾಗಿ ಪ್ರಪಂಚದ ಜ್ಞಾನವು ವಿನಿಮಯಗೊಂಡಿದ್ದರ ಪರಿಣಾಮದಿಂದಾಗಿ ಇವರಲ್ಲಿ ಜ್ಞಾನದ ಅರಿವು ವಿಸ್ತಾರಗೊಂಡಿದೆ. ಶಿಕ್ಷಣ ಮತ್ತು ಉದ್ಯೋಗಗಳು ಅವಿನಾಭಾವ ಸಂಬಂಧವನ್ನು ಹೊಂದಿವೆ. ಪೂರ್ವ ಪ್ರಾಥಮಿಕ, ಪ್ರಾಥಮಿಕ, ಪ್ರೌಢ, ಪದವಿ, ಸ್ನಾತಕೋತ್ತರ ಪದವಿ, ಸಂಶೋಧನಾ ಪದವಿಗಳವರೆಗಿನ ಶಿಕ್ಷಣವನ್ನು ಇವರು ಪಡೆಯುತ್ತಿದ್ದಾರೆ. ಶಿಕ್ಷಣವನ್ನು ಪಡೆದರೆ ಮಾತ್ರ ಉನ್ನತ ಉದ್ಯೋಗಗಳನ್ನು ಪಡೆಯಬಹುದೆನ್ನುವ ಅರಿವು ಇವರಲ್ಲಿ ಜಾಗೃತವಾಗುತ್ತಿದೆ.

ಮೇದ ಬುಡಕಟ್ಟು ಸಮುದಾಯದಲ್ಲಿ ಆಧುನಿಕತೆಯ ಪ್ರಭಾವ ಸಾಕಷ್ಟಿದೆ. ಯಾವುದೇ ಬುಡಕಟ್ಟು ಸಮುದಾಯಗಳು ತಮ್ಮದೇ ಶ್ರೇಷ್ಠ ಸಂಸ್ಕೃತಿಯೆನ್ನುವ ಭಾವನೆಯು ಇರುತ್ತದೆ. ಆದರೆ, ಬದಲಾದ ಕಾಲಮಾನಕ್ಕೆ ಅನುಗುಣವಾಗಿ ತಮ್ಮ ಜೀವನಮಟ್ಟವನ್ನು ಸುಧಾರಿಸಿಕೊಳ್ಳುವ ಸಲುವಾಗಿ ಆಧುನೀಕತೆಗೆ ತಮ್ಮನ್ನು ತಾವು ತೆರೆದುಕೊಳ್ಳಲೇಬೇಕಾಗಿದೆ. ಸ್ವಾತಂತ್ರ್ಯ ನಂತರದ ಭಾರತದ ಕಾಲಕ್ಕೂ, ಸ್ವಾತಂತ್ರ್ಯಪೂರ್ವ ಭಾರತದ ಕಾಲಕ್ಕೂ ಸಾಕಷ್ಟು ವ್ಯತ್ಯಾಸಗಳಾಗಿವೆ. ಮೇದ ಸಮುದಾಯವು ತನ್ನ ಊಟೋಪಚಾರಗಳಲ್ಲಿ, ಉಡುಗೆ ತೊಡುಗೆಗಳಲ್ಲಿ ಬದಲಾವಣೆಗಳನ್ನು ಮಾಡಿಕೊಂಡಿದೆ. ದಿನನಿತ್ಯ

ಜೀವನದಲ್ಲಿ ದೂರದರ್ಶನ(ಟಿ.ವಿ), ಕಂಪ್ಯೂಟರ್, ಅಂತರ್‌ಜಾಲ, ಮೊಬೈಲ್ ಫೋನ್ ಇತ್ಯಾದಿ ಬಳಕೆಯಿಂದ ಇವರ ದೈನಂದಿನ ಜೀವನಶೈಲಿಯಲ್ಲಿ ಬದಲಾವಣೆಗಳಾಗಿವೆ. ಸಮೂಹ ಮಾಧ್ಯಮಗಳ ಪ್ರಭಾವ ಎಲ್ಲಾ ಜನ ಸಮುದಾಯಗಳ ಮೇಲೂ ಆದಂತೆ ಇವರ ಮೇಲೂ ಪ್ರಭಾವಗಳನ್ನು ಬೀರಿದೆ. ಆಧುನಿಕ ಶಿಕ್ಷಣವನ್ನು ಪಡೆದ ಇವರು ಬೇರೆ ಬೇರೆ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಸಾಂಪ್ರದಾಯಿಕವಾದ ವೃತ್ತಿಗಳನ್ನು ಸಂಪೂರ್ಣವಾಗಿ ಕೈಬಿಟ್ಟಿಲ್ಲವಾದರೂ ಬರೀ ಸಾಂಪ್ರದಾಯಿಕವಾದ ಉದ್ಯೋಗಗಳನ್ನು ಮಾಡುವ ಜನರು ಕ್ರಮೇಣ ಕಡಿಮೆಯಾಗುತ್ತಿದ್ದಾರೆ. ಶಿಕ್ಷಣ ಪಡೆಯದೇ ಇರುವವರು ಸಾಂಪ್ರದಾಯಿಕ ಬಿದಿರು, ಬೆತ್ತದ ಕರಕುಶಲ ಉದ್ಯೋಗಗಳಲ್ಲಿ ತೊಡಗಿಕೊಂಡರೆ, ಶಿಕ್ಷಣವನ್ನು ಪಡೆದವರು ಬೇರೆ ಬೇರೆ ಉದ್ಯೋಗಗಳನ್ನು ಮಾಡುತ್ತಿದ್ದಾರೆ.

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರು ಆಧುನೀಕತೆಯ ಕಾಲಕ್ಕೆ ತಕ್ಕಂತೆ ತಮ್ಮನ್ನು ಒಗ್ಗಿಸಿಕೊಂಡಿದ್ದಾರೆ. ಸಾಂಪ್ರದಾಯಿಕ ಜೀವನ, ವಿವಾಹ, ನೀತಿ ನಿಯಮಾವಳಿಗಳು, ಜನನ, ಮರಣ, ಮುಂತಾದ ಸಂಸ್ಕಾರಗಳಲ್ಲಿ ತಮ್ಮದೇ ಸಾಂಪ್ರದಾಯಿಕವಾದ ಆಚರಣೆಗಳನ್ನು ಒಳಗೊಂಡಿದ್ದರೂ ಕೂಡ ಸಾಮಾಜಿಕ ಜೀವನದ ಉಡುಗೆ ತೊಡುಗೆಗಳು, ಊಟೋಪಚಾರಗಳಲ್ಲಿ ಆಧುನೀಕತೆಯನ್ನು ಅಳವಡಿಸಿಕೊಂಡಿದ್ದಾರೆ. ಇತ್ತೀಚಿನ ದಿನಗಳಲ್ಲಿ ಹಕ್ಕಿಪಿಕ್ಕಿಯರಲ್ಲಿ ಕೆಲವರು ವಿದೇಶಗಳಿಗೆ ಉದ್ಯೋಗಗಳ ನಿಮಿತ್ತ ಹೋಗುತ್ತಿದ್ದಾರೆ. ಹಕ್ಕಿಪಿಕ್ಕಿಯರಲ್ಲಿ ನೋವಿನ ಎಣ್ಣೆಗಳಿಂದ ದೇಹಕ್ಕೆ ಮಸಾಜ್ ಮಾಡುವ ಕಲೆಯನ್ನು ಕರಗತ ಮಾಡಿಕೊಂಡಿರುವ ಕೆಲವರು ದೇಹಕ್ಕೆ ಮಸಾಜ್ ಮಾಡುವ ವೃತ್ತಿಯನ್ನು ಮಾಡುತ್ತಿದ್ದಾರೆ. ಅದರಿಂದ ಹಣವನ್ನು ಗಳಿಸುತ್ತಾರೆ. ಇವರಲ್ಲಿ ಶಿಕ್ಷಣವನ್ನು ಪಡೆಯಬೇಕೆಂಬ ಆಕಾಂಕ್ಷೆ ಇದ್ದರೂ ವಲಸೆ ಮತ್ತಿತರ ಕಾರಣಗಳಿಂದಾಗಿ ಹಕ್ಕಿಪಿಕ್ಕಿ ಸಮುದಾಯದವರ ಮಕ್ಕಳು ಸಮರ್ಪಕವಾಗಿ ಶಿಕ್ಷಣವನ್ನು ಪಡೆಯುತ್ತಿಲ್ಲ. ದೂರದರ್ಶನ(ಟಿ.ವಿ.), ರೇಡಿಯೋ, ಕಂಪ್ಯೂಟರ್, ಇಂಟರ್‌ನೆಟ್, ಮೊಬೈಲ್ ಫೋನ್‌ಗಳನ್ನು ಬಳಸುತ್ತಿದ್ದಾರೆ. ಪ್ರಪಂಚದ ಆಗು–ಹೋಗುಗಳನ್ನು ಕಣ್ಮುಂದೆಯೇ ನೋಡುವ ಪ್ರವೃತ್ತಿಯಿಂದಾಗಿ ಇವರಲ್ಲಿ ಆಧುನೀಕತೆಯ ಪ್ರಭಾವ ಸಾಕಷ್ಟು ಆಗಿದೆ. ವಿದೇಶದ ಸಂಸ್ಕೃತಿಯ ಪ್ರಭಾವ ಇವರ ಮೇಲೆ ಸಾಕಷ್ಟಾಗಿದೆ. ಕುಡಿತ, ಮೋಜು, ಮಸ್ತಿ, ಹಾಡುಗಳನ್ನು ಅನುಕರಿಸಿ ಹಾಡುವ ಪ್ರವೃತ್ತಿಗಳು ಕಂಡುಬರುತ್ತಿವೆ. ಇವರ ಚಿಂತನಾಕ್ರಮಗಳು, ಆಲೋಚನಾ ಕ್ರಮಗಳಲ್ಲಿಯೂ ಆಧುನಿಕತೆಯ ಪ್ರಭಾವ ಸಾಕಷ್ಟು ಆಗಿರುವುದು ಕಂಡುಬಂದಿದೆ.

ಬೇಡ, ಮೇದ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳು ಆಧುನಿಕತೆಯ ಪ್ರಭಾವಗಳಿಂದ ಪ್ರಭಾವಿತಗೊಂಡಿದ್ದರೂ ಕೂಡ ತಮ್ಮ ಅನನ್ಯತೆಯ ಸಂಸ್ಕೃತಿಯನ್ನು ಉಳಿಸಿಕೊಂಡಿವೆ. ಇಂದಿನ ಆಧುನೀಕತೆಯ ಊಟೋಪಚಾರಗಳಾದ ಇಡ್ಲಿ, ವಡೆ, ದೋಸೆ, ಉಪ್ಪಿಟ್ಟು, ಕೇಸರಿಬಾತ್, ಪೂರಿಸಾಗು, ಬೇಳೆಬಾತ್, ವಾಂಗೀಬಾತ್, ಟೊಮ್ಯಾಟೋ ಬಾತ್ ಮುಂತಾದ ತಿಂಡಿಗಳು, ಪೂರಿ ಊಟ, ಚಪಾತಿ ಊಟ, ರೊಟ್ಟಿ ಊಟ, ಮುದ್ದೆ ಊಟಗಳನ್ನು ಈ ಎಲ್ಲಾ ಸಮುದಾಯಗಳು ಮಾಡುತ್ತವೆ. ಸಾಂಪ್ರದಾಯಿಕ ಅಂಗಿ, ಪಂಚೆ, ಸೀರೆ ಕುಪ್ಪಸಗಳ ಬದಲಾಗಿ ಪ್ಯಾಂಟ್, ಶರ್ಟ್, ಚೂಡಿದಾರ,

ಮಿಡಿ, ನೈಟಿ ಮುಂತಾದ ವಸ್ತ್ರಗಳನ್ನು ಬಳಕೆ ಮಾಡುತ್ತಾರೆ. ಈ ಸಮುದಾಯಗಳ ದಿನನಿತ್ಯದ ಸಾಮಾಜಿಕ ಜೀವನದಲ್ಲಿ ಆಧುನೀಕತೆಯನ್ನು ಅಳವಡಿಸಿಕೊಂಡಿದ್ದಾರೆ. ಸಾಂಪ್ರದಾಯಿಕ ವೃತ್ತಿಗಳನ್ನು ಮಾಡಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಕಾಯ್ದೆ-ಕಾನೂನುಗಳು ಇವರನ್ನು ನಿರ್ಬಂಧಿಸಿವೆ. ಬೇಟೆಯಾಡುವುದು ವನ್ಯಜೀವಿ ಕಾಯ್ದೆ ಮತ್ತು ಅರಣ್ಯ ಕಾಯ್ದೆಯ ಪ್ರಕಾರ ಅಪರಾಧವಾಗಿದ್ದು ಬೇಡರು ಮತ್ತು ಹಕ್ಕಿಪಿಕ್ಕಿಯರು ತಮ್ಮ ಮೂಲ ವೃತ್ತಿಯಿಂದ ಅನಿವಾರ್ಯವಾಗಿ ಬೇರೆ ಬೇರೆ ಸರ್ಕಾರಿ, ಖಾಸಗಿ ಮತ್ತು ಇತರೇ ವೃತ್ತಿಗಳನ್ನು ಮಾಡುತ್ತಿದ್ದಾರೆ. ಕಾಡಿನ ಅಂಚಿನಲ್ಲಿ ವಾಸಿಸುತ್ತಿದ್ದ ಹಕ್ಕಿಪಿಕ್ಕಿಯರನ್ನು ಪ್ರತ್ಯೇಕ ಕ್ಯಾಂಪ್‌ಗಳಲ್ಲಿ ವಾಸಿಸಲು ಸರ್ಕಾರಗಳು ಕಾಲಕಾಲಕ್ಕೆ ಅವಕಾಶ ಮಾಡಿಕೊಟ್ಟಿವೆ. ಇತ್ತೀಚಿನ ದಿನಗಳಲ್ಲಿ ಹಕ್ಕಿಪಿಕ್ಕಿಯರು ಒಂದು ಕಡೆ ನೆಲೆ ನಿಂತು ಜೀವನ ನಡೆಸುವುದು ಕಂಡುಬರುತ್ತಿದೆ.

**ಕರ್ನಾಟಕ ಸರ್ಕಾರದಿಂದ ಪರಿಶಿಷ್ಟ ಪಂಗಡಗಳ ಅಭಿವೃದ್ಧಿಗಾಗಿ ಕೈಗೊಂಡಿರುವ ಯೋಜನೆಗಳು**

ರಾಜ್ಯದಲ್ಲಿನ ಪರಿಶಿಷ್ಟ ಪಂಗಡದವರ ಆರ್ಥಿಕ ಅಭಿವೃದ್ಧಿಗಾಗಿ ವಿವಿಧ ಆರ್ಥಿಕ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಕರ್ನಾಟಕ ಸರ್ಕಾರವು ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮವನ್ನು ದಿನಾಂಕ: ೨೭.೫.೨೦೦೬ರಂದು ಸ್ಥಾಪಿಸಿದ್ದು, ದಿನಾಂಕ ೨೨.೨.೨೦೧೭ರಿಂದ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತಿದೆ. ನಿಗಮದ ಅಧಿಕೃತ ಷೇರು ಬಂಡವಾಳ ರೂ.೨೦.೦೦ ಕೋಟಿ ಇದ್ದು ಇದರಲ್ಲಿ ರಾಜ್ಯ ಸರ್ಕಾರದ ಮತ್ತು ಕೇಂದ್ರದ ಸರ್ಕಾರದ ಪಾಲು ೫೧.೪೯ರ ಅನುಪಾತದಲ್ಲಿರುತ್ತದೆ.

**ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದ ಕಾರ್ಯಕ್ರಮಗಳ ಸಂಕ್ಷಿಪ್ತ ಪರಿಚಯ:**

**೧. ಸ್ವಯಂ ಉದ್ಯೋಗ ಕಾರ್ಯಕ್ರಮ**

**೧.೧. ಸ್ವಯಂ ಉದ್ಯೋಗ ಯೋಜನೆ(ರೂ.೧. ಲಕ್ಷದೊಳಗಿನ ಘಟಕಗಳು)**

ನಿರುದ್ಯೋಗಿ ಪರಿಶಿಷ್ಟ ಪಂಗಡದವರು ಸ್ವಯಂ ಉದ್ಯೋಗ ಚಟುವಟಿಕೆಗಳಾದ ಸಣ್ಣ ವ್ಯಾಪಾರ, ದಿನಸಿ ಅಂಗಡಿ, ಸೈಕಲ್ ಶಾಪ್, ಸಣ್ಣ ಕೈಗಾರಿಕೆ, ಸೇವೆ ಮತ್ತು ವ್ಯಾಪಾರ ಇತ್ಯಾದಿಗಳನ್ನು ಕೈಗೊಳ್ಳಲು ಬ್ಯಾಂಕುಗಳ ಸಹಯೋಗದೊಂದಿಗೆ. ರೂ.೧.೦೦ ಲಕ್ಷದವರೆಗಿನ ಘಟಕಗಳಿಗೆ ಸೌಲಭ್ಯ ಒದಗಿಸಲಾಗುವುದು. ಇದರಲ್ಲಿ ಘಟಕ ವೆಚ್ಚದ ಶೇ.೫೦ ರಷ್ಟು ಅಥವಾ ಗರಿಷ್ಠ ರೂ.೩೫,೦೦೦/- ಸಹಾಯಧನ ಇದ್ದು, ಉಳಿದ ಮೊತ್ತ ಬ್ಯಾಂಕುಗಳ ಸಾಲವಿರುತ್ತದೆ.

೧.೨. ನಿರುದ್ಯೋಗಿ ಪರಿಶಿಷ್ಟ ಪಂಗಡದವರು ಹೈನುಗಾರಿಕೆ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಬ್ಯಾಂಕ್‌ಗಳ ಸಹಯೋಗದೊಂದಿಗೆ ರೂ.೧.೦೦ ಲಕ್ಷದ ವರೆಗಿನ ಘಟಕಗಳಿಗೆ ಸೌಲಭ್ಯ ಒದಗಿಸಲಾಗುವುದು. ಇದರಲ್ಲಿ ಘಟಕ ವೆಚ್ಚದ ಶೇ.೫೦ ರಷ್ಟು ಗರಿಷ್ಠ ರೂ.೫೦೦೦೦/- ಸಹಾಯಧನವಾಗಿರುತ್ತದೆ. ಮತ್ತು ಉಳಿದ ಮೊತ್ತ ಬ್ಯಾಂಕ್ ಸಾಲವಾಗಿರುತ್ತದೆ.

೧.೩. ಉದ್ಯಮಶೀಲತಾ ಅಭಿವೃದ್ಧಿ ಯೋಜನೆ (ರೂ.೧.೦೦ ಲಕ್ಷ ಮೀರಿದ ಘಟಕಗಳು) ನಿರುದ್ಯೋಗಿ ಪರಿಶಿಷ್ಟ ಪಂಗಡದವರು ನಡೆಸಲು ಇಚ್ಛಿಸುವ ವಿವಿಧ ಉದ್ಯಮಶೀಲತಾ ಚಟುವಟಿಕೆಗಳಾದ ಸಣ್ಣ ಕೈಗಾರಿಕೆ, ಟಾಟಾ ಇಂಡಿಕಾ, ಆಟೋ ರಿಕ್ಷಾ, ಟ್ರಾಕ್ಟರ್, ಹಂದಿ ಸಾಕಾಣಿಕೆ, ಕೋಳಿ ಸಾಕಾಣಿಕೆ, ಕುರಿ ಸಾಕಾಣಿಕೆ, ಚರ್ಮಗಾರಿಕೆ, ವಕೀಲರ ಕಚೇರಿ, ಬ್ಯೂಟಿ ಪಾರ್ಲರ್, ರೆಡಿಮೇಡ್ ಗಾರ್ಮೆಂಟ್ಸ್, ಡಿ.ಟಿ.ಪಿ ಸೆಂಟರ್ ಇತ್ಯಾದಿಗಳನ್ನು ಕೈಗೊಳ್ಳಲು ರೂ. ೧.೦೦ ಲಕ್ಷಕ್ಕೂ ಮೇಲ್ಪಟ್ಟ ಘಟಕಗಳಿಗೆ ಬ್ಯಾಂಕುಗಳು ಸಾಲ ಮಂಜೂರು ಮಾಡಿದಲ್ಲಿ ನಿಮದಿಂದ ಈ ಕೆಳಕಂಡಂತೆ ಸಹಾಯಧನವನ್ನು ನೀಡಲಾಗುವುದು.

| ಘಟಕ ವೆಚ್ಚ | ಸಹಾಯಧನ ಮೊತ್ತ |
|---|---|
| ರೂ.೧.೦೦ ಲಕ್ಷದಿಂದ | ಘಟಕ ವೆಚ್ಚದ ಶೇ.೭೦ರಷ್ಟು |
| ರೂ.೫.೦೦ ಲಕ್ಷದವರೆಗೆ | ಗರಿಷ್ಠ ರೂ.೩.೫೦ ಲಕ್ಷ |
| ರೂ.೫.೦೦ ಲಕ್ಷದಿಂದ | ಘಟಕ ವೆಚ್ಚದ ಶೇ.೬೦ರಷ್ಟು |
| ರೂ.೧೦.೦೦ ಲಕ್ಷದವರೆಗೆ | ಗರಿಷ್ಠ ರೂ.೫.೦೦ ಲಕ್ಷ |
| ರೂ.೧೦.೦೦ ಲಕ್ಷದಿಂದ | ಘಟಕ ವೆಚ್ಚದ ಶೇ.೫೦ರಷ್ಟು |
| ರೂ.೨೦.೦೦ ಲಕ್ಷದವರೆಗೆ | ಗರಿಷ್ಠ ರೂ.೫.೦೦ ಲಕ್ಷ |

## ೨೦೧೭-೧೮ನೇ ಸಾಲಿನ ಆಯ-ವ್ಯಯದಲ್ಲಿ ಘೋಷಿಸಿದ ನೂತನ ಯೋಜನೆಗಳು

**೧.೪. ನೇರಸಾಲ ಯೋಜನೆ:** ಪ್ರಸಕ್ತ ಸಾಲಿನಲ್ಲಿ ನೇರ ಸಾಲ ಯೋಜನೆಯಡಿ ರಾಜ್ಯದ ಪರಿಶಿಷ್ಟ ಪಂಗಡದವರ ಆರ್ಥಿಕ ಅಭಿವೃದ್ಧಿಗಾಗಿ ರೂ.೪೦,೦೦೦/- ಗಳ ಘಟಕ ವೆಚ್ಚದಲ್ಲಿ ಹಸು/ ಎಮ್ಮೆ ಮತ್ತು ಕುರಿ/ ಮೇಕೆ ಸಾಕಾಣಿಕೆ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ನೆರವು ನೀಡಲಾಗುತ್ತಿದೆ. ಇದರಲ್ಲಿ ಸಹಾಯಧನ ರೂ.೨೫,೦೦೦/- ಮತ್ತು ನೇರ ಸಾಲ ಶೇ.೪ರ ಬಡ್ಡಿ ದರದಲ್ಲಿ ರೂ.೧೫,೦೦೦/-ಗಳು ಒಳಗೊಂಡಿರುತ್ತದೆ.

**೧.೫. ಸ್ವಯಂ ಉದ್ಯೋಗ ಯೋಜನೆ(ಟೂರಿಸ್ಟ್ ಟ್ಯಾಕ್ಸಿ):** ರಾಜ್ಯದಲ್ಲಿನ ಪರಿಶಿಷ್ಟ ಪಂಗಡದ ನಿರುದ್ಯೋಗಿ ಯುವಕರಿಗೆ ಸ್ವಯಂ ಉದ್ಯೋಗ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಮೂಲಕ ಅವರುಗಳ ಆರ್ಥಿಕ ಸ್ಥಿತಿಯನ್ನು ಸುಧಾರಣೆ ಮಾಡಿಕೊಳ್ಳುವಲ್ಲಿ ನೆರವಾಗಲು ಬ್ಯಾಂಕ್‌ಗಳ ಸಹಯೋಗದೊಂದಿಗೆ ನಿಗಮವು ಪ್ರಸಕ್ತ ಸಾಲಿನಲ್ಲಿ ಸ್ವಯಂ ಉದ್ಯೋಗ ಯೋಜನೆಯಡಿ ವಾಹನ ಚಾಲನಾ ಪರವಾನಗಿ ಹೊಂದಿರುವ ೧೫೦೦ ಪರಿಶಿಷ್ಟ ಪಂಗಡಗಳ ನಿರುದ್ಯೋಗಿ ಯುವಕರಿಗೆ ಟೂರಿಸ್ಟ್ ಟ್ಯಾಕ್ಸಿಗಳನ್ನು ಖರೀದಿಸಲು ರೂ.೩.೦೦ ಲಕ್ಷಗಳವರೆಗೆ ಅಥವಾ ವಾಹನದ ಶೇ.೫೦ ರಷ್ಟು ಯಾವುದು ಕಡಿಮೆಯೋ ಅಷ್ಟು ಸಹಾಯಧನ ನೀಡಲಾಗುವುದು. ಉಳಿದ ಮೊತ್ತವನ್ನು ಬ್ಯಾಂಕ್‌ಗಳಿಂದ ಸಾಲದ ರೂಪದಲ್ಲಿ ಪಡೆಯಬಹುದು.

**೧.೬. ವೃತ್ತಿ ಕೌಶಲ್ಯ ತರಬೇತಿ ಪಡೆದವರಿಗೆ ಸ್ವಯಂ ಉದ್ಯೋಗ ಯೋಜನೆ:** ರಾಜ್ಯದಲ್ಲಿನ ವೃತ್ತಿ ಕೌಶಲ್ಯ ತರಬೇತಿ ಪಡೆದ ೬೦೦ ಪರಿಶಿಷ್ಟ ಪಂಗಡಗಳ ನಿರುದ್ಯೋಗಿ ಯುವಕರಿಗೆ ಬ್ಯಾಂಕ್ ಸಹಯೋಗದೊಂದಿಗೆ ರೂ.೫.೦೦ ಲಕ್ಷಗಳವರೆಗಿನ ಘಟಕ ವೆಚ್ಚವನ್ನು ಹೊಂದಿರುವ ಸ್ವಯಂ ಉದ್ಯೋಗ ಘಟಕಗಳನ್ನು ಆರಂಭಿಸಲು ರೂ.೨.೫೦ ಲಕ್ಷ ಅಥವಾ ಶೇ.೫೦ರಷ್ಟು ಯೋಜನಾ ವೆಚ್ಚ ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಸಹಾಯಧನ ನೀಡಲಾಗುವುದು.

೧.೭. ರಾಜ್ಯದಲ್ಲಿನ ಅರಣ್ಯ ಪ್ರದೇಶದಲ್ಲಿ ಮತ್ತು ಅರಣ್ಯ ಪ್ರದೇಶದ ಆಸುಪಾಸಿನ ಪ್ರದೇಶಗಳಲ್ಲಿ ವಾಸಿಸುತ್ತಿರುವ ಪರಿಶಿಷ್ಟ ಪಂಗಡಕ್ಕೆ ಸೇರಿದ ಜೇನುಕುರುಬ, ಕೊರಗ, ಸೋಲಿಗ, ಕಾಡುಕುರುಬ, ಎರವ, ಗೌಡಲು, ಹಸಲರು, ಇರುಳಿಗ, ಸಿದ್ಧಿ, ಮಲೆಕುಡಿಯ, ಹಕ್ಕಿಪಿಕ್ಕಿ ತೋಡ, ಮೇದ ಇತ್ಯಾದಿ ಆದಿವಾಸಿ ಸಮುದಾಯಗಳ ಅಭಿವೃದ್ಧಿಗೆ ಮತ್ತು ಸ್ವಯಂ ಉದ್ಯೋಗ ಕಲ್ಪಿಸಲು ರೂ.೨೦೦.೦೦ ಕೋಟಿ ಅನುದಾನ ಮೀಸಲಿರಿಸಿದ್ದು, ಈ ಅನುದಾನದಲ್ಲಿ ಸ್ವಯಂ ಉದ್ಯೋಗ ಯೋಜನೆಯಡಿ ಹೈನುಗಾರಿಕೆ, ಉದ್ಯಮಶೀಲತಾ ಅಭಿವೃದ್ಧಿ, ಭೂ ಒಡೆತನ ಯೋಜನೆಗಳನ್ನು ಅನುಷ್ಠಾನ ಗೊಳಿಸಲಾಗುವುದು. ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಸೌಲಭ್ಯ ಕಲ್ಪಿಸಲಾಗುವುದು. ಹಾಗೂ ವಿದ್ಯಾವಂತ ನಿರುದ್ಯೋಗಿ ಯುವಕ/ ಯುವತಿಯರಿಗೆ ಲಾಭ ಗಳಿಸುವಂತಹ ಸ್ವಯಂ ಉದ್ಯೋಗ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಸಹಕಾರಿಯಾಗುವಂತೆ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುವುದು.

ಈ ಸಮುದಾಯಗಳು ವಾಸಿಸುವ ಹಾಡಿ, ಪೋಡು, ಕಾಲೋನಿ ಮತ್ತು ಕೇರಿಗಳಲ್ಲಿ ಮೂಲಭೂತ ಸೌಕರ್ಯಗಳಾದ ಶುದ್ಧ ಕುಡಿಯುವ ನೀರಿನ ಘಟಕಗಳು, ಸಿಮೆಂಟ್ ಕಾಂಕ್ರೀಟ್ ರಸ್ತೆಗಳ ನಿರ್ಮಾಣ, ಆದಿವಾಸಿಗಳು ಹೊಂದಿರುವ ಕೃಷಿ ಜಮೀನುಗಳ ಅಭಿವೃದ್ಧಿ, ಸೋಲಾರ್ ಗೃಹ ದೀಪಗಳು, ಸೋಲಾರ್ ಬೀದಿ ದೀಪಗಳು, ಸಂಚಾರಿ ವೈದ್ಯಕೀಯ ವಾಹನ ಮತ್ತು ಔಷಧಿಗಳ ಸರಬರಾಜು, ಆದಿವಾಸಿ ಸಮುದಾಯದವರ ಮನೆಗಳ ದುರಸ್ತಿ ಮತ್ತು ಇನ್ನಿತರೆ ಸೌಕರ್ಯಗಳನ್ನು ಕಲ್ಪಿಸಲಾಗುವುದು.

### ೨. ಭೂ ಒಡೆತನ ಯೋಜನೆ

ರಾಜ್ಯದಲ್ಲಿನ ಪರಿಶಿಷ್ಟ ಪಂಗಡದ ಭೂ ರಹಿತ ಕೃಷಿ ಕಾರ್ಮಿಕ ಕುಟುಂಬದ ಮಹಿಳೆಯರನ್ನು ಭೂ ಒಡೆತನ ಯೋಜನೆಯಡಿ ಭೂ ಒಡೆಯರನ್ನಾಗಿ ಮಾಡಲಾಗುವುದು. ಘಟಕ ವೆಚ್ಚ ಗರಿಷ್ಠ ರೂ.೧೫.೦೦ ಲಕ್ಷವಿದ್ದು ಇದರಲ್ಲಿ ಖುಷ್ಕಿ/ತರಿ/ಭಾಗಾಯ್ತು ಜಮೀನು ಗರಿಷ್ಠ ಎಷ್ಟು ವಿಸ್ತೀರ್ಣ ಬರುತ್ತದೆಯೋ ಅಷ್ಟು ಜಮೀನನ್ನು ಫಲಾನುಭವಿಗೆ ಖರೀದಿಸಿ ಕೊಡಲಾಗುವುದು. ಘಟಕ ವೆಚ್ಚದಲ್ಲಿ ಶೇ.೫೦ ಭಾಗ ಸಹಾಯಧನ ಹಾಗೂ ಶೇ.೫೦ ಭಾಗ ಅವಧಿ ಸಾಲದ ರೂಪದಲ್ಲಿ ಇರುತ್ತದೆ. ಅವಧಿ ಸಾಲವನ್ನು ಶೇ.೬ರ ಬಡ್ಡಿ ದರದಲ್ಲಿ ನಿಗಮದಿಂದಲೇ ನೀಡಲಾಗುವುದು. ಅವಧಿ ಸಾಲದ ಹಣವನ್ನು ಬಡ್ಡಿ ಸಮೇತವಾಗಿ ೧೦ ವರ್ಷಗಳಲ್ಲಿ ಪ್ರತಿ ೬ ತಿಂಗಳಿಗೊಮ್ಮೆ ೨೦ ಸಮ ಕಂತುಗಳಲ್ಲಿ

ಮರು ಪಾವತಿ ಮಾಡಬೇಕು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ಸಮಿತಿಯು ಜಮೀನಿನ ಖರೀದಿ ದರವನ್ನು ನಿಗದಿಪಡಿಸುತ್ತದೆ.

**೩. ಮೈಕ್ರೋ ಕ್ರೆಡಿಟ್ ಯೋಜನೆ**

ಸ್ವ ಸಹಾಯ ಗುಂಪುಗಳಲ್ಲಿ ಸದಸ್ಯರಾಗಿರುವ ಪರಿಶಿಷ್ಟ ಪಂಗಡದ ಫಲಾಪೇಕ್ಷಿಗಳಿಗೆ ಸಣ್ಣ ಪ್ರಮಾಣದ ವ್ಯಾಪಾರ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಪ್ರತಿಯೊಬ್ಬ ಫಲಾಪೇಕ್ಷಿಗಳಿಗೆ ರೂ.೧೫,೦೦೦/–ಗಳನ್ನು ಮಂಜೂರು ಮಾಡಲಾಗುವುದು. ಇದರಲ್ಲಿ ಸಹಾಯಧನ ರೂ. ೧೦,೦೦೦/– ಸಾಲ, ರೂ.೫,೦೦೦/– ಸಹಾಯಧನ ಮತ್ತು ಸಾಲವನ್ನು ನಿಗಮದಿಂದ ನೇರವಾಗಿ ಭರಿಸಲಾಗುವುದು. ಫಲಾನುಭವಿಗಳು ಸಾಲದ ಹಣವನ್ನು ಬಡ್ಡಿ ಸಮೇತವಾಗಿ ಮೂರು ವರ್ಷಗಳಲ್ಲಿ ೩೬ ಸಮ ಕಂತುಗಳಲ್ಲಿ ನಿಗಮಕ್ಕೆ ಮರುಪಾವತಿ ಮಾಡಬೇಕು.

**೪. ಗಂಗಾ ಕಲ್ಯಾಣ ಯೋಜನೆ**

ಪರಿಶಿಷ್ಟ ಪಂಗಡದ ಸಣ್ಣ ಮತ್ತು ಅತಿ ಸಣ್ಣ ರೈತರ ಖುಷ್ಕಿ ಜಮೀನಿಗೆ ನೀರಾವರಿ ಸೌಲಭ್ಯ ಒದಗಿಸಲು ನಿಗಮದಿಂದ ವೈಯಕ್ತಿಕ ನೀರಾವರಿ, ಕೊಳವೆಬಾವಿ, ತೆರೆದಬಾವಿ ಮತ್ತು ಏತ ನೀರಾವರಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುವುದು.

**೪.೧. ವೈಯಕ್ತಿಕ ನೀರಾವರಿ, ಕೊಳವೆ ಬಾವಿ/ ತೆರೆದ ಬಾವಿ ಯೋಜನೆ**

ಈ ಯೋಜನೆಯಲ್ಲಿ ಪರಿಶಿಷ್ಟ ಪಂಗಡದ ಸಣ್ಣ ಮತ್ತು ಅತಿ ಸಣ್ಣ ರೈತರ ಖುಷ್ಕಿ ಜಮೀನಿನಲ್ಲಿ ಕೊಳವೆ ಬಾವಿ ಕೊರೆದು ತೆರೆದ ಬಾವಿ ನಿರ್ಮಿಸಿ, ಪಂಪ್‌ಸೆಟ್ ಹಾಗು ಇತರೆ ಪೂರಕ ಸಾಮಗ್ರಿಗಳನ್ನು ಅಳವಡಿಸಿ ವಿದ್ಯುತ್ ಸಂಪರ್ಕ ಕಲ್ಪಿಸಿ ಕೊಡಲಾಗುವುದು. ಈ ಯೋಜನೆಯಡಿ ಘಟಕ ವೆಚ್ಚ ರೂ.೩.೦೦ ಲಕ್ಷವಿದ್ದು, ಇದರಲ್ಲಿ ವಿದ್ಯುತ್ ಸರಬರಾಜು ಸಂಸ್ಥೆಗಳಿಗೆ ನಿಗಮದಿಂದ ನೇರವಾಗಿ ಪಾವತಿಸುವ ವಿದ್ಯುದೀಕರಣ ವೆಚ್ಚವು ಒಳಗೊಂಡಂತೆ ರೂ.೨.೫೦ ಲಕ್ಷ ಸಹಾಯಧನವಾಗಿದ್ದು, ಉಳಿದ ರೂ.೫೦,೦೦೦/– ಅವಧಿ ಸಾಲವಾಗಿರುತ್ತದೆ. ಅಂತರ್ಜಲ ಮಟ್ಟ ಕುಸಿದಿರುವ ಜಿಲ್ಲೆಗಳಾದ ಕೋಲಾರ, ರಾಮನಗರ, ಚಿಕ್ಕಬಳ್ಳಾಪುರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ ಮತ್ತು ತುಮಕೂರು ಜಿಲ್ಲೆಗಳಿಗೆ ಸೀಮಿತಗೊಂಡಂತೆ ಘಟಕ ವೆಚ್ಚವನ್ನು ರೂ.೪.೦೦ ಲಕ್ಷಗಳಿಗೆ ನಿಗದಿಪಡಿಸಲಾಗಿದೆ. ಇದರಲ್ಲಿ ವಿದ್ಯುತ್ ಸರಬರಾಜು ಸಂಸ್ಥೆಗಳಿಗೆ ನಿಗಮದಿಂದ ನೇರವಾಗಿ ಪಾವತಿಸುವ ವಿದ್ಯುದೀಕರಣ ವೆಚ್ಚವು ಒಳಗೊಂಡಂತೆ ರೂ.೩.೫೦ ಲಕ್ಷ ಸಹಾಯ ಧನವಾಗಿದ್ದು, ಉಳಿದ ರೂ.೫೦,೦೦೦/– ಅವಧಿ ಸಾಲವಾಗಿರುತ್ತದೆ. ಅವಧಿ ಸಾಲಕ್ಕೆ ವಾರ್ಷಿಕ ಶೇ.೬ರ ದರದಲ್ಲಿ ಬಡ್ಡಿಯನ್ನು ವಿಧಿಸಲಾಗುತ್ತದೆ. ಫಲಾನುಭವಿಗಳು ಸಾಲ ಮತ್ತು ಬಡ್ಡಿ ಹಣವನ್ನು ೬ ವರ್ಷಗಳ ಅವಧಿಯಲ್ಲಿ ಅರೆ ವಾರ್ಷಿಕ ಕಂತುಗಳಲ್ಲಿ ನಿಗಮಕ್ಕೆ ಮರುಪಾವತಿ ಮಾಡಬೇಕು.

### ೪.೨. ಏತ ನೀರಾವತಿ ಯೋಜನೆ

ಏತ ನೀರಾವರಿ ಯೋಜನೆಯಡಿ, ನೈಸರ್ಗಿಕವಾದ ನದಿ, ತೊರೆ, ಹಳ್ಳ, ನಾಲೆಗಳ ಅಕ್ಕಪಕ್ಕದಲ್ಲಿರುವ ಪರಿಶಿಷ್ಟ ಪಂಗಡದ ಸಣ್ಣ ಅತಿ ಸಣ್ಣ ರೈತರ ಜಮೀನುಗಳಿಗೆ ಪಂಪ್‌ಸೆಟ್ ಮತ್ತು ಪೈಪ್‌ಲೈನ್ ಅಳವಡಿಸಿ ನೀರಾವರಿ ಸೌಲಭ್ಯವನ್ನು ಉಚಿತವಾಗಿ ಒದಗಿಸಲಾಗುವುದು. ಈ ಯೋಜನೆಯಡಿ ಘಟಕ ವೆಚ್ಚವು ಕನಿಷ್ಠ ೮-೦೦ ಎಕರೆ ಖುಷ್ಕಿ ಜಮೀನಿನ ಘಟಕಕ್ಕೆ ರೂ.೪.೦೦ ಲಕ್ಷ ಮತ್ತು ೧೫ ಎಕರೆ ಜಮೀನಿನ ಘಟಕಕ್ಕೆ ರೂ.೬.೦೦ ಲಕ್ಷ ಇರುತ್ತದೆ. ಘಟಕ ವೆಚ್ಚವು ಪೂರ್ಣವಾಗಿ ಸಹಾಯಧನವಾಗಿರುತ್ತದೆ.

**ನಿಗಮದಿಂದ ವಿವಿಧ ಯೋಜನೆಗಳಡಿ ಸೌಲಭ್ಯ ಪಡೆಯಲು ಇರಬೇಕಾದ ಸಾಮಾನ್ಯ ಅರ್ಹತೆಗಳು**

೧. ಅರ್ಜಿದಾರರು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು ಹಾಗೂ ಕಳೆದ ೧೫ ವರ್ಷಗಳಿಂದ ಕರ್ನಾಟಕ ರಾಜ್ಯದ ನಿವಾಸಿಯಾಗಿರಬೇಕು.

೨. ಅರ್ಜಿದಾರರು ೧೮ ವರ್ಷದಿಂದ ೬೦ ವರ್ಷದ ವಯೋಮಾನದವರಾಗಿರಬೇಕು.

೩. ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನವು ಗ್ರಾಮೀಣ ಪ್ರದೇಶವಾದಲ್ಲಿ ರೂ.೧,೫೦,೦೦೦/- ಹಾಗೂ ನಗರ ಪ್ರದೇಶವಾದಲ್ಲಿ ರೂ.೨,೦೦,೦೦೦/- ಮಿತಿಯೊಳಗಿರಬೇಕು.

೪. ಅರ್ಜಿದಾರರ ಕುಟುಂಬದ ಯಾವುದೇ ಸದಸ್ಯರು ಸರ್ಕಾರಿ/ ಅರೇ ಸರ್ಕಾರಿ ಸಂಸ್ಥೆಯಲ್ಲಿ ನೌಕರಿಯಲ್ಲಿರಬಾರದು.

೫. ಅರ್ಜಿದಾರರು ಅಥವಾ ಅವರ ಕುಟುಂಬದವರು ಈ ಹಿಂದೆ ನಿಗಮದಿಂದ ಯಾವುದೇ ಸೌಲಭ್ಯ ಪಡೆದಿರಬಾರದು.

೬. ಜಿಲ್ಲೆಯಲ್ಲಿ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳ ಕಚೇರಿಯಲ್ಲಿ ಈಗಾಗಲೇ ನೋಂದಣಿ ಮಾಡಿಕೊಂಡ ಪರಿಶಿಷ್ಟ ಪಂಗಡದ ಅಂಗವಿಕಲ ಫಲಾನುಭವಿಗಳ ಲಭ್ಯವಿರುವ ಪಟ್ಟಿಯಿಂದ ವಿಕಲಚೇತನರನ್ನು ನೇರವಾಗಿ ಸಂದರ್ಶನ ಮಾಡಿ ಸೌಲಭ್ಯ ಕಲ್ಪಿಸುವುದು.

೭. ಗಂಗಾ ಕಲ್ಯಾಣ ಯೋಜನೆಯಡಿ ಸೌಲಭ್ಯ ಪಡೆಯಲು ಫಲಾಪೇಕ್ಷೆಯು ಸಣ್ಣ ಮತ್ತು ಅತಿ ಸಣ್ಣ ರೈತರಾಗಿರಬೇಕು.

೮. ಭೂ ಒಡೆತನ ಯೋಜನೆಯಡಿ ಸೌಲಭ್ಯ ಪಡೆಯಲು ಫಲಾಪೇಕ್ಷಿಯು ಪರಿಶಿಷ್ಟ ಪಂಗಡದ ಭೂ ರಹಿತ ಮಹಿಳಾ ಕೃಷಿ ಕಾರ್ಮಿಕರಾಗಿರಬೇಕು.

೯. ಜಮೀನು ಮಾರಾಟ ಮಾಡುವ ಭೂ ಮಾಲೀಕರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿರಬಾರದು.

೧೦. ವಾಹನಗಳಿಗೆ ಸೌಲಭ್ಯ ಪಡೆಯಲು ಫಲಾಪೇಕ್ಷಿಗಳು ಡ್ರೈವಿಂಗ್ ಲೈಸೆನ್ಸ್‌ನೊಂದಿಗೆ ಬ್ಯಾಡ್ಜನ್ನು ಹೊಂದಿರಬೇಕು.

**ಫಲಾಪೇಕ್ಷಿಯು ಸಲ್ಲಿಸಬೇಕಾದ ದಾಖಲಾತಿಗಳು**

೧. ನಿಗದಿತ ನಮೂನೆಯಲ್ಲಿ ಅರ್ಜಿ

೨. ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ

೩. ಜಾತಿ ಪ್ರಮಾಣ ಪತ್ರ

೪. ಕುಟುಂಬದ ವಾರ್ಷಿಕ ವರಮಾನ ಪತ್ರ

೫. ಪಡಿತರ ಚೀಟಿ/ ಮತದಾರರ ಗುರುತಿನ ಚೀಟಿ/ ಆಧಾರ್ ಕಾರ್ಡ್‌ನ ಪ್ರತಿ

೬. ಯೋಜನಾ ವರದಿ/ ದರಪಟ್ಟಿ

೭. ವಾಹನವಾಗಿದ್ದಲ್ಲಿ, ಸಂಬಂಧಪಟ್ಟ (ಪ್ರಾದೇಶಿಕ ಸಾರಿಗೆ ಇಲಾಖೆಯಿಂದ) ವಾಹನ ಚಾಲನಾ ಪರವಾನಗಿ ಮತ್ತು ಬ್ಯಾಡ್ಜ್ ಪ್ರತಿ

೮. ಕೋರಿರುವ ಸೌಲಭ್ಯದ ಬಗ್ಗೆ ಹೊಂದಿರುವ ತರಬೇತಿ ಅಥವಾ ಅನುಭವದ ಪತ್ರ

**ಬೇಡ, ಮೇದ ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸ್ಥಿತ್ಯಂತರಗಳು**

ಬುಡಕಟ್ಟು ಸಮುದಾಯಗಳ ಮೂಲ ಕುಲಕಸುಬುಗಳೆಂದರೆ ಬೇಟೆಗಾರಿಕೆ ಮತ್ತು ಆಹಾರ ಸಂಗ್ರಹಣೆ, ಗೆಡ್ಡೆ, ಗೆಣಸು, ಸೊಪ್ಪು-ಸೆದೆಗಳಂತಹ ಆಹಾರಗಳನ್ನು ಸಂಗ್ರಹಿಸುವುದು, ಪ್ರಾಣಿ, ಪಕ್ಷಿಗಳು, ಜಲಚರಗಳನ್ನು ಬೇಟೆಯಾಡುವುದು, ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸುವುದು, ಗಿಡಮೂಲಿಕೆಗಳ ಸಂಗ್ರಹಣೆ, ಕಟ್ಟಿಗೆ ಕಡಿಯುವುದು, ಅರಣ್ಯ ಉತ್ಪನ್ನಗಳನ್ನು ಶೇಖರಿಸುವುದು, ಸೂಜಿ, ದಬ್ಬಣ, ಪಿನ್ನು, ಕಸ್ತೂರಿ, ಗೋರಂಜನ, ಕರಿಮಣಿ, ಹಾಲುಮಣಿ, ನವಿಲುತುಪ್ಪ, ಉಡದ ತುಪ್ಪ, ರುದ್ರಾಕ್ಷಿ, ಚೌಲಿ, ಪೀಪಿ, ಮುಂತಾದ ವಸ್ತುಗಳ ಮಾರಾಟ, ಬಿದಿರು, ಈಚಲು, ಬೊಂಬು, ಬೆತ್ತಗಳಿಂದ ಬುಟ್ಟಿ, ಕುಕ್ಕೆ, ತೊಟ್ಟಿಲು, ಮೀನು ಹಿಡಿಯುವ ಕುಳಿ, ಮೊರ, ರೊಟ್ಟಿ ಬುಟ್ಟಿ, ಬೀಸಣಿಕೆ, ಕುರ್ಚಿ, ಸೋಫಾ, ದಿವಾನ, ಚಾಪೆ, ಏಣಿ, ಮುಂತಾದ ವಸ್ತುಗಳ ತಯಾರಿಕೆ ಮಾಡುವುದಾಗಿದೆ. ಬೇಡರು ಸಾಮಾನ್ಯವಾಗಿ ಬೇಟೆಗಾರಿಕೆ ಮತ್ತು ಹೈನುಗಾರಿಕೆ, ವ್ಯವಸಾಯಗಳಲ್ಲಿ ತೊಡಗಿಕೊಂಡರೆ, ಮೇದರು ಬಿದಿರು, ಬೊಂಬು, ಬೆತ್ತಗಳಿಂದ ಕರಕುಶಲ ವಸ್ತುಗಳನ್ನು ತಯಾರಿಸುತ್ತಾರೆ. ಹಕ್ಕಿಪಿಕ್ಕಿಯರು ಕಾಡಿನ ಹಕ್ಕಿ-ಪಕ್ಷಿಗಳು, ಪ್ರಾಣಿಗಳನ್ನು ಬೇಟೆಯಾಡುವ ಮೂಲ ಕುಲಕಸುಬುಗಳನ್ನು ಹೊಂದಿದ್ದರು. ಆದರೆ ಸ್ವಾತಂತ್ರ್ಯನಂತರದ ಭಾರತದಲ್ಲಿ ವನ್ಯಜೀವಿ ಕಾಯ್ದೆ ಮತ್ತು ಅರಣ್ಯ ಕಾಯ್ದೆಯ ಪ್ರಕಾರ ಬೇಟೆಗಾರಿಕೆಯನ್ನು ನಿಷೇಧಿಸಲಾಗಿದೆ. ಅರಣ್ಯದಲ್ಲಿ ಮುಕ್ತವಾಗಿ ಓಡಾಡುವುದನ್ನು ನಿರ್ಬಂಧಿಸಲಾಗಿದೆ.

ಕಾಡಿನ ಮತ್ತು ಅರಣ್ಯಗಳಲ್ಲಿ, ಅರಣ್ಯಗಳ ಅಂಚಿನಲ್ಲಿ ವಾಸಿಸುತ್ತಿದ್ದಂತಹ, ಈ ಸಮುದಾಯಗಳನ್ನು ಜನವಸತಿ ಇರುವ ಪ್ರದೇಶಗಳಿಗೆ ಸ್ಥಳಾಂತರಿಸಲಾಗಿದೆ. ಬೇಡ ಸಮುದಾಯವು ಬುಡಕಟ್ಟು ಸಂಸ್ಕೃತಿಯನ್ನು ಹೊಂದಿದ್ದರೂ ಜನವಸತಿ ಇರುವ ಪ್ರದೇಶಗಳಲ್ಲೇ ವಾಸಿಸುತ್ತಿದ್ದಾರೆ. ಬೇಟೆಗಾರಿಕೆಯನ್ನು ಬಹುತೇಕವಾಗಿ

ನಿಲ್ಲಿಸಿ ವ್ಯವಸಾಯ, ಹೈನುಗಾರಿಕೆ ಮುಂತಾದ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಕೊಂಡಿದ್ದಾರೆ. ಮೇದರು ಕೂಡ ಕಾಡಿನ ಅಂಚಿನಲ್ಲಿ ವಾಸಿಸುತ್ತಿದ್ದಂತಹ ಸಮುದಾಯವಾಗಿದೆ. ಕಾಡಿನಲ್ಲಿ ಬಿದಿರು, ಬೊಂಬು, ಬೆತ್ತಗಳನ್ನು ಮುಕ್ತವಾಗಿ ಸಂಗ್ರಹಿಸಲು ಅರಣ್ಯ ಇಲಾಖೆಯಿಂದ ಕಠಿಣವಾದ ನಿರ್ಬಂಧಗಳು ಇರುವುದರಿಂದ ಅರಣ್ಯ ಇಲಾಖೆಯ ಮೂಲಕವೇ ಕಚ್ಚಾ ಉತ್ಪನ್ನಗಳನ್ನು ಕಾನೂನು ಪ್ರಕಾರವಾಗಿ ಸಂಗ್ರಹಿಸಬೇಕಾಗಿದೆ. ಸಾಕಷ್ಟು ಕಚ್ಚಾವಸ್ತುಗಳು ಲಭ್ಯವಾಗದೇ ಇರುವುದರಿಂದ ತಮ್ಮ ಮೂಲ ವೃತ್ತಿಗಳನ್ನು ತ್ಯಜಿಸಿ ಜೀವನೋಪಾಯಕ್ಕಾಗಿ ಬೇರೆ ಬೇರೆ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ವ್ಯವಸಾಯ ಮತ್ತು ಹೈನುಗಾರಿಕೆಗಳಲ್ಲೂ ತಮ್ಮನ್ನು ಮೇದರ ಸಮುದಾಯವು ತೊಡಗಿಸಿಕೊಂಡಿದೆ. ನಗರ ಪಟ್ಟಣಗಳಲ್ಲಿ ಮೇದರ ಬೀದಿ, ಮೇದರ ಕೇರಿಗಳಲ್ಲಿ ಪ್ರತ್ಯೇಕವಾಗಿ ವಾಸಿಸುವ ಈ ಸಮುದಾಯವು ಸಿಮೆಂಟ್, ಇಟ್ಟಿಗೆ, ಸಿಮೆಂಟ್ ಶೀಟುಗಳು, ಕಡಪದ ಕಲ್ಲು, ಮುಂತಾದ ಗೃಹೋಪಯೋಗಿ ವಸ್ತುಗಳ ಮಾರಾಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜೊತೆಗೆ ಇತರೇ ಖಾಸಗಿ ಉದ್ಯೋಗಗಳು, ಸರ್ಕಾರಿ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರೂ ಕೂಡ ಕಾಡಿನ, ಅರಣ್ಯಗಳ ಪ್ರದೇಶಗಳಲ್ಲಿ ವಾಸಿಸುತ್ತಿದ್ದಂತಹ ಸಮುದಾಯವಾಗಿದೆ. ವನ್ಯಜೀವಿ ಕಾಯ್ದೆ ಮತ್ತು ಅರಣ್ಯ ಕಾಯ್ದೆಗಳು, ಕಾನೂನುಗಳು, ನೀತಿಗಳ ಅನುಷ್ಠಾನದಿಂದಾಗಿ ಬಹಳ ಹಿಂದಿನ ಕಾಲದಿಂದಲೂ ಮುಕ್ತವಾಗಿ ಕಾಡಿನ ಪ್ರಾಣಿಗಳನ್ನು, ಪಕ್ಷಿಗಳನ್ನು ಬೇಟೆಯಾಡುತ್ತಿದ್ದಂತಹ ಉದ್ಯೋಗವನ್ನು ಸಂಪೂರ್ಣವಾಗಿ ನಿರ್ಬಂಧಿಸಲಾಗಿದೆ. ಒಂದು ವೇಳೆ ಕಾನೂನನ್ನು ಮೀರಿ ಕಾಡಿನ ಪ್ರಾಣಿ, ಪಕ್ಷಿಗಳನ್ನು ಬೇಟೆಯಾಡಿದರೆ, ಕಠಿಣ ಕಾನೂನು ಕ್ರಮಗಳನ್ನು ಕೈಗೊಳ್ಳಲು ಅವಕಾಶವಿದೆ. ಆದ್ದರಿಂದ ಹಕ್ಕಿಪಿಕ್ಕಿ ಸಮುದಾಯದವರನ್ನು ಕಾಡಿನ ಅಂಚಿನ ಪ್ರದೇಶಗಳಿಂದ ಸ್ಥಳಾಂತರಿಸಿ, ಪ್ರತ್ಯೇಕ ಬಯಲು ಭೂಪ್ರದೇಶಗಳನ್ನು ಸರ್ಕಾರವು ಕೊಟ್ಟಿದೆ. ಮೂಲ ಉದ್ಯೋಗಗಳನ್ನು ತೊರೆದು ವ್ಯವಸಾಯ, ಹೈನುಗಾರಿಕೆ, ಗೃಹ ಕೈಗಾರಿಕೆ, ವ್ಯಾಪಾರ, ವ್ಯವಹಾರದಂತಹ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಆಧುನಿಕ ಶಿಕ್ಷಣ ಸೌಲಭ್ಯಗಳನ್ನು ಪಡೆಯಲು ಹಕ್ಕಿಪಿಕ್ಕಿ ಸಮುದಾಯದವರು ಆಸಕ್ತಿಯನ್ನು ತೋರಿಸುತ್ತಿದ್ದಾರೆ. ಹಕ್ಕಿಪಿಕ್ಕಿಯರು ತಮ್ಮ ಮೂಲ ಸ್ಥಳಗಳನ್ನು ಅನಿವಾರ್ಯವಾಗಿ ತೊರೆಯಬೇಕಾದ ಅನಿವಾರ್ಯತೆಗೆ ತಮ್ಮನ್ನು ಒಡ್ಡಿಕೊಂಡಿದ್ದಾರೆ. ಬದಲಾದ ಕಾಲಘಟ್ಟದಲ್ಲಿ ಆಧುನಿಕತೆಗೆ ತಮ್ಮನ್ನು ಒಗ್ಗಿಸಿಕೊಳ್ಳುತ್ತಿದ್ದಾರೆ. ಶಿಕ್ಷಣದ ಅರಿವು, ಆರೋಗ್ಯದ ಅರಿವು, ಸ್ವಚ್ಛತೆಯ ಅರಿವು, ಜೀವನದ ಗುಣಮಟ್ಟದ ಸುಧಾರಣೆಗಳು ಇನ್ನೂ ಹೆಚ್ಚು ಹೆಚ್ಚು ಆಗಬೇಕಾದ ಅನಿವಾರ್ಯತೆ ಇದೆ. ಹಕ್ಕಿಪಿಕ್ಕಿ ಸಮುದಾಯವು ಆಧುನೀಕರಣ, ಜಾಗತೀಕರಣ ಮತ್ತು ನಗರೀಕರಣ ಪ್ರಕ್ರಿಯೆಗೆ ಹೊಂದಿಕೊಳ್ಳುತ್ತಿದ್ದಾರೆ. ಬೇಡ, ಮೇದ, ಹಕ್ಕಿಪಿಕ್ಕಿ, ಬುಡಕಟ್ಟು ಸಮುದಾಯಗಳು ಸಾಮಾಜಿಕವಾಗಿ ಬದಲಾವಣೆಯ ಪ್ರಕ್ರಿಯೆಯಲ್ಲಿವೆ.

ಅಧ್ಯಾಯ: ೬

# ಸಮಾರೋಪ

ಭಾರತ ದೇಶದಲ್ಲಿ ವಿವಿಧ ರಾಜ್ಯಗಳಲ್ಲಿರುವ ಪ್ರತಿಯೊಂದು ಬುಡಕಟ್ಟು ಸಮುದಾಯವೂ ಕೂಡ ತನ್ನದೇ ಆದ ಅನನ್ಯತೆ, ವಿಶಿಷ್ಟತೆ, ವಿಭಿನ್ನತೆಗಳನ್ನು ಹೊಂದಿದೆ. ಕರ್ನಾಟಕದಲ್ಲಿರುವ ವಿವಿಧ ಬುಡಕಟ್ಟು ಸಮುದಾಯಗಳೂ ಕೂಡ ತನ್ನದೇ ಆದ ವಿಶಿಷ್ಟ ಗುಣಲಕ್ಷಣಗಳನ್ನು ಒಳಗೊಂಡಿವೆ. ಚಿತ್ರದುರ್ಗ ಜಿಲ್ಲೆಯ ಪ್ರಮುಖ ಬುಡಕಟ್ಟು ಸಮುದಾಯಗಳಾದ ಬೇಡ ಬುಡಕಟ್ಟು ಸಮುದಾಯ, ಮೇದ(ಮೇದಾರ) ಬುಡಕಟ್ಟು ಸಮುದಾಯ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳನ್ನು ಸಾಮಾಜಿಕ ಅಧ್ಯಯನ ಮಾಡಲಾಗಿದೆ. ಈ ಮೂರು ಬುಡಕಟ್ಟು ಸಮುದಾಯಗಳು ವಿಶಿಷ್ಟ ಮತ್ತು ವಿಭಿನ್ನತೆಯ ಗುಣಲಕ್ಷಣಗಳನ್ನು ಒಳಗೊಂಡಿವೆ. ಬೇಡಬುಡಕಟ್ಟು ಸಮುದಾಯದ ಜೀವನ ವಿಧಾನ, ಮೇದ ಬುಡಕಟ್ಟು ಸಮುದಾಯದ ಜೀವನ ವಿಧಾನ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಜೀವನ ವಿಧಾನವು ಸಂಪೂರ್ಣವಾಗಿ ವೈವಿಧ್ಯತೆಯನ್ನು ಹೊಂದಿವೆ. ಸಂಶೋಧನಾ ಅಧ್ಯಯನಕ್ಕೆ ಬೇಡ, ಮೇದ ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳನ್ನು ಆಯ್ದುಕೊಂಡು ಈ ಸಮುದಾಯಗಳೊಂದಿಗೆ ಅತಿ ಹೆಚ್ಚಾಗಿ ಸಹಭಾಗಿತ್ವ ಅವಲೋಕನ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಮಾನವಶಾಸ್ತ್ರೀಯ ಅಧ್ಯಯನದಲ್ಲಿ ಅವಲೋಕನ ವಿಧಾನ, ಸಹಭಾಗಿತ್ವ ಅವಲೋಕನ ವಿಧಾನಕ್ಕೆ ಅತಿ ಹೆಚ್ಚಿನ ಪ್ರಾಮುಖ್ಯತೆ ಇದೆ.

ಬುಡಕಟ್ಟು ಸಮುದಾಯಗಳ ಅಧ್ಯಯನವು ಮಾನವಶಾಸ್ತ್ರೀಯ ನೆಲೆಯಲ್ಲಿ ಸವಾಲಿನ ಕಾರ್ಯವಾಗಿದೆ. ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೆ ಸಾವಿರಾರು ವರ್ಷಗಳ ಪೂರ್ವ ಇತಿಹಾಸವಿರುತ್ತದೆ. ಚಾರ್ಲ್ಸ್ ಡಾರ್ವಿನ್ ಅವರ ವಿಕಾಸ ಸಿದ್ಧಾಂತದ ಪ್ರಕಾರ 'ಉಳಿವಿಗಾಗಿ ಹೋರಾಟ; ಬಲಿಷ್ಠರ ಉಳಿವು' ಎನ್ನುವುದು ಸಾರ್ವಕಾಲಿಕ ಸತ್ಯವಾಗಿದೆ. ಒಂದು ಬುಡಕಟ್ಟು ಸಮುದಾಯದ ಇಂದಿನ ಜೀವನ ಕ್ರಮವನ್ನು ಅಧ್ಯಯನ ಮಾಡುವಾಗ, ಆ ಬುಡಕಟ್ಟು ಸಮುದಾಯವು ಪ್ರಸ್ತುತ ದಿನಗಳಲ್ಲಿ ಜೀವನ ನಡೆಸಲು ಹಿಂದಿನ ಸಾವಿರಾರು ವರ್ಷಗಳ ಜೀವನಕ್ರಮವನ್ನು ಉಳಿಸಿಕೊಂಡು ಬಂದಿರುತ್ತದೆ. ತನ್ನ ಜನಾಂಗವನ್ನು ಇತರೇ ಜನಾಂಗಗಳೊಂದಿಗಿನ ಕಾದಾಟದಲ್ಲಿ ಉಳಿಸಿಕೊಂಡು ಬಂದಿರುವುದು

ಒಂದು ಸಾಧನೆಯೇ ಆಗಿರುತ್ತದೆ. ಭಾರತದ ಇತಿಹಾಸವನ್ನು ಸಮಗ್ರವಾಗಿ ಅಧ್ಯಯನ ಮಾಡಿದಾಗ ಭಾರತವು ನಿರಂತರವಾಗಿ ವಿದೇಶಿಯರ ದಾಳಿಗೆ ಒಳಗಾಗುತ್ತಲೇ ಬಂದಿದೆ. ಭಾರತದ ಮೂಲ ನಿವಾಸಿಗಳನ್ನು ಸಾವಿರಾರು ವರ್ಷಗಳ ವಿದೇಶಿ ಆಕ್ರಮಣಗಳನ್ನು ಮಾಡಿ ಹತ್ಯೆ ಮಾಡಲಾಗಿದೆ. ಭಾರತದ ಸ್ವಾತಂತ್ರ್ಯಪೂರ್ವದಲ್ಲಿ ಸಾವಿರಾರು ವರ್ಷಗಳ ಇತಿಹಾಸದಲ್ಲಿ ನಿರಂತರ ಯುದ್ಧಗಳು, ಕಾದಾಟಗಳು, ಘರ್ಷಣೆಗಳು ನಡೆದು ಒಂದು ಕಡೆ ವಾಸಿಸುತ್ತಿದ್ದಂತಹ ಬುಡಕಟ್ಟು ಸಮುದಾಯಗಳು ತಮ್ಮ ಅಸ್ತಿತ್ವಕ್ಕಾಗಿ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋದವು. ಕೆಲವು ಸಮುದಾಯಗಳು ಶಾಶ್ವತವಾಗಿ ಕಾಡುಗಳಲ್ಲಿ ವಾಸಿಸತೊಡಗಿದವು. ಅನ್ಯರ ದಾಳಿಯ ಭೀತಿಗೆ ಒಳಗಾಗಿ ಜನಸಂಪರ್ಕವನ್ನು ಕಡಿದುಕೊಂಡು ಕಾಡುಗಳಲ್ಲಿ ಗುಪ್ತವಾಗಿ ವಾಸಿಸತೊಡಗಿದವು. ಕಾಲಕ್ರಮೇಣ ಅಲ್ಲಿಯೇ ಬುಡಕಟ್ಟು ಸಮುದಾಯಗಳು ನೆಲೆನಿಂತವು.

ಪ್ರಸ್ತುತ ಅಧ್ಯಯನದಲ್ಲಿ ಬೇಡ ಬುಡಕಟ್ಟು ಸಮುದಾಯ, ಮೇದ ಬುಡಕಟ್ಟು ಸಮುದಾಯ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳನ್ನು ಸಾಮಾಜಿಕ ಅಧ್ಯಯನ ಮಾಡಲಾಗಿದೆ. ಪ್ರತಿಯೊಂದು ಅಧ್ಯಯನವೂ ಕೂಡ ತನ್ನದೇ ಆದ ಮಿತಿಗಳನ್ನು ಹೊಂದಿರುತ್ತದೆ. ಪ್ರಸ್ತುತ ಸಂಶೋಧನಾ ಅಧ್ಯಯನವು ಸಾಮಾಜಿಕ ಅಧ್ಯಯನದ ಮಿತಿಯನ್ನು ಹೊಂದಿದೆ. ಬೇಡ, ಮೇದ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳನ್ನು ಆ ಬುಡಕಟ್ಟು ಸಮುದಾಯಗಳ ಹಿನ್ನೆಲೆ, ಇದುವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ, ಬುಡಕಟ್ಟು ಸಮುದಾಯದ ಮೂಲ ಮತ್ತು ಪ್ರಸಾರ, ಬುಡಕಟ್ಟು ಸಮುದಾಯದ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆ, ಭೌಗೋಳಿಕತೆ, ಚಲನೆ, ಪ್ರಸಾರದ ನೆಲೆಗಳು, ಕುಲಗೋತ್ರಗಳು, ವಂಶೋತ್ಪತ್ತಿಯ ವಿಚಾರಗಳು, ಬುಡಕಟ್ಟು ಸಮುದಾಯದ ಸಾಮಾಜಿಕ ಜೀವನ ವಿಧಾನ, ಸಾಮಾಜಿಕ ವ್ಯವಸ್ಥೆ, ಒಳಾಡಳಿತ ವ್ಯವಸ್ಥೆ, ಕುಲಪಂಚಾಯಿತಿಯ ರಚನೆ, ಪಂಚಾಯಿತಿ ಕಾರ್ಯಗಳು, ನ್ಯಾಯನಿರ್ಣಯಗಳು, ಶಿಕ್ಷೆ ಮತ್ತು ದಂಡನೆಗಳು, ಕೌಟುಂಬಿಕ ವ್ಯವಸ್ಥೆ, ರಕ್ತಸಂಬಂಧಗಳು, ಬಂಧುತ್ವ, ಮದುವೆ ಮತ್ತು ಕುಟುಂಬ, ಮದುವೆ ಪದ್ಧತಿ, ಮದುವೆ ಪ್ರಕಾರಗಳು, ಜೀವನ ಸಂಗಾತಿಗಳ ಆಯ್ಕೆ, ಮದುವೆ ನಿಶ್ಚಯಕಾರ್ಯ, ಮದುವೆ ಸಮಾರಂಭ, ಮಾಂಗಲ್ಯಧಾರಣೆ, ಗೃಹಪ್ರವೇಶದ ಕಾರ್ಯಗಳು, ಬುಡಕಟ್ಟು ಸಮುದಾಯದ ಆರಾಧನೆ, ಆಚರಣೆ, ನಂಬಿಕೆಗಳು, ಸಂಪ್ರದಾಯಗಳು, ಜನನ, ಋತುಮತಿ, ಸೀಮಂತ, ಮದುವೆ, ಮರಣ ಮುಂತಾದ ಆಚರಣೆಗಳು, ಧಾರ್ಮಿಕ ವಿಧಿ–ವಿಧಾನಗಳು, ದೇವರು, ದೇವತೆಗಳ ಹಬ್ಬ ಹರಿದಿನಗಳು, ಸಾಂಸ್ಕೃತಿಕ ಆಚರಣೆಗಳು ದೇವರು ಮತ್ತು ದೇವತೆಗಳ ಆರಾಧನೆ, ಹಿರಿಯರ ಪೂಜೆ, ಹಬ್ಬ, ಜಾತ್ರೆ, ಉತ್ಸವಗಳು, ಆಹಾರ ಸೇವೆ, ಆಚಾರ, ವಿಧಿನಿಯಮಗಳು, ಜನಪದ ನಾಟಿ ವೈದ್ಯ ಪದ್ಧತಿ, ಜನಪದ ನಂಬಿಕೆಗಳು, ಬುಡಕಟ್ಟು ಸಮುದಾಯದ ಆರ್ಥಿಕ ಜೀವನ, ಮೂಲಕಸುಬು, ಬಳಸುವ ಉಪಕರಣಗಳು, ವೃತ್ತಿಗಳು, ಕೃಷಿ, ಇತರೆ ಕುಲಕಸುಬುಗಳು, ಆಹಾರ ಸಂಗ್ರಹಣೆ, ಬುಡಕಟ್ಟು ಸಮುದಾಯದ ವಸತಿ ವ್ಯವಸ್ಥೆ, ಅಡುಗೆ, ಉಡುಗೆ–ತೊಡುಗೆ, ಬುಡಕಟ್ಟು ಸಮುದಾಯದ ಭಾಷೆ ಮತ್ತು ಸಾಹಿತ್ಯ, ಪುರಾಣಗಳು, ಸ್ಥಳನಾಮಗಳು, ಕಥೆಗಳು, ಕಾವ್ಯಗಳು, ಗಾದೆಗಳು, ಒಗಟುಗಳು, ಬುಡಕಟ್ಟು

ಸಮುದಾಯದ ಪ್ರದರ್ಶನಾತ್ಮಕ ಕಲೆಗಳು, ಜನಪದ ನೃತ್ಯಗಳು, ಮೇಳಗಳು, ರಂಗಪ್ರದರ್ಶನಗಳು, ಜನಪದ ಕ್ರೀಡೆಗಳು, ವಾದ್ಯಗಳು ಜನಪದ ಕುಶಲ ಕಲೆಗಳು, ಬುಡಕಟ್ಟು ಸಮುದಾಯಗಳ ಸಮಸ್ಯೆಗಳು ಮತ್ತು ಸವಾಲುಗಳು, ಬುಡಕಟ್ಟು ಸಮುದಾಯಗಳ ಮೇಲೆ ಆಗಿರುವ ಆಧುನೀಕತೆಯ ಪ್ರಭಾವ, ಸಾಮಾಜಿಕ ಪರಿವರ್ತನೆ ಮುಂತಾದ ಅಂಶಗಳ ಅಧ್ಯಯನವನ್ನು ಮಾಡಲಾಗಿದೆ. ಬೇಡ, ಮೇದ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಮೇಲೆ ಇನ್ನೂ ಹೆಚ್ಚಿನ ಅಧ್ಯಯನಗಳು ನಡೆಯಬೇಕಾದ ಅಗತ್ಯತೆ ಇದೆ. ಬೇಡ, ಮೇದ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸಮಗ್ರ ಅಧ್ಯಯನಕ್ಕಿಂತ ಒಂದೊಂದು ಬುಡಕಟ್ಟು ಸಮುದಾಯದ ಪ್ರತ್ಯೇಕ ಮತ್ತು ಸಮಗ್ರ ಅಧ್ಯಯನವು ಸೂಕ್ತವಾದುದು. ಒಂದು ಬುಡಕಟ್ಟು ಸಮುದಾಯದ ಅಧ್ಯಯನವು ಹೊಸ ಹೊಸ ಆಲೋಚನೆಗಳನ್ನು, ವಿಭಿನ್ನ ಒಳನೋಟಗಳನ್ನು ನೀಡಿ ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಪ್ರೇರಣಾಶಕ್ತಿಯನ್ನು ನೀಡುತ್ತದೆ.

**ಅಧ್ಯಯನದ ಮೂಲಕ ಕಂಡುಕೊಂಡ ಮುಖ್ಯ ಅಂಶಗಳು ಅಥವಾ ಫಲಿತಗಳು**

೧. ಬೇಡ ಬುಡಕಟ್ಟು ಸಮುದಾಯದಲ್ಲಿ ಶಿಕ್ಷಣವನ್ನು ಪಡೆಯುವುದರ ಬಗ್ಗೆ ಸಂಪೂರ್ಣ ಅರಿವು ಇಲ್ಲ.

೨. ಬೇಡ ಸಮುದಾಯವು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಜಾರಿಗೊಳಿಸುವ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಯೋಜನೆಗಳ ಬಗ್ಗೆ ಸಂಪೂರ್ಣ ತಿಳುವಳಿಕೆ ಇಲ್ಲ.

೩. ಬೇಡ ಸಮುದಾಯದಲ್ಲಿ ಶಿಕ್ಷಣದ ಕೊರತೆ, ಬಡತನ, ನಿರುದ್ಯೋಗದ ಸಮಸ್ಯೆ, ಆರ್ಥಿಕ ಸಮಸ್ಯೆ, ಆರೋಗ್ಯ ಮತ್ತು ನೈರ್ಮಲ್ಯದ ಕುರಿತ ತಿಳುವಳಿಕೆಯ ಜ್ಞಾನದ ಕೊರತೆ ಇದೆ.

೪. ಬೇಡ ಸಮುದಾಯವು ತಮ್ಮ ಪಾರಂಪರಿಕ ವೃತ್ತಿಗಳು, ಉದ್ಯೋಗಗಳಿಂದ ವಿಮುಖರಾಗಿ ಇತರೇ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಕೇಂದ್ರಸರ್ಕಾರ, ರಾಜ್ಯಸರ್ಕಾರ, ಖಾಸಗಿ ಕ್ಷೇತ್ರಗಳಲ್ಲಿ ಉದ್ಯೋಗಗಳನ್ನು ಮಾಡುತ್ತಿದ್ದಾರೆ.

೫. ಬೇಡ ಸಮುದಾಯವು ಆಧುನಿಕ ಶಿಕ್ಷಣ ಪಡೆಯಲು ಉತ್ಸುಕವಾಗಿದೆ. ಆಧುನೀಕತೆಯ ಕಡೆಗೆ ಆಕರ್ಷಿತರಾಗಿ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳಲು ಶ್ರಮಿಸುತ್ತಿದ್ದಾರೆ.

೬. ಮೇದ ಬುಡಕಟ್ಟು ಸಮುದಾಯದಲ್ಲಿ ಶಿಕ್ಷಣದ ಕೊರತೆ ಇದೆ. ಶಿಕ್ಷಣದಿಂದ ಆಗುವ ಅನುಕೂಲತೆಗಳ ಬಗ್ಗೆ ಸಂಪೂರ್ಣ ತಿಳುವಳಿಕೆ ಇಲ್ಲ. ತಿಳುವಳಿಕೆ ಇರುವವರು ಉನ್ನತ ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದಾರೆ.

೭. ಮೇದ ಬುಡಕಟ್ಟು ಸಮುದಾಯದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಜಾರಿಗೊಳಿಸುವ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಯೋಜನೆಗಳ ಬಗ್ಗೆ ಸರಿಯಾದ ಮಾಹಿತಿಯಿಲ್ಲ. ಮಾಹಿತಿಯ ಕೊರತೆಯಿಂದ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದಾರೆ.

೮. ಮೇದ ಬುಡಕಟ್ಟು ಸಮುದಾಯದಲ್ಲಿ ಶಿಕ್ಷಣದ ಕೊರತೆ, ನಿರುದ್ಯೋಗ, ಬಡತನದ ಜೀವನ, ಆರ್ಥಿಕವಾಗಿ ಸಮಸ್ಯೆ, ಆರೋಗ್ಯ ಸಂಬಂಧಿತವಾದ ಹಾಗೂ ಸ್ವಚ್ಛತೆ ಮತ್ತು ನೈರ್ಮಲ್ಯದ ಸಮಸ್ಯೆಗಳಿವೆ.

೯. ಮೇದ ಸಮುದಾಯದ ಪಾರಂಪರಿಕ ವೃತ್ತಿಗಳಿಗೆ ಕಚ್ಚಾವಸ್ತುಗಳ ಲಭ್ಯತೆಯಲ್ಲಿ ಕೊರತೆಗಳಿವೆ. ಪಾರಂಪರಿಕವಾದ ಉದ್ಯೋಗಗಳನ್ನು ಬಿಟ್ಟು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಖಾಸಗಿ ಉದ್ಯೋಗಗಳನ್ನು ಮಾಡಲು ಉತ್ಸಾಹ ತೋರುತ್ತಿದ್ದಾರೆ.

೧೦. ಮೇದ ಸಮುದಾಯವು ಆಧುನೀಕತೆಯ ಪ್ರಭಾವಕ್ಕೆ ಒಳಗಾಗಿದೆ. ಪಾಶ್ಚಿಮಾತ್ಯ ಸಂಸ್ಕೃತಿಯ ಅನುಕರಣೆ ಕಂಡುಬರುತ್ತಿದೆ. ತಮ್ಮ ಜೀವನದ ಅಗತ್ಯತೆಗಳನ್ನು ಪೂರೈಸಿಕೊಳ್ಳಲು ನಗರ, ಪಟ್ಟಣಗಳಲ್ಲಿ ವಿವಿಧ ವೃತ್ತಿಗಳನ್ನು ಮಾಡುತ್ತಿರುವುದು ಕಂಡುಬರುತ್ತಿದೆ.

೧೧. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ಮುಖ್ಯವಾಗಿ ಶಿಕ್ಷಣದ ಸಮಸ್ಯೆಯಿದೆ. ಯಾವಾಗಲೂ ವಲಸೆಯ ಜೀವನವನ್ನು ಅವಲಂಬಿಸಿದ ಇವರು ಶಿಕ್ಷಣದ ಮಹತ್ವದ ಬಗ್ಗೆ ತಿಳುವಳಿಕೆಯ ಕೊರತೆ ಇದೆ.

೧೨. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಜಾರಿಯಾಗುವ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಯೋಜನೆಗಳ ಬಗ್ಗೆ ತಿಳುವಳಿಕೆಯ ಕೊರತೆ ಇದೆ.

೧೩. ಹಕ್ಕಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ಶಿಕ್ಷಣದ ಕೊರತೆ, ಅಲೆಮಾರಿತನದ ಜೀವನ, ಪಾರಂಪರಿಕ ವೃತ್ತಿಗಳನ್ನು ಮಾಡಲು ಸಮಸ್ಯೆಗಳು, ಅರಣ್ಯನೀತಿಗಳ ಅನುಷ್ಠಾನದಿಂದ ಪಾರಂಪರಿಕ ವೃತ್ತಿಯಾದ ಬೇಟೆಯನ್ನು ಮಾಡಲು ಆಗುವುದಿಲ್ಲ. ಆರೋಗ್ಯಕ್ಕೆ ಸಂಬಂಧಿಸಿದಂತಹ ಸ್ವಚ್ಛತೆ ಮತ್ತು ನೈರ್ಮಲ್ಯದ ಸಮಸ್ಯೆಗಳಿವೆ.

೧೪. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಯಾವಾಗಲೂ ವಲಸೆಯ ಜೀವನ ಮಾಡುವುದರಿಂದ ಒಂದು ಕಡೆ ನೆಲೆ ನಿಲ್ಲುವ ಸಮಸ್ಯೆಯನ್ನು ಎದುರಿಸುತ್ತದೆ.

೧೫. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಮೇಲೆ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ ಆಗಿದೆ. ಆಧುನಿಕ ಸಂಸ್ಕೃತಿಯ ಜೀವನ ನಡೆಸುತ್ತಿರುವುದು ಕಂಡುಬರುತ್ತಿದೆ. ಉಡುಗೆ, ತೊಡುಗೆಗಳಲ್ಲಿ ಬದಲಾವಣೆಗಳಾಗುತ್ತಿವೆ.

೧೬. ಬೇಡ ಬುಡಕಟ್ಟು ಸಮುದಾಯವು ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ, ಸಮುದಾಯದ ಅಭಿವೃದ್ಧಿಗಾಗಿ ಶ್ರಮಿಸುತ್ತಿದೆ.

೧೭. ಮೇದ ಬುಡಕಟ್ಟು ಸಮುದಾಯವು ಕೂಡ ವಿವಿಧ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳುತ್ತಿದೆ. ಮುಖ್ಯವಾಗಿ ಯುವಕರು ಮುಂದೆ ಒಂದು ಸಂಘ-ಸಂಸ್ಥೆಗಳ ಮೂಲಕ ತಮ್ಮ ಶೈಕ್ಷಣಿಕ, ಉದ್ಯೋಗ, ಆರ್ಥಿಕತೆ, ಸಾಂಸ್ಕೃತಿಕತೆ, ರಾಜಕೀಯ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದಲು ಶ್ರಮಿಸುತ್ತಿದ್ದಾರೆ.

೧೮. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಒಂದು ಕಡೆ ನೆಲೆ ನಿಂತು ವಾಸಿಸುವ ಆಸಕ್ತಿಯನ್ನು ಹೊಂದಿದೆ. ಅಲೆಮಾರಿ ಜೀವನದಿಂದ ಈ ಸಮುದಾಯ ಅನೇಕ ಸಮಸ್ಯೆಗಳನ್ನು ಅನುಭವಿಸುತ್ತಿರುವುದರಿಂದ ಒಂದು ನಿರ್ದಿಷ್ಟ ಸ್ಥಳದಲ್ಲಿ ವಾಸ ಮಾಡುವ, ಬೇರೆ-ಬೇರೆ ಉದ್ಯೋಗಗಳನ್ನು ಮಾಡುತ್ತಾ ಜೀವನ ನಡೆಸುವ ಆಸಕ್ತಿಯನ್ನು ಹೊಂದಿದೆ.

೧೯. ಬೇಡ ಬುಡಕಟ್ಟು ಸಮುದಾಯದ ಮೇಲೆ ಆಧುನಿಕ ಸಂಸ್ಕೃತಿಯ ಪ್ರಭಾವ ಹೆಚ್ಚಾಗಿದೆ. ಹೆಚ್ಚಾಗಿ ಯುವ ಜನಾಂಗವು ಆಧುನೀಕರಣ, ನಗರೀಕರಣ, ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿದೆ. ಸಾಮಾಜಿಕ ಪರಿವರ್ತನೆ ಆಗುತ್ತಿದೆ.

೨೦. ಮೇದರ ಬುಡಕಟ್ಟು ಸಮುದಾಯ, ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಮೇಲೂ ಆಧುನಿಕ ಸಂಸ್ಕೃತಿಯ ಪ್ರಭಾವ ಹೆಚ್ಚಾಗಿದೆ. ತಮ್ಮ ಸಾಮಾಜಿಕ ಜೀವನದ ಅನಿವಾರ್ಯತೆ ಮತ್ತು ಅಗತ್ಯಗಳಿಗೆ ತಕ್ಕಂತೆ ಸಾಮಾಜಿಕ ಪರಿವರ್ತನೆ ಕಂಡುಬರುತ್ತಿದೆ. ಆಧುನೀಕರಣ, ನಗರೀಕರಣ, ಜಾಗತೀಕರಣದ ಪ್ರಭಾವವು ಈ ಸಮುದಾಯಗಳ ಮೇಲೆ ಆಗಿದೆ.

# ಅನುಬಂಧಗಳು

## ೧. ಪರಾಮರ್ಶನ ಗ್ರಂಥಗಳು


೧. ಅಂಬಳಿಕೆ ಹಿರಿಯಣ್ಣ ೧೯೯೪, ಬುಡಕಟ್ಟು ಜನರ ಬದಲಾಗುತ್ತಿರುವ ಆರ್ಥಿಕ ಜೀವನ, ಜಾನಪದ ಕೆಲವು ಅಧ್ಯಯನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨. ಅನಂತಕೃಷ್ಣ ಅಯ್ಯರ್, ೧೯೩೦, ದ ಮೈಸೂರ್ ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೩. ಅನಂತಕೃಷ್ಣ ಅಯ್ಯರ್, ೧೯೯೮, ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್, ಮಿಥಲ್ ಪಬ್ಲಿಕೇಷನ್ಸ್, ನ್ಯೂ ದೆಹಲಿ,

೪. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ೧೯೯೦, ಸಂ., ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು

೫. ಇಂದಿರಾ ಹೆಗ್ಗಡೆ, ೨೦೦೪, ಬಂಟರು ಒಂದು ಸಾಮಾಜೋ-ಸಾಂಸ್ಕೃತಿಕ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೬. ಈಶ್ವರಪ್ಪ ಎಂ.ಜಿ., ೧೯೮೨, ಮ್ಯಾಸಬೇಡರು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೭. ಕೃಷ್ಣಮೂರ್ತಿ ಹನೂರು, ೧೯೯೩, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೮. ಕಪನಿಗೌಡ ಎಲ್.ಎನ್., ೧೯೮೫, ಗುಡ್ಡಗಾಡು ಜನಾಂಗ ಅಥವಾ ಆದಿವಾಸಿಗಳು, ಮಾನವಿಕ ಕರ್ನಾಟಕ, ಸಂ.೧೫, ಸಂ.೩, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೯. ಕಾಳೇಗೌಡ ನಾಗವಾರ ಮತ್ತು(ಸಂ)ಬೋರಲಿಂಗಯ್ಯ ಹಿ.ಚಿ., ೨೦೦೦, ಗಿರಿಜನ ಕಾವ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೦. ಕಾಳೇಗೌಡ ನಾಗವಾರ(ಸಂ) ಮತ್ತು ಹುಚ್ಚಪ್ಪ ಮಾಸ್ತರ, ೨೦೦೦, ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೧. ಕೇಶವನ್ ಪ್ರಸಾದ್(ಸಂ), ೧೯೯೬, ಮಲೆಮಾದೇಶ್ವರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ಕೇತ್ಕರ್ ಎಸ್.ವಿ., ೧೯೦೯, ಹಿಸ್ಟರಿ ಆಫ್ ಕಾಸ್ಟ್ ಇನ್ ಇಂಡಿಯಾ, ದೆಹಲಿ

